# ರಾಷ್ಟ್ರೀಯ ಮೂಲ ಶಿಕ್ಷಣ

ಜಾಕೀರ್ ಹುಸೇನ್ ಸಮಿತಿ ವರದಿ

ಮತ್ತು

ವಿಸ್ತೃತ ಪಠ್ಯಕ್ರಮ

ಮಹಾತ್ಮ ಗಾಂಧಿ ಅವರ ಮುನ್ನುಡಿಯೊಂದಿಗೆ

## ಪರಿವಿಡಿ

7. ಸಂಗೀತ
8. ಹಿಂದೂಸ್ಥಾನಿ

**ಭಾಗ III ಶಿಕ್ಷಕರ ತರಬೇತಿ**

a. ಶಿಕ್ಷಕರ ತರಬೇತಿ
b. ಶಿಕ್ಷಕರ ಸಂಪೂರ್ಣ ತರಬೇತಿಗೆ ಪಠ್ಯಕ್ರಮ
c. ಶಿಕ್ಷಕರ ಅಲ್ಪಾವಧಿ ತರಬೇತಿಗೆ ಪಠ್ಯಕ್ರಮ

**ಭಾಗ IV ಪರೀಕ್ಷೆಗಳ ಮೇಲ್ವಿಚಾರಣೆ**

1. ಮೇಲ್ವಿಚಾರಣೆ
2. ಪರೀಕ್ಷೆಗಳು

**ಭಾಗ V ಆಡಳಿತ**

1. ಆಡಳಿತ
   ಸಮಿತಿಯ ಸದಸ್ಯರಿಂದ ಮಹಾತ್ಮರಿಗೊಂದು ಪತ್ರ

# ವಿಸ್ತೃತ ಪಠ್ಯಕ್ರಮ

1. ಮೂಲ ಕೌಶಲ್ಯ
   ಕೃಷಿ
   ನೂಲುವುದು ಮತ್ತು ನೇಯುವುದು
   ಕಾರ್ಡ್ ಬೋರ್ಡ್, ಮರ ಮತ್ತು ಲೋಹ
2. ಮಾತೃಭಾಷೆ ಮತ್ತು ಹಿಂದೂಸ್ಥಾನಿ
3. ಗಣಿತ
4. ಸಾಮಾಜಿಕ ಅಧ್ಯಯನ
5. ಸಾಮಾನ್ಯ ವಿಜ್ಞಾನ
6. ಚಿತ್ರಕಲೆ
7. ನೂಲುವುದು ಮತ್ತು ನೇಯುವಂತಹ ಮೂಲ ಕೌಶಲ್ಯದೊಡನೆ ಸಹ ಸಂಬಂಧಿಸುವ ಸಾಧ್ಯತೆ
   ಅನುಬಂಧ A
8. ಸಮನ್ವಯ ಯೋಜನೆಯ ಒಂದು ನಕಾಶೆ

# ಮುನ್ನುಡಿ

ಡಾ. ಜಾಕೀರ್ ಹುಸೇನ್ ಮತ್ತು ಅವರ ಸಮಿತಿಯವರಿಂದ 'ರಾಷ್ಟ್ರೀಯ ಮೂಲ ಶಿಕ್ಷಣ' ಎಂದು ಕರೆಯಲ್ಪಟ್ಟಿರುವ ಈ ಯೋಜನೆ ಭಾರತ ಮತ್ತು ಹೊರಗಿನ ದೇಶಗಳಲ್ಲಿ ಸಾಕಷ್ಟು ಉತ್ಸಾಹ ಮತ್ತು ಆಸಕ್ತಿಯನ್ನು ಕೆರಳಿಸಿದೆ. ಈ ಪುಸ್ತಕದ ಮೊದಲ ಸಾವಿರ ಪ್ರತಿಗಳು ಈಗಾಗಲೇ ಮಾರಾಟವಾಗಿರುವುದು ಈ ಅಂಶವನ್ನು ಸಾಬೀತುಪಡಿಸುತ್ತದೆ. ಆದರೂ ಗ್ರಾಮೀಣ ಕರಕೌಶಲ್ಯಗಳ ಮೂಲಕ ರಾಷ್ಟ್ರೀಯ ಗ್ರಾಮಿಣ ಶಿಕ್ಷಣ ಎಂಬ ಶೀರ್ಷಿಕೆ ಅಷ್ಟು ಆಕರ್ಷಕವಲ್ಲದಿದ್ದರೂ ಹೆಚ್ಚು ಸೂಕ್ತ ವಿವರಣೆ. 'ಗ್ರಾಮೀಣ' ಎಂಬ ಪರಿಕಲ್ಪನೆ ಉನ್ನತ ಅಥವಾ ಇಂಗ್ಲಿಷ್ ವಿದ್ಯಾಭ್ಯಾಸ ಎಂದು ಕರೆಯಲ್ಪಡುವ ವ್ಯವಸ್ಥೆಯನ್ನು ಒಳಗೊಂಡಿರುವುದಿಲ್ಲ. 'ರಾಷ್ಟ್ರೀಯ' ಎಂಬ ಪರಿಕಲ್ಪನೆ ಪ್ರಸ್ತುತದಲ್ಲಿ ಸತ್ಯ ಮತ್ತು ಅಹಿಂಸೆಯನ್ನು ಸೂಚಿಸುತ್ತದೆ. 'ಗ್ರಾಮೀಣ ಕರಕೌಶಲ್ಯಗಳ ಮೂಲಕ' ಎಂದರೆ ತಮ್ಮ ಹಳ್ಳಿಗಳಲ್ಲಿ ಕೆಲವು ಆಯ್ದ ಕರಕೌಶಲ್ಯಗಳ ಮೂಲಕ ಮತ್ತು ಬಲವಂತವಾಗಿ ಹೇರಲ್ಪಟ್ಟ ಹೊರಗಿನ ಶಕ್ತಿಗಳಿಂದ ಮುಕ್ತವಾದ ವಾತಾವರಣದಲ್ಲಿ ಹಳ್ಳಿ ಮಕ್ಕಳ ಸಮಸ್ತ ಸಹಜ ಶಕ್ತಿಯನ್ನು ಅಭಿವ್ಯಕ್ತಪಡಿಸಲು ಅವಕಾಶ ಕಲ್ಪಿಸುವ ಶಿಕ್ಷಣವನ್ನು ಶಿಕ್ಷಕರು ನೀಡುತ್ತಾರೆಂದು ಈ ಯೋಜನೆಯನ್ನು ರಚಿಸಿದವರ ನಿರೀಕ್ಷೆ ಆಗಿದೆ. ಆ ದೃಷ್ಟಿಯಿಂದ ಈ ಯೋಜನೆಯು ಹಳ್ಳಿ ಮಕ್ಕಳ ಶಿಕ್ಷಣದಲ್ಲಿ ಒಂದು ಕ್ರಾಂತಿಕಾರಕ ಹೆಜ್ಜೆಯೇ ಆಗಿರುತ್ತದೆ. ಅದು ಯಾವುದೇ ಅರ್ಥದಲ್ಲಿ ಪಶ್ಚಿಮದಿಂದ ಪಡೆದ ಎರವಲು ಎಂದಾಗುವುದಿಲ್ಲ. ಓದುಗರು ಈ ಅಂಶವನ್ನು ಗಮನದಲ್ಲಿ ಇರಿಸಿಕೊಂಡರೆ ಈ ಯೋಜನೆಯನ್ನು ರೂಪಿಸುವಲ್ಲಿ ತಮ್ಮ ಸಂಪೂರ್ಣ ಗಮನವನ್ನು ಕೇಂದ್ರೀಕರಿಸಿದ ಹಲವು ಅತ್ಯುತ್ತಮ ಶಿಕ್ಷಣತಜ್ಞರ ಆಲೋಚನೆಗಳನ್ನು ಸೂಕ್ತವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯ.

ಸೆಗಾವ್, ವಾರ್ಧಾ
28. ಮೇ 1938
ಎಮ್. ಕೆ. ಗಾಂಧಿ

## 22 ಮತ್ತು 23 ಅಕ್ಟೋಬರ್ 1937 ರಂದು ವಾರ್ಧಾ ರಾಷ್ಟ್ರೀಯ ಶಿಕ್ಷಣ ಸಮ್ಮೇಳನದಲ್ಲಿ ಅನುಮೋದಿತವಾದ ನಿರ್ಣಯಗಳು

1. ರಾಷ್ಟ್ರ ಮಟ್ಟದಲ್ಲಿ ಪ್ರತಿಯೊಂದು ಮಗುವಿಗೆ ಏಳು ವರ್ಷಗಳ ಮಟ್ಟಿಗೆ ಕಡ್ಡಾಯ ಮತ್ತು ಉಚಿತ ಶಿಕ್ಷಣವನ್ನು ಒದಗಿಸಬೇಕು ಎಂದು ಈ ಸಭೆ ಅಭಿಪ್ರಾಯ ಪಡುತ್ತದೆ.
2. ಮಾತೃಭಾಷೆ ಕಲಿಕೆಯ ಮಾಧ್ಯಮವಾಗಿರಬೇಕು.
3. ಈ ಏಳು ವರ್ಷಗಳ ಅವಧಿಯುದ್ದಕ್ಕೂ ಶಿಕ್ಷಣದ ಪ್ರಕ್ರಿಯೆಯು ಯಾವುದಾದರೂ ದೈಹಿಕ ಶ್ರಮ ಮತ್ತು ಉತ್ಪಾದನಾಶೀಲ ಕೆಲಸದ ಸುತ್ತ ಶಿಕ್ಷಣವನ್ನು ಕೇಂದ್ರೀಕರಿಸಬೇಕು. ಮತ್ತು ಉಳಿದೆಲ್ಲಾ ಸಾಮರ್ಥ್ಯಗಳ ಬೆಳವಣಿಗೆ ಅಥವಾ ತರಬೇತಿಯು, ಆದಷ್ಟೂ, ಮಗುವಿನ ವಾತಾವರಣವನ್ನು ಗಮನದಲ್ಲಿಟ್ಟುಕೊಂಡು ಆಯ್ದ ಕೇಂದ್ರೀಯ ಕರಕೌಶಲ್ಯಕ್ಕೆ ಅವಿಭಾಜ್ಯವಾಗಿ ಸಂಬಂಧಿತವಾಗಿರಬೇಕು ಎಂಬ ಮಹಾತ್ಮ ಗಾಂಧಿ ಅವರ ಸಲಹೆಯನ್ನು ಸಭೆ ಅನುಮೋದಿಸುತ್ತದೆ.
4. ಈ ಶಿಕ್ಷಣ ವ್ಯವಸ್ಥೆ ಕ್ರಮೇಣವಾಗಿ ಬೋಧಕರ ಭತ್ಯೆಯನ್ನು ಭರಿಸುವ ಸಾಮರ್ಥ್ಯವನ್ನು ಹೊಂದಬಲ್ಲದು ಎಂದು ಈ ಸಭೆ ನಂಬಿದೆ.

**ಡಾ. ಜಾಕೀರ್ ಹುಸೇನ್ ಸಮಿತಿಯ**

**ವರದಿ**

**ಅಧ್ಯಕ್ಷರು**

ಡಾ. ಜಾಕೀರ್ ಹುಸೇನ್

**ಸದಸ್ಯರು**

| | |
|---|---|
| ಕೆ. ಗುಲಾಮ್ ಸೈಯಿದೇನ್ | ಕಿಶೋರ್ಲಾಲ್ ಮಶ್ರುವಾಲ |
| ಕೆ.ಟಿ.ಶಾ | ಜೆ.ಸಿ. ಕುಮಾರಪ್ಪ |
| ವಿನೋಬಾ ಭಾವೆ | ಶ್ರೀಕೃಷ್ಣದಾಸ್ ಜಾಜು |
| ಕಾಕಾ ಕಲೇಲ್ಕರ್ | ಶ್ರೀಮತಿ ಆಶಾದೇವಿ |

**ಸಂಚಾಲಕರು**

ಇ. ಡಬ್ಲ್ಯೂ . ಆರ್ಯನಾಯಕಂ

ದೆಹಲಿ, 2-12-1937

ಮಹಾತ್ಮ ಗಾಂಧಿ,
ಅಧ್ಯಕ್ಷರು,
ಅಖಿಲ ಭಾರತ ರಾಷ್ಟ್ರೀಯ ಶಿಕ್ಷಣ ಸಮ್ಮೇಳನ,
ವಾರ್ಧಾ.

ಮಹಾತ್ಮಾಜೀ,

ದಿ. 23, ಅಕ್ಟೋಬರ್ 1937 ರಂದು ಮೂಲ ಶಿಕ್ಷಣ ಯೋಜನೆಯೊಂದನ್ನು ರೂಪಿಸಲು ನಡೆದ ವಾರ್ಧಾ ಸಮ್ಮೇಳನದ ನಿರ್ಣಯಗಳಿಗೆ ಅನುಗುಣವಾಗಿ ಸಮ್ಮೇಳನವು ನೇಮಿಸಿದ್ದ ಸಮಿತಿಯ ವರದಿಯನ್ನು ಈ ಮೂಲಕ ಸಲ್ಲಿಸುವ ಗೌರವ ನನ್ನ ಪಾಲಿಗೆ ಒದಗಿ ಬಂದಿದೆ.

ವಾರ್ಧಾದಲ್ಲಿ ಉಪಸ್ಥಿತರಿದ್ದ ಸಮಿತಿಯ ಸದಸ್ಯರು ಅಕ್ಟೋಬರ್ 24 ರಂದು ನಿಮ್ಮೊಂದಿಗೆ ಪೂರ್ವಭಾವಿ ಚರ್ಚೆಯನ್ನು ನಡೆಸಿದ್ದರು. ನವೆಂಬರ್ ತಿಂಗಳ 2 ಮತ್ತು 3 ರಂದು ಸಮಿತಿ ವಾರ್ಧಾದಲ್ಲಿ ಮತ್ತೆ ಸಭೆ ಸೇರಿತ್ತು. ಪ್ರೊಫೆಸರ್ ಕೆ. ಟಿ. ಶಾ ಅವರಿಗೆ ತುರ್ತು ಕೆಲಸದ ಕಾರಣ ಪ್ರಯುಕ್ತ ಸಭೆಯಲ್ಲಿ ಉಪಸ್ಥಿತರಿರಲು ಸಾಧ್ಯವಾಗಲಿಲ್ಲ. ಉಳಿದಂತೆ ಎಲ್ಲರೂ ಹಾಜರಿದ್ದರು. ಮತ್ತೆ ಅದೇ ತಿಂಗಳ 22, 23, ಮತ್ತು 24 ರಂದು ಸದಸ್ಯರು ಸಭೆ ಸೇರಿದ್ದರು. ಅಂದು ಪ್ರೊಫೆಸರ್ ಸೈಯಿದೇನ್ ಅವರಿಗೆ ಬರಲು ಸಾಧ್ಯವಾಗಿರಲಿಲ್ಲ ಮತ್ತು ಕೆ. ಟಿ. ಶಾ ಅವರಿಗೆ ಸಭೆಯ ಮೊದಲ ದಿನ ಮಾತ್ರ ಹಾಜರಿರಲು ಸಾಧ್ಯವಾಗಿತ್ತು. ಸಮಿತಿಯ ಪ್ರತಿಯೊಬ್ಬ ಸದಸ್ಯರೂ ಅತ್ಯಂತ ಕಾಳಜಿಯಿಂದ ಭಾಗವಹಿಸಿದರು ಮತ್ತು ಕಾರ್ಯಕಲಾಪಗಳು ಅತ್ಯಂತ ಸೌಹಾರ್ದಯುತವಾಗಿ ನಡೆದವು

ಎನ್ನುವುದು ನಿಮಗೆ ಹರ್ಷ ತರುವ ಸಂಗತಿ. ಹಲವಾರು ಸ್ನೇಹಿತರು ನಮ್ಮ ಕಾಳಜಿಗೆ ಪೂರಕವಾಗುವಂತೆ ತಮ್ಮ ಅಭಿಪ್ರಾಯಗಳನ್ನು ಕಳುಹಿಸಿದ್ದಾರೆ. ಅವೆಲ್ಲವನ್ನೂ ಇಲ್ಲಿ ದಾಖಲಿಸಲು ಸಾಧ್ಯವಾಗಿಲ್ಲ. ಸಮಿತಿ ಅವರೆಲ್ಲರಿಗೆ ಆಭಾರಿಯಾಗಿದೆ.

ಈ ವರದಿಯಲ್ಲಿ ಇರಬಹುದಾದ ಕುಂದುಕೊರತೆಗಳ ಬಗ್ಗೆ ನಮಗೆ ಸಂಪೂರ್ಣ ಅರಿವಿದೆ. ಸಮಯದ ಕೊರತೆ ಮತ್ತು ನಮ್ಮದೇ ಕುಂದುಕೊರತೆಗಳಿಂದಾಗಿ ಇನ್ನಷ್ಟು ಉತ್ತಮವಾಗಿ ಮಾಡಲು ಸಾಧ್ಯವಾಗಲಿಲ್ಲ. ಉದಾಹರಣೆಗೆ ನೂಲುವ ಮತ್ತು ನೇಯುವ ಕೌಶಲ್ಯಗಳಿಗೆ ಸಂಬಂಧಿಸಿದಂತೆ ಮಾತ್ರ ವಿವರವಾದ ಪಠ್ಯಕ್ರಮವನ್ನು ಇಲ್ಲಿ ಸೇರಿಸಲು ಸಾಧ್ಯವಾಗಿದೆ. ಸಮಯದ ಅಭಾವವಿಲ್ಲದಿದ್ದರೆ ಉಳಿದ ಕೌಶಲ್ಯಗಳಿಗೂ ಇದೇ ರೀತಿಯ ಯೋಜನೆಯನ್ನು ಸೇರಿಸಲು ಸಾಧ್ಯವಿರುತ್ತಿತ್ತು. ಏಕೆಂದರೆ ಇದೇ ರೀತಿಯ ಅಥವಾ ಇನ್ನಷ್ಟು ಉತ್ತಮ ಶೈಕ್ಷಣಿಕ ಸಾಧ್ಯತೆಗಳಿರುವ ಇತರೆ ಕೌಶಲ್ಯಗಳಿಗೆ ನಾವು ಸಮನಾದ ಮಹತ್ವವನ್ನು ನೀಡಿಲ್ಲ ಎಂಬ ಅನಿಸಿಕೆಗೆ ಎಡೆಮಾಡಿಕೊಡಬಾರದು ಎಂಬ ಕಾಳಜಿ ನಮಗಿದೆ. ನಂತರದ ದಿನಾಂಕದಲ್ಲಿ ನೀವು ಸೂಚಿಸಿದಂತೆ ವ್ಯವಸಾಯ ಮತ್ತು ತೋಟಗಾರಿಕೆಗಳನ್ನೂ ಮೂಲ ಕೌಶಲ್ಯಗಳಾಗಿ ಪರಿಗಣಿಸಿ ತರಗತಿ ಮಟ್ಟಕ್ಕೆ (grade level) ಸಹ ಸಂಬಂಧಿತವಾಗಿ ವಿವರವಾದ ಯೋಜನೆಯನ್ನು ನಿಮ್ಮ ಅವಗಾಹನೆಗೆ ಸಲ್ಲಿಸುತ್ತೇವೆ.

ಹಲವಾರು ಪ್ರಾಂತೀಯ ಸರ್ಕಾರಗಳು ಸಂಬಂಧಪಟ್ಟ ಸಾಹಿತ್ಯವೆಲ್ಲವನ್ನೂ ನಮಗೆ ಕಳುಹಿಸಿ ಸಹಾಯ ಮಾಡಿವೆ. ವಿಶೇಷವಾಗಿ ಮಧ್ಯ ಪ್ರಾಂತ್ಯಗಳ ಸರ್ಕಾರ ಒಬ್ಬ ಶಿಕ್ಷಣ ಅಧಿಕಾರಿಯನ್ನು ಮತ್ತು ಕೃಷಿ ವಿಭಾಗದ ಅಧಿಕಾರಿಯನ್ನು ಈ ಸೇವೆಗೆಂದೇ ನಿಯೋಜಿಸಿ ಸಮಾಲೋಚನೆಯ ಸಮಯದಲ್ಲಿ ನಮಗೆ ಬೇಕಾದ ಸಹಾಯವೆಲ್ಲವೂ ಒದಗುವಂತೆ ನೋಡಿಕೊಂಡಿದೆ. ಅವರೆಲ್ಲರಿಗೂ ಸಮಿತಿ ಆಭಾರಿಯಾಗಿದೆ. ಸಾರ್ಜೆಂಟ್ ಆರ್ಯನಾಯಕಂ ಮತ್ತು ಶ್ರೀಮತಿ ಆಶಾದೇವಿಯವರಿಗೆ ಅವರು ಈ ಸಮಿತಿಯ ಸದಸ್ಯರಾಗಿದ್ದರೂ ಸಹ ಅಗಾಧ ಪ್ರಮಾಣದ ಪತ್ರವ್ಯವಹಾರವನ್ನು ಮತ್ತು ಸಭೆ ಸೇರಿಸಲು ಬೇಕಾದ ಎಲ್ಲ ಏರ್ಪಾಟುಗಳ ಉಸ್ತುವಾರಿಯನ್ನು ಸಮರ್ಥವಾಗಿ ನಿಭಾಯಿಸಿದ್ದಕ್ಕೆ ವಿಶೇಷ ಕೃತಜ್ಞತೆ ಸಲ್ಲಲೇಬೇಕು.

ಅಲಿಘಡದ ಮುಸ್ಲಿಮ್ ವಿಶ್ವವಿದ್ಯಾಲಯಕ್ಕೆ ಸೇರಿದ ಶಿಕ್ಷಕರ ತರಬೇತಿ ಕಾಲೇಜಿನ ಸಿಬ್ಬಂದಿಗೆ ನಾನು ವೈಯಕ್ತಿಕವಾಗಿ ಆಭಾರಿಯಾಗಿದ್ದೇನೆ. ಅವರ ಅಮೂಲ್ಯ ಸಮಯ, ಪರಿಣಿತ ಜ್ಞಾನವನ್ನು ಧಾರಾಳವಾಗಿ ಹಂಚಿಕೊಂಡಿದ್ದಕ್ಕೆ ಮತ್ತು ಹೃದಯಪೂರ್ವಕದ ಸಹಕಾರಕ್ಕೆ ನನ್ನ ಕೃತಜ್ಞತೆಗಳು.

ನಿಮ್ಮ ಅವಗಾಹನೆಗೆ ಸಲ್ಲಿಸಿದ ಈ ವರದಿಯಲ್ಲಿರುವ ಯೋಜನೆ ನಿಮ್ಮ ಮಾರ್ಗದರ್ಶನದಲ್ಲಿ ನಮ್ಮ ದೇಶದ ಉತ್ತಮ ಶಿಕ್ಷಣ ವ್ಯವಸ್ಥೆಗೆ ನಾಂದಿಯಾಗುತ್ತದೆ ಎಂದು ಹೃತ್ಪೂರ್ವಕವಾಗಿ ನಂಬಿದ್ದೇವೆ.

# ಮೂಲ ತತ್ವಗಳು

## ಚಾಲ್ತಿಯಲ್ಲಿರುವ ಶೈಕ್ಷಣಿಕ ವ್ಯವಸ್ಥೆ

ದೇಶದ ಪ್ರಸಕ್ತ ಶಿಕ್ಷಣ ವ್ಯವಸ್ಥೆ ನಿರುಪಯುಕ್ತವೆಂದು ಇಡೀ ಭಾರತದಲ್ಲಿ ಒಮ್ಮತ ಅಭಿಪ್ರಾಯವಿದೆ. ರಾಷ್ಟ್ರೀಯ ಬದುಕಿಗೆ ಅತ್ಯಂತ ತುರ್ತಾಗಿ ಬೇಕಿದ್ದ ಅವಶ್ಯಕತೆಗಳನ್ನು ಪೂರೈಸಲು ಮತ್ತು ಅದರ ಶಕ್ತಿ ಹಾಗೂ ಪ್ರವೃತ್ತಿಗಳನ್ನು ಸರಿಯಾದ ರೀತಿಯಲ್ಲಿ ಸಂಘಟಿಸಿ ಬಳಸಲು ಅದು ಈ ಹಿಂದೆ ವಿಫಲವಾಗಿತ್ತು. ಆದರೆ ಇಂದಿನ ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಬದುಕಿನಲ್ಲಿ ಭಾರೀ ಪ್ರಮಾಣದ ಬದಲಾವಣೆಗಳು ಚುರುಕು ಗತಿಯಲ್ಲಿ ಸಂಭವಿಸುತ್ತಾ ಬದುಕನ್ನು ಮರುರೂಪಿಸುತ್ತಾ ಪ್ರಜೆಗಳಿಗೆ ಹೊಸ ಹೊಸ ಸವಾಲುಗಳನ್ನು ಒಡ್ಡುತ್ತಿರುವಾಗ, ಜೀವನದ ನೈಜ ಪ್ರವೃತ್ತಿಗಳ ಹೊರತಾಗಿ, ಬದಲಾದ ಸಂದರ್ಭಕ್ಕೆ ಅಳವಡಿಸಿಕೊಳ್ಳಲಾಗದೆ ಒಂದು ರೀತಿಯ ಜಡತೆಯಿಂದ ಕಾರ್ಯನಿರ್ವಹಿಸುತ್ತಿದೆ. ಅತ್ತ ವರ್ತಮಾನದ ವಾಸ್ತವಿಕ ವಿಷಯಗಳಿಗೆ ಸ್ಪಂದಿಸದೇ ಇತ್ತ ಯಾವುದೇ ರೀತಿಯ ಜೀವದಾಯಿ ಮತ್ತು ಸೃಜನಶೀಲ ಆದರ್ಶಗಳಿಂದ ಸ್ಫೂರ್ತಿ ಹೊಂದದಂತಿದೆ. ಸಮಾಜದ ಭಾಗವಾಗಿ ತಮ್ಮ ಪಾಲಿನ ಕೆಲಸಗಳನ್ನು ನಿರ್ವಹಿಸುತ್ತಾ, ಅದರ ವ್ಯವಹಾರಗಳಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸುವಂತಹ ಉಪಯುಕ್ತ ಸಮಾಜದ ಸದಸ್ಯರಾಗಲು ತರಬೇತಿಯನ್ನು ಅದು ನೀಡುತ್ತಿಲ್ಲ. ಹಿಂಸೆ ಮತ್ತು ಶೋಷಣೆಯ ಬಲದ ಮೇಲೆ ಕಟ್ಟಲ್ಪಟ್ಟ ಅಮಾನವೀಯ ವ್ಯವಸ್ಥೆಗೆ ಬದಲಾಗಿ, ಶಿಕ್ಷಣವು ತನ್ನ ನೆರವಿನ ಮೂಲಕ ಅಸ್ತಿತ್ವಕ್ಕ ತರತಕ್ಕ ಸಹಕಾರದ ತಳಹದಿಯ ಮೇಲೆ ಕಟ್ಟಲ್ಪಡಬಲ್ಲ ಹೊಸ ಸಾಮಾಜಿಕ ವ್ಯವಸ್ಥೆಯ ಕಲ್ಪನೆಯೇ ಅದಕ್ಕಿಲ್ಲ. ಆದ್ದರಿಂದ ಪ್ರಸಕ್ತ ಶಿಕ್ಷಣದ ಬದಲಾವಣೆ ಅತ್ಯಗತ್ಯ ಎಂಬ ಕೂಗು ಎಲ್ಲ ಕಡೆಯಿಂದ ಕೇಳಿಬರುತ್ತಿದೆ. ಆ ಬದಲಾವಣೆ ರಾಷ್ಟ್ರೀಯ ಬದುಕಿಗೆ ಬೇಕಾಗುವ ಆದರ್ಶ ಮತ್ತು ಅಗತ್ಯತೆಗಳೊಂದಿಗೆ ಸಂಯೋಜಿಸಲ್ಪಟ್ಟ ಅದರ ವರ್ತಮಾನದ

ಅತ್ಯಂತ ತುರ್ತಿನ ಅವಶ್ಯಕತೆಗಳಿಗೆ ಸಕ್ರಿಯವಾಗಿ ಸ್ಪಂದಿಸುವ ಸೃಜನಶೀಲ ಮತ್ತು ಮಾನವೀಯತೆಯಿಂದ ಕೂಡಿದ್ದಾಗಿರಬೇಕು ಎನ್ನುವುದಾಗಿದೆ.

ಭಾರತೀಯ ಮಕ್ಕಳಿಗೆ ನಾವು ರೂಪಿಸುವ ಯಾವುದೇ ಶಿಕ್ಷಣ ಯೋಜನೆಯು ಪಾಶ್ಚಾತ್ಯದಲ್ಲಿ ಚಾಲ್ತಿಯಲ್ಲಿರುವ ಯೋಜನೆಗಿಂತ ಕೆಲವು ವಿಷಯಗಳಲ್ಲಿ ಮೂಲಭೂತವಾಗಿ ಭಿನ್ನವಾಗಿರುತ್ತದೆ. ಏಕೆಂದರೆ ಪಶ್ಚಾತ್ಯ ರಾಷ್ಟ್ರಗಳಿಗೆ ವಿರುದ್ಧವಾಗಿ ಭಾರತ ರಾಷ್ಟ್ರವು ಸಂಪೂರ್ಣ ಸ್ವತಂತ್ರವನ್ನು ಪಡೆಯಲು ಶಾಂತಿ ಮತ್ತು ಅಹಿಂಸೆಯ ಮಾರ್ಗವನ್ನು ಆರಿಸಿಕೊಂಡಿದೆ. ಆದ್ದರಿಂದ ನಮ್ಮ ಮಕ್ಕಳಿಗೆ ಹಿಂಸೆಗಿಂತ ಅಹಿಂಸೆ ಎಷ್ಟು ಉತ್ತಮವಾದ ದಾರಿ ಎನ್ನುವುದನ್ನು ನಾವು ಮನದಟ್ಟು ಮಾಡಿಕೊಡಬೇಕಿದೆ.

## ಮಹಾತ್ಮ ಗಾಂಧೀಜಿಯವರ ಮುಂದಾಳತ್ವ

ಬೇರೆ ಹಲವಾರು ಕ್ಷೇತ್ರಗಳಂತೆಯೇ ಶಿಕ್ಷಣಕ್ಷೇತ್ರದಲ್ಲಿಯೂ ಸಹ ಮಹಾತ್ಮ ಗಾಂಧಿಯವರ ದೂರದರ್ಶಿತ್ವ ಮತ್ತು ಮುಂದಾಳುತನ ಅತ್ಯಂತ ನಿರ್ಣಾಯಕ ಸಮಯದಲ್ಲಿ ಒದಗಿ ಬಂದಿದೆ. ಗಾಂಧೀಜಿಯವರು ಭಾರತೀಯರ ಪ್ರತಿಭೆಗೆ ಹೊಂದಾಣಿಕೆ ಇರುವ ಮತ್ತು ಸಮೂಹ ಶಿಕ್ಷಣದ ಸಮಸ್ಯೆಯನ್ನು ಆದಷ್ಟೂ ಬೇಗ ಪ್ರಾಯೋಗಿಕವಾಗಿ ನಿವಾರಿಸಬಲ್ಲ ಒಂದು ಶಿಕ್ಷಣ ವ್ಯವಸ್ಥೆಯನ್ನು ರೂಪಿಸಲು ಹೃತ್ಪೂರ್ವಕವಾಗಿ ತಮ್ಮನ್ನು ಮುಡುಪಾಗಿಸಿಕೊಂಡಿದ್ದಾರೆ. ತಮ್ಮ ಹರಿಜನ್ (HARIJAN) ಪತ್ರಿಕೆಯ ಲೇಖನಗಳಲ್ಲಿ ಮತ್ತು ವಾರ್ಧಾ ಶಿಕ್ಷಣ ಸಮ್ಮೇಳನದಲ್ಲಿ ವಿವರಿಸಲಾದ ಅವರ ಯೋಜನೆಯ ಮೂಲ ವಿಚಾರವೇನೆಂದರೆ, ಶಿಕ್ಷಣವು ಅದರ ತತ್ವಗಳು ಉತ್ತಮವಾಗಿದ್ದರೆ, ಅದು ಯಾವುದೇ ಕರಕೌಶಲ್ಯ ಅಥವಾ ಉತ್ಪಾದನಾಶೀಲ ಕೆಲಸದ ಮೂಲಕ ನೀಡಲಾಗಿದ್ದು ಶಾಲೆಯಲ್ಲಿ ಒದಗಿಸಲಾಗುವ ಇತರ ಉಳಿದೆಲ್ಲ ಬೋಧನೆಗೆ ಕೇಂದ್ರಬಿಂದು ಆಗಿರಬೇಕೆಂದು ಹೇಳಿರುತ್ತಾರೆ. ಈ ಕರಕೌಶಲ್ಯ ಶಿಕ್ಷಣವನ್ನು ಪರಿಪೂರ್ಣವಾಗಿ ಮತ್ತು ದಕ್ಷತೆಯಿಂದ ಬೋಧಿಸಿದ್ದಲ್ಲಿ ಶಾಲೆಯು ಶಿಕ್ಷಕರ ಭತ್ಯೆಯನ್ನು ಭರಿಸುವುದನ್ನು ಸಾಧ್ಯವಾಗಿಸಬೇಕು. ಅವರ ಪ್ರಕಾರ ಇದು ಪ್ರಭುತ್ವವು ಉಚಿತ ಮತ್ತು ಕಡ್ಡಾಯ ಮೂಲ ಶಿಕ್ಷಣ ಯೋಜನೆಯನ್ನು ವಿಳಂಬ ಮಾಡದೆ ಪರಿಚಯಿಸಲು ಸಹ ಸಹಾಯ ಮಾಡುತ್ತದೆ. ಇಲ್ಲದಿದ್ದರೆ ಇಂದಿನ ರಾಜಕೀಯ ಮತ್ತು ಆರ್ಥಿಕ ಸ್ಥಿತಿಯಲ್ಲಿ ಶಿಕ್ಷಣದ ಹೊರೆ ನಮ್ಮ ದೇಶಕ್ಕೆ ನಿಷೇಧಾತ್ಮಕವಾಗಿರುತ್ತದೆ.

## ಶಾಲೆಗಳಲ್ಲಿ ಕರಕೌಶಲ್ಯ

ಆಧುನಿಕ ಶಿಕ್ಷಣ ವಿಚಾರಧಾರೆ ಮಕ್ಕಳಿಗೆ ಯಾವುದಾದರೂ ಸೂಕ್ತ ಉತ್ಪಾದನಾಶೀಲ ಕೆಲಸದ ಮೂಲಕ ವಿದ್ಯಾಭ್ಯಾಸ ನೀಡುವ ಯೋಚನೆಯನ್ನು

ಒಮ್ಮನಸ್ಸಿನಿಂದ ಅನುಮೋದಿಸುತ್ತದೆ. ಈ ವಿಧಾನವನ್ನು ಸಮಗ್ರ ವಿದ್ಯಾಭ್ಯಾಸವನ್ನು ನೀಡಲು ಅತ್ಯಂತ ಸಮರ್ಥವಾದ ಹಾದಿ ಎಂದು ಪರಿಗಣಿಸಲಾಗುತ್ತದೆ.

ಮನಶಾಸ್ತ್ರೀಯ ನೆಲೆಯಿಂದ ನೋಡಿದಾಗ ಅದು ಅಪೇಕ್ಷಣೀಯ. ಏಕೆಂದರೆ ಮಗುವಿನ ಸಕ್ರಿಯ ಸ್ವಭಾವ ಸದಾ ಸಕಾರಣವಾಗಿಯೇ ಬಂಡೇಳುವ ಕೇವಲ ಅಕಡೆಮಿಕ್ (academic) ಮತ್ತು ಸೈದ್ಧಾಂತಿಕ ಬೋಧನೆಯ ಉಪದ್ರವದಿಂದ ಅದು ಮುಕ್ತ್ತಗೊಳಿಸುತ್ತದೆ. ಬೌದ್ಧಿಕ ಹಾಗೂ ಪ್ರಾಯೋಗಿಕ ಅಂಶಗಳನ್ನು ಸಮತೋಲನಗೊಳಿಸುವ ಅದನ್ನು ಸಾಧಿಸಿದ್ದು ಅದು ದೇಹ ಮತ್ತು ಬುದ್ಧಿಯು ಸಮನ್ವಯದಿಂದ ಕೆಲಸ ಮಾಡಲು ಶಿಕ್ಷಣದ ಸಾಧನವಾಗಿಸಬಹುದು. ಮಗುವು ಅನೇಕ ವೇಳೆ ಬೇಡದ, ಲಿಖಿತ ಹಾಳೆಯನ್ನು ಓದುವ ತೋರಿಕೆಯ ಸಾಕ್ಷತರೆಯನ್ನು ಸೂಚಿಸುವ ಸಾಮರ್ಥ್ಯವನ್ನು ಗಳಿಸದೆ, ಅದಕ್ಕಿಂತ ಮುಖ್ಯವಾದ ಸೃಜನಶೀಲ ಉದ್ದೇಶಕ್ಕೆ ಉಪಯೋಗಿಸಬಹುದಾದ ತನ್ನ ಕೈಗಳನ್ನು ಮತ್ತು ಬುದ್ಧಿಯನ್ನು ಬಳಸುವ ಸಾಮರ್ಥ್ಯವನ್ನು ಗಳಿಸುತ್ತದೆ. ಬೇರೆಯೇ ಪರಿಭಾಷೆಯಲ್ಲಿ ಹೇಳುವುದಾದರೆ, ಇದು *"ವ್ಯಕ್ತಿತ್ವದ ಸಮಗ್ರ ಸಾಕ್ಷರತೆ."*

ಸಾಮಾಜಿಕ ನೆಲೆಯಲ್ಲಿ, ರಾಷ್ಟ್ರದ ಪ್ರತಿಯೊಬ್ಬ ಮಗುವೂ ಭಾಗವಹಿಸಬಹುದಾದಂತ ಅಂಥ ಪ್ರಾಯೋಗಿಕ ಮತ್ತು ಉತ್ಪಾದನಾಶೀಲ ಪ್ರಕ್ರಿಯೆಗಳನ್ನು ಒಳಗೊಂಡಿರುವ ಶಿಕ್ಷಣವನ್ನು ಪರಿಚಯಿಸಿದರೆ ಅದು ದೈಹಿಕ ಶ್ರಮಿಕರ ಮತ್ತು ಬೌದ್ಧಿಕ ಶ್ರಮಿಕರ ನಡುವೆ ತಡೆಗಳಾಗಿ ಅಸ್ತಿತ್ವದಲ್ಲಿರುವ ಇಬ್ಬರಿಗೂ ಅಪಾಯಕಾರಿಯಾಗಿರುವ ಪೂರ್ವಗ್ರಹಗಳನ್ನು ತೊಡೆದುಹಾಕಲು ಪ್ರವೃತ್ತಗೊಳ್ಳುತ್ತದೆ. ಶ್ರಮದ ಘನತೆ ಮತ್ತು ಮಾನವೀಯ ಒಗ್ಗಟ್ಟನ್ನು ನಿಜವಾದ ಅರ್ಥದಲ್ಲಿ ಬೆಳೆಸಲು ಇದೊಂದೇ ದಾರಿ. ಅದರ ನೈತಿಕ ಮತ್ತು ಸನ್ನಡತೆಯ ಲಾಭ ಅಳೆಯಲಾಗದಷ್ಟು ಅಪಾರವಾಗಿರುತ್ತದೆ.

ಆರ್ಥಿಕ ನೆಲೆಯಿಂದ ನೋಡಿದಾಗ, ಈ ಯೋಜನೆಯನ್ನು ಬುದ್ಧಿವಂತಿಕೆಯಿಂದ ಸಮರ್ಥವಾಗಿ ನಿಭಾಯಿಸಿದಲ್ಲಿ ಅದು ನಮ್ಮ ಕೆಲಸಗಾರರ ಉತ್ಪಾದನಾಶೀಲತೆಯನ್ನು ಹೆಚ್ಚಿಸುವುದಲ್ಲದೆ ಅವರ ಬಿಡುವಿನ ಸಮಯವನ್ನು ಲಾಭದಾಯಕವಾಗಿ ಉಪಯೋಗಿಸಿಕೊಳ್ಳುವಂತೆ ಮಾಡಬಲ್ಲದು.

ಶೈಕ್ಷಣಿಕ ನೆಲೆಯಿಂದ ನಿಷ್ಕೃಷ್ಟವಾಗಿ ನೋಡಿದಲ್ಲಿ, ಯಾವುದಾದರೂ ಗಮನಾರ್ಹ ಕರಕೌಶಲವನ್ನು ಶಿಕ್ಷಣದ ಆಧಾರವನ್ನಾಗಿ ಮಾಡಿದರೆ ಮಕ್ಕಳು ಪಡೆದುಕೊಂಡ ಜ್ಞಾನಕ್ಕೆ ಹೆಚ್ಚಿನ ನಿರ್ದಿಷ್ಟ ಮತ್ತು ವಾಸ್ತವತೆಯ ಸ್ಪರ್ಶವನ್ನು ನೀಡಬಹುದು. ಪರಿಣಾಮವಾಗಿ ಜ್ಞಾನವೆನ್ನುವುದು ವಾಸ್ತವ ಬದುಕಿಗೆ ಸಂಬಂಧಿತವಾಗಿ ಅದರ ವಿವಿಧ ಆಯಾಮಗಳ ನಡುವೆ ಸಹಸಂಬಂಧವನ್ನು ಹೊಂದುತ್ತದೆ.

## ಎರಡು ಅಗತ್ಯ ಪೂರ್ವಾಪೇಕ್ಷಿತಗಳು

ಈ ರೀತಿಯ ಶಿಕ್ಷಣದ ಪೂರ್ಣ ಲಾಭವನ್ನು ಪಡೆಯಲು ಎರಡು ಷರತ್ತುಗಳನ್ನು ಎಚ್ಚರದಿಂದ ಪಾಲಿಸಬೇಕಾಗುತ್ತದೆ. ಮೊದಲಿಗೆ, ಆರಿಸಿಕೊಂಡ ಕರಕೌಶಲ್ಯ ಅಥವಾ ಉತ್ಪಾದನಾಶೀಲದ ಕೆಲಸವು ಶಿಕ್ಷಣದ ಅಪಾರ ಸಾಧ್ಯತೆಗಳನ್ನು ಒಳಗೊಂಡಿರಬೇಕು. ಮನುಷ್ಯ ಬದುಕಿನ ಮುಖ್ಯ ಚಟುವಟಿಕೆ ಮತ್ತು ಆಸಕ್ತಿಗಳ ಜೊತೆ ಅದು ಸಹಜವಾದ ಸಹಸಂಬಂಧವನ್ನು ಹೊಂದಿದ್ದು ಶಾಲೆಯ ಪಠ್ಯಕ್ರಮದ ವಿಷಯವನ್ನು ಸಂಪೂರ್ಣವಾಗಿ ಒಳಗೊಳ್ಳಬೇಕು. ಮೂಲ ಕರಕೌಶಲ್ಯಗಳ ಆಯ್ಕೆಯ ಬಗ್ಗೆ ಸಲಹೆಗಳನ್ನು ಈ ವರದಿಯಲ್ಲಿ ಮುಂದೆ ಕೊಡಲಾಗಿದೆ. ಅದನ್ನು ತಯಾರಿಸುವಾಗ ಮೇಲೆ ಹೇಳಿದ ಅಂಶಕ್ಕೆ ವಿಶೇಷÀ ಮಹತ್ವವನ್ನು ನೀಡಿದ್ದೇವೆ ಮತ್ತು ಯಾವುದೇ ರೀತಿಯಲ್ಲಿ ಈ ಯೋಜನೆಗೆ ಸಂಬಂಧಿಸಿದ ಎಲ್ಲರೂ ಈ ಅಂಶವನ್ನು ನೆನಪಿನಲ್ಲಿಡಬೇಕು ಎಂದು ಒತ್ತಿ ಹೇಳುತ್ತಿದ್ದೇವೆ. ಯಾಂತ್ರಿಕವಾಗಿ ಯಾವುದೋ ಒಂದು ಕರಕೌಶಲ್ಯವನ್ನು ಅಭ್ಯಾಸ ಮಾಡಲು ಸಾಮರ್ಥ್ಯ ಹೊಂದಿದ ಕರಕೌಶಲ್ಯಗಾರರನ್ನು ಹುಟ್ಟು ಹಾಕುವುದು ಈ ಹೊಸ ಶೈಕ್ಷಣಿಕ ಯೋಜನೆಯ ಮೂಲತಃ ಉದ್ದೇಶವಲ್ಲ. ಬದಲಿಗೆ ಕರಕೌಶಲ್ಯದಲ್ಲಿ ಅಂತರ್ಗತವಾಗಿರುವ ಸಂಪನ್ಮೂಲಗಳನ್ನು ಶಿಕ್ಷಣದ ಉದ್ದೇಶಕ್ಕೆ ಸಮರ್ಥವಾಗಿ ದುಡಿಸಿಕೊಳ್ಳುವುದು. ಉತ್ಪಾದನಾಶೀಲದ ಕೆಲ್ಸವು ಕೇವಲ ಶಾಲೆಯ ಪಠ್ಯಕ್ರಮದ ಒಂದು ಭಾಗವಾಗಿರದೆ ಅದರ ಕರಕೌಶಲದ ಆಯಾಮವು ಉಳಿದ ಎಲ್ಲಾ ವಿಷಯಗಳ ಬೋಧನೆಯ ವಿಧಾನಕ್ಕೂ ಸ್ಫೂರ್ತಿ ನೀಡಬೇಕು ಎಂದು ಇದು ಬೇಡುತ್ತದೆ. ಕಲಿಕೆಯಲ್ಲಿ ಸಹಕಾರ ಚಟುವಟಿಕೆ, ಯೋಜನೆ, ನಿಖರತೆ, ಉಪಕ್ರಮಿಸುವಿಕೆ ಮತ್ತು ವ್ಯಕ್ತಿಗತ ಜವಾಬ್ದಾರಿಯ ತತ್ವಗಳಿಗೆ ಒತ್ತು ನೀಡಬೇಕು. ಮಹಾತ್ಮ ಗಾಂಧಿಯವರ ಈ ಕೆಳಗಿನ ಮಾತುಗಳ ಅರ್ಥ ಇದೇ: "ಪ್ರತಿಯೊಂದು ಕರಕೌಶಲ್ಯವನ್ನು ಇಂದಿನಂತೆ ಯಾಂತ್ರಿಕವಾಗಿ ಹೇಳಿಕೊಡುವ ಬದಲು ವೈಜ್ಞಾನಿಕವಾಗಿ ಹೇಳಿಕೊಡಬೇಕು. ಅಂದರೆ ಮಗು ಪ್ರತಿಯೊಂದು ಪ್ರಕ್ರಿಯೆಯ ಯಾಕೆ, ಏನು, ಎತ್ತ ಮೊದಲಾದ ಅಂಶಗಳನ್ನೂ ಕಲಿಯಬೇಕು." ಅದು ವೈಯಕ್ತಿಕ ಅವಲೋಕನ ಮತ್ತು ಅನುಭವದಿಂದ ಕಲಿಯಬೇಕು. ನೇಯುವುದು, ನೂಲುವುದು, ಮರಗೆಲಸ ಮಾಡುವುದು ಇತ್ಯಾದಿ ಕೌಶಲ್ಯಗಳನ್ನು ಪಠ್ಯಕ್ರಮದಲ್ಲಿ ಒಂದು ವಿಷಯವಸ್ತುವಾಗಿ ಸೇರಿಸಿ ಉಳಿದನ್ನು ಸಾಂಪ್ರದಾಯಿಕ ರೀತಿಯಲ್ಲೇ ಬೋಧಿಸಿದರೆ ಜ್ಞಾನವನ್ನು ಅರ್ಥವಾಗದ ಮತ್ತು ಪರಸ್ಪರ ಪೂರಕವಾಗಿರದ (ನೀರುತಡೆಯ ಗೋಡೆಗಳ ಹಾಗೆ) ಭಾಗಗಳಾಗಿ ಅದರ ನಿಷ್ಕ್ರಿಯ ಸಮೀಕರಣವನ್ನು ಮತ್ತು ವಿಭಜನೆಯನ್ನು ಉತ್ತೇಜಿಸುತ್ತವೆ ಎನ್ನುವುದು ನಮ್ಮ ದೃಢ ನಂಬಿಕೆ. ಅದು ಈ ಯೋಜನೆಯ ಮೂಲ ಉದ್ದೇಶಕ್ಕೆ ಮತ್ತು ಚೈತನ್ಯಕ್ಕೆ ಪ್ರತಿರೋಧಕವಾಗಿರುತ್ತದೆ.

## ಪಠ್ಯಕ್ರಮದಲ್ಲಿ ಅಂತರ್ಗತವಾಗಿರುವ ಆದರ್ಶ ಪೌರತ್ವ

ಈ ಹೊಸ ಶೈಕ್ಷಣಿಕ ಪ್ರಯತ್ನವನ್ನು ಕೈಗೊಳ್ಳುವ ಬೋಧಕರು ಮತ್ತು ಶಿಕ್ಷಣತಜ್ಞರು ಅದರಲ್ಲಿ ಅಂತರ್ಗತವಾಗಿರುವ ಪೌರತ್ವದ ಆದರ್ಶ ಪರಿಕಲ್ಪನೆಯ ಬಗ್ಗೆ ಸ್ಪಷ್ಟವಾದ ತಿಳುವಳಿಕೆಯನ್ನು ಹೊಂದಿರಬೇಕು ಎನ್ನುವುದು ನಮ್ಮ ಕಾಳಜಿಗಳಲ್ಲಿ ಇನ್ನೊಂದು. ಆಧುನಿಕ ಭಾರತದಲ್ಲಿ, ದೇಶದ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ನೆಲೆಗಳಲ್ಲಿ ಪೌರತ್ವದ ಪರಿಕಲ್ಪನೆಯು ಹೆಚ್ಚೆಚ್ಚು ಪ್ರಜಾತಾಂತ್ರಿಕವಾಗಲಿದೆ. ನಮ್ಮ ಮುಂದಿನ ತಲೆಮಾರಿಗೆ ಕೊನೇ ಪಕ್ಷ ತಮ್ಮದೇ ಸಮಸ್ಯೆಗಳು ಮತ್ತು ಹಕ್ಕು ಮತ್ತು ಕರ್ತವ್ಯಗಳನ್ನು ಅರಿತುಕೊಳ್ಳುವ ಅವಕಾಶ ಇರಲೇಬೇಕು. ಪ್ರಜೆಗಳಾಗಿ ಬುದ್ಧಿವಂತಿಕೆಯಿಂದ ತಮ್ಮ ಹಕ್ಕುಗಳನ್ನು ಚಲಾಯಿಸಲು ಮತ್ತು ಕರ್ತ್ಯವ್ಯಗಳನ್ನು ಪಾಲಿಸಲು ಸಾಧ್ಯವಾಗಿಸುವ ಕನಿಷ್ಠ ಶಿಕ್ಷಣವನ್ನು ಒದಗಿಸುವ ಒಂದು ಸಂಪೂರ್ಣ ಹೊಸ ವ್ಯವಸ್ಥೆಯ ಅಗತ್ಯವಿದೆ. ಎರಡನೆಯದಾಗಿ, ಈ ಆಧುನಿಕ ಕಾಲದಲ್ಲಿ, ಒಬ್ಬ ಬುದ್ಧಿವಂತ ಪ್ರಜೆಯು ಸಮಾಜದ ಸಕ್ರಿಯ ಸದಸ್ಯನಾಗಿರಬೇಕು ಮತ್ತು ಒಂದು ವ್ಯವಸ್ಥಿತ ನಾಗರಿಕ ಸಮುದಾಯಕ್ಕೆ ಸೇರಿದವನಾಗಿ ಯಾವುದಾದರೂ ಉಪಯುಕ್ತ ಸೇವೆಯ ರೂಪದಲ್ಲಿ ತನ್ನ ಪಾಲನ್ನು ಅದಕ್ಕೆ ಸಲ್ಲಿಸುವ ಸಾಮರ್ಥ್ಯ ಹೊಂದಿರಬೇಕು. ಬಡವನಿರಲಿ ಅಥವಾ ಶ್ರೀಮಂತನಿರಲಿ, ಸೋಮಾರಿಗಳನ್ನು ಮತ್ತು ಪರಾವಲಂಬಿಗಳನ್ನು ಹುಟ್ಟು ಹಾಕುವ ಶಿಕ್ಷಣವು ಖಂಡನೆಗೆ ಅರ್ಹವಾಗಿರುತ್ತದೆ. ಅದು ಸಮಾಜದ ಪರಿಣಾಮಕಾರಿತ್ವ ಮತ್ತು ಉತ್ಪಾದನಾಶೀಲತೆಯ ಸಾಮರ್ಥ್ಯವನ್ನು ಕುಂಠಿತಗೊಳಿಸುವುದಷ್ಟೇ ಅಲ್ಲ, ಅಪಾಯಕಾರಿ ಮತ್ತು ಅನೈತಿಕ ಮನೋಭಾವವನ್ನು ಸಹ ಹುಟ್ಟುಹಾಕುತ್ತದೆ. ಈ ಯೋಜನೆಯು ಜಾಡಮಾಲಿ ಕೆಲಸವೂ ಸೇರಿದಂತೆ ದೈಹಿಕ ಶ್ರಮ ಮತ್ತು ಉಳಿದೆಲ್ಲಾ ಪ್ರಯೋಜನಕಾರಿ ಕೆಲಸವನ್ನು ಗೌರವಾರ್ಹ ಎಂದು ಭಾವಿಸುವ ಹಾಗೂ ತಮ್ಮ ಕಾಲ ಮೇಲೆ ತಾವು ನಿಲ್ಲುವ ಶಕ್ತಿಯನ್ನು ಹೊಂದಿರುವ ಮತ್ತು ಬಯಸುವ ಶ್ರಮಿಕರನ್ನು ಹುಟ್ಟುಹಾಕುವ ಉದ್ದೇಶದಿಂದ ವಿನ್ಯಾಸಗೊಳ್ಳಲಾಗಿದೆ.

ಶಾಲೆಯಲ್ಲಿ ಮಾಡುವ ಕೆಲಸ ಮತ್ತು ಸಮುದಾಯದ ಕೆಲಸ ಎರಡೂ ಇಂಥ ನಿಕಟ ಸಂಬಂಧ ಹೊಂದಿರುವಾಗ ಮಗು ಶಾಲೆಯಲ್ಲಿ ಕಲಿತ ಮೌಲ್ಯಗಳನ್ನು ಮತ್ತು ಧೋರಣೆಗಳನ್ನು ಹೊರಪ್ರಪಂಚಕ್ಕೂ ಅನ್ವಯಿಸಿಕೊಳ್ಳುವುದನ್ನು ಸಾಧ್ಯವಾಗಿಸುತ್ತದೆ. ನಾವು ಪ್ರತಿಪಾದಿಸುತ್ತಿರುವ ಈ ಹೊಸ ಯೋಜನೆಯು ಭವಿಷ್ಯದ ಪ್ರಜೆಗಳಿಗೆ ತಮ್ಮ ವೈಯಕ್ತಿಕ ಯೋಗ್ಯತೆ, ಘನತೆ, ಮತ್ತು ಸಾಮರ್ಥ್ಯದ ಆಳವಾದ ಅರಿವನ್ನು ನೀಡಿ ಪರಸ್ಪರ ಸಹಕಾರ ಆಧಾರದ ಮೇಲೆ ಕಟ್ಟಲ್ಪಟ್ಟ ತಮ್ಮ ಸಮುದಾಯಕ್ಕೆ ಸಮಾಜ ಸೇವೆ ಮಾಡಲು ಮತ್ತು ತಮ್ಮ ವ್ಯಕ್ತಿತ್ವದ ಸುಧಾರಣೆಯ ಆಶಯವನ್ನು ತಮ್ಮಲ್ಲಿ ಬಲಪಡಿಸುವ ಗುರಿಯನ್ನು ಹೊಂದಿರುತ್ತದೆ.

ಒಟ್ಟಿನಲ್ಲಿ, ಈ ಯೋಜನೆಯು ಪರಸ್ಪರ ಸಹಕಾರದ ಆಧಾರದ ಮೇಲೆ ಕಟ್ಟಲ್ಪಟ್ಟ ಸಮುದಾಯದ ಕಲ್ಪನೆಯನ್ನು ಇರಿಸಿಕೊಂಡಿದೆ. ಅಲ್ಲಿ

ಸುಲಭವಾಗಿ ಬಾಗುವ ಬಾಲ್ಯದ ಮತ್ತು ಹದಿಹರೆಯದ ಮನಸ್ಸುಗಳಿಗೆ ಸಮಾಜ ಸೇವೆಯ ಮೌಲ್ಯದ ಉದ್ದೇಶವನ್ನು ಎಲ್ಲಾ ಚಟುವಟಿಕೆಗಳ ಮೂಲಕ ಗಾಢವಾಗಿ ಮನದಟ್ಟು ಮಾಡಿಕೊಡಲಾಗುತ್ತದೆ. ಶಾಲಾಶಿಕ್ಷಣದ ಅವಧಿಯಲ್ಲಿಯೂ ಸಹ ಮಕ್ಕಳಿಗೆ ತಾವು ರಾಷ್ಟ್ರೀಯ ಶಿಕ್ಷಣದ ಒಂದು ಮಹಾನ್ ಪ್ರಯೋಗದಲ್ಲಿ ನೇರವಾಗಿ ಮತ್ತು ವೈಯಕ್ತಿಕವಾಗಿ ಭಾಗಿಯಾಗುತ್ತಿದ್ದೇವೆ ಎಂಬ ಭಾವನೆ ಮೂಡುತ್ತದೆ.

## ಯೋಜನೆಯ ಸ್ವಾವಲಂಬನೆಯ ತಳಹದಿ

ಈ ಯೋಜನೆಯ "ಸ್ವಾವಲಂಬಿ" ಅಂಶದ ಬಗ್ಗೆ ಸಾಕಷ್ಟು ತಪ್ಪುಗ್ರಹಿಕೆಗಳು ಇರುವುದರಿಂದ ಕೆಲವು ಸ್ಪಷ್ಟನೆಗಳನ್ನು ನೀಡುವುದು ಇಲ್ಲಿ ಅಗತ್ಯವಾಗಿದೆ. ವಾರ್ಧಾ ಸಮ್ಮೇಳನದಲ್ಲಿ ಹೊಮ್ಮಿದ ಈ ಮೂಲ ಶಿಕ್ಷಣದ ಯೋಜನೆ ನಾವು ಈ ವರದಿಯಲ್ಲಿ ವಿಶದೀಕರಿಸಿರುವಂತೆ ಸಮಗ್ರವಾಗಿರುವುದು. ಒಂದು ಪಕ್ಷ ಈ "ಸ್ವಾವಲಂಬನೆಯ" ಕೊರತೆ ಕಂಡು ಬಂದರೂ ಸಹ ಅತ್ಯಂತ ತುರ್ತಿನ ರಾಷ್ಟ್ರೀಯ ಪುನರ್ರಚನೆಯ ಉದ್ದೇಶಕ್ಕೆ ಒಂದು ಕ್ರಮವಾಗಿ ಮತ್ತು ಸಮಗ್ರ ಶಿಕ್ಷಣ ಕಾರ್ಯನೀತಿಯಾಗಿ ಸ್ವೀಕರಿಸುವುದು ಅಗತ್ಯವಿದೆ. ಆದಾಗ್ಯೂ, ಅದೃಷ್ಟವಶಾತ್ ಈ ಉತ್ತಮ ಶಿಕ್ಷಣವು ಅನುಗತವಾಗಿ ತನ್ನ ದಿನನಿತ್ಯದ ಹೆಚ್ಚಿನ ಖರ್ಚನ್ನು ಸ್ವತಃ ಭರಿಸಿಕೊಳ್ಳುವುದು. ನೂಲುವುದು ಮತ್ತು ನೇಯುವ ಕರಕೌಶಲ್ಯಕ್ಕೆ ಸಂಬಂಧಪಟ್ಟಂತೆ ಈ ವರದಿಯಲ್ಲಿರುವ ವಿವರವಾದ ಪಠ್ಯಕ್ರಮವನ್ನು ಗಮನಿಸಿದರೆ ವಾರ್ಧಾ ಸಮ್ಮೇಳನದ ಆಶಯಗಳಿಗೆ ಅದು ತಕ್ಕ ಮಟ್ಟಿಗೆ ಬದ್ಧವಾಗಿದೆ ಎನ್ನುವುದನ್ನು ಗಮನಿಸಬಹುದು. ಈ ಪಠ್ಯಕ್ರಮ ನೂಲುವ ಮತ್ತು ನೇಯುವಂತಹ ಮೂಲ ಕರಕೌಶಲ್ಯಗಳು ಹೇಗೆ ಶಾಲೆಯ ಆಯವ್ಯಯಕ್ಕೆ ತಮ್ಮ ಕೊಡುಗೆಯನ್ನು ನೀಡುತ್ತವೆ ಎನ್ನುವುದನ್ನು ಅಂಕಿಅಂಶಗಳ ಸಹಿತ ವಿವರಿಸುತ್ತವೆ.

ಈ ಕರಕೌಶಲ್ಯಗಳಿಗೆ ಸಂಬಂಧಿಸಿದಂತೆ ಮಹಾತ್ಮ ಗಾಂಧಿಯವರ ಮಾರ್ಗದರ್ಶನದಲ್ಲಿ ಕಳೆದ ಹದಿನೇಳು ವರ್ಷಗಳಿಂದಲೂ ನುರಿತ ಕೆಲಸ ನಡೆಯುತ್ತಿರುವುದರಿಂದ ಈ ಅಂಕಿಅಂಶಗಳನ್ನು ಪಡೆಯುವ ಕೆಲಸ ಕಷ್ಟಕರವೇನೂ ಆಗಿರಲಿಲ್ಲ. ಇಲ್ಲಿಯ ವೇತನಗಳನ್ನು ಮಹಾರಾಷ್ಟ್ರದ ಅಖಿಲ ಭಾರತ ನೂಲುವವರ ಸಂಘ ನಿರ್ಧರಿಸಿರುವ ಪ್ರಮಾಣಗಳ ಆಧಾರದ ಮೇಲೆ ನೀಡಲಾಗಿದೆ. ಉಳಿದ ಕರಕೌಶಲ್ಯಗಳ ಮಟ್ಟಿಗೆ ಪ್ರಸಕ್ತ ಮಾರುಕಟ್ಟೆ ಬೆಲೆಯನ್ನು ಆಧರಿಸಿ ನಿರ್ಧರಿಸಬಹುದು. ಮಹಾತ್ಮಾಜಿ ಸ್ಪಷ್ಟವಾಗಿ ಸೂಚಿಸಿರುವಂತೆ ಶಾಲೆಯಲ್ಲಿ ಭವಿಷ್ಯದ ಪ್ರಜೆಗಳು ತಯಾರಿಸುವ ಕರಕುಶಲ ವಸ್ತುಗಳನ್ನು ಪ್ರಭುತ್ವವು ಮೇಲೆ ಹೇಳಿರುವ ಬೆಲೆಯಲ್ಲಿ ಖರೀದಿಸಬೇಕು. ಅವರ ಈ ಸಲಹೆಯನ್ನು ನಾವು ಹೃತ್ಪೂರ್ವಕವಾಗಿ ಅನುಮೋದಿಸುತ್ತೇವೆ. "... ಪ್ರಭುತ್ವವು ಈ ಶಾಲಾಉತ್ಪನ್ನಗಳನ್ನು ಖರೀದಿಸುವುದಾದರೆ ಪ್ರತಿಯೊಂದು ಶಾಲೆಯೂ ಸ್ವಾವಲಂಬಿಗಳಾಗುವ ಸಾಮರ್ಥ್ಯವನ್ನು ಹೊಂದಲು ಸಾಧ್ಯ." (ಹರಿಜನ್, 31 ಜುಲೈ 1937)

ಈ ಆರ್ಥಿಕ ಸೂಚ್ಯ ಪರಿಣಾಮಗಳ ಹೊರತಾಗಿ, ಬೋಧನೆಯ ಮತ್ತು ಮಕ್ಕಳ ಕಲಿಕೆಯ ಸಂಪೂರ್ಣತೆ ಮತ್ತು ಪರಿಣಾಮಕಾರಿತ್ವದ ಗುಣಮಟ್ಟವನ್ನು ಅಳೆಯುವ ಪರಿಶೀಲನೆಯ ಮಾಪನವಿದ್ದರೆ ಉಪಯೋಗವಾಗಿರುವುದು ಎಂಬುದು ನಮ್ಮ ಅಭಿಪ್ರಾಯವಾಗಿದೆ. ಇಲ್ಲದಿದ್ದರೆ ಬದ್ಧತೆ ಸಡಿಲವಾಗಿ ತನ್ನೆಲ್ಲಾ ಶೈಕ್ಷಣಿಕ ಮೌಲ್ಯವನ್ನು ಕಳೆದುಕೊಳ್ಳುವ ಅಪಾಯವೇ ಹೆಚ್ಚು. ಶಿಕ್ಷಣತಜ್ಞರು ತಮ್ಮ ಶಾಲೆಗಳಲ್ಲಿ ಕಾಲಾ ಕಾಲಕ್ಕೆ ಪರಿಚಯಿಸಿದ “ದೈಹಿಕ ಶ್ರಮದ ತರಬೇತಿ” ಹಾಗೂ “ಪ್ರಾಯೋಗಿಕ ಚಟುವಟಿಕೆಗಳ” ಅನುಭವಗಳು ಇದನ್ನು ಸ್ಪಷ್ಟಪಡಿಸುತ್ತದೆ.

ಇಲ್ಲೊಂದು ಎಚ್ಚರಿಕೆಯ ಮಾತನ್ನು ನೀಡಬೇಕಾಗಿದೆ. ಈ ಯೋಜನೆಯನ್ನು ಕಾರ್ಯಗತಗೊಳಿಸುವ ಪ್ರಕ್ರಿಯೆಯಲ್ಲಿ ಅದರ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಉದ್ದೇಶಗಳನ್ನು ಮರೆತು ಅದರ ಆರ್ಥಿಕ ಆಯಾಮದ ಮೇಲೆಯೇ ಹೆಚ್ಚು ಒತ್ತು ಹಾಕುವ ಅಪಾಯವಿದೆ. ಶಿಕ್ಷಕರು ಮಕ್ಕಳಿಂದ ಆದಷ್ಟೂ ಹೆಚ್ಚಿನ ಮಟ್ಟಿಗೆ ಕೆಲಸ ತೆಗೆಯುವುದರ ಮೇಲೆಯೇ ತಮ್ಮ ಗಮನ ಮತ್ತು ಶಕ್ತಿಯನ್ನು ಕೇಂದ್ರೀಕರಿಸುತ್ತಾ ಆ ಕರಕೌಶಲ್ಯ ತರಬೇತಿಯಲ್ಲಿ ಅಡಕವಾಗಿರುವ ಬೌದ್ಧಿಕ, ಸಾಮಾಜಿಕ ಮತ್ತು ನೈತಿಕ ಪ್ರಭಾವಗಳನ್ನು ಮತ್ತು ಸಾಧ್ಯತೆಗಳನ್ನು ನಿರ್ಲಕ್ಷಿಸಬಹುದು. ಶಿಕ್ಷಕರ ತರಬೇತಿಯಲ್ಲಿ ಮತ್ತು ಮೇಲ್ವಿಚಾರಕರ ಕೆಲಸದ ನಿಯಮಗಳಲ್ಲಿ ಈ ಅಂಶವನ್ನು ನಿರಂತರವಾಗಿ ನೆನಪಿನಲ್ಲಿಡಬೇಕು. ಅದು ಎಲ್ಲಾ ಶೈಕ್ಷಣಿಕ ಚಟುವಟಿಕೆಗಳಲ್ಲಿ ಸ್ಪಷ್ಟವಾಗಿರಬೇಕು.

# ಧ್ಯೇಯೋದ್ದೇಶಗಳು

ನಮಗಿದ್ದ ಸೀಮಿತ ಸಮಯದಲ್ಲಿ ಮಗುವಿನ ಪೂರಾ ಏಳು ವರ್ಷಗಳ ಶಿಕ್ಷಣಕ್ಕೆ ಅನ್ವಯವಾಗುವ ಸಹ ಸಂಬಂಧಿತವಾಗಿರುವ ಹಾಗೂ ವಿವರಣಾತ್ಮಕ ಪಠ್ಯಕ್ರಮವನ್ನು ರೂಪಿಸಲಾಗಲಿಲ್ಲ. ಆದರೆ ಪ್ರತಿಯೊಂದು ಕರಕೌಶಲ್ಯಕ್ಕೆ ಪ್ರತ್ಯೇಕ ಶೀರ್ಷಿಕೆಗಳ ಅಡಿ ಹೊಸ ಶಾಲೆಗಳ ಧ್ಯೇಯೋದ್ದೇಶಗಳನ್ನು ಪಟ್ಟಿ ಮಾಡಿದ್ದೇವೆ. ಭವಿಷ್ಯದಲ್ಲಿ ಪ್ರತಿಯೊಂದು ಪ್ರಾಂತೀಯ ಶಿಕ್ಷಣ ಮಂಡಲಿ ನುರಿತ ಪಠ್ಯಕ್ರಮ ತಯಾರಕರನ್ನು ಒಳಗೊಂಡಿರಬೇಕು. ಅವರು ಏಳು ವರ್ಷದ ಪೂರ್ಣ ಅವಧಿಗೆ ಅನ್ವಯವಾಗುವಂತೆ ಸಹಸಂಬಂಧವಿರುವ ಮತ್ತು ವಿವರಣಾತ್ಮಕ ಪಠ್ಯಕ್ರಮವನ್ನು ತಯಾರಿಸುವ ಜವಾಬ್ದಾರಿಯನ್ನು ಹೊಂದಿರಬೇಕು. ಈ ಹೊಸ ಶಾಲೆಗಳ ಬಗೆಗಿನ ಅವರ ಅಮೂಲ್ಯ ಅವಲೋಕನಗಳ ಪರಿಣಾಮದಿಂದಾಗಿ ಶಿಕ್ಷಕರು ಸಮರ್ಥ ಉಸ್ತುವಾರಿ ಮತ್ತು ಮಾರ್ಗದರ್ಶನದ ಮೇರೆಗೆ ಕೆಲಸಮಾಡುವುದರಿಂದ ಈ ಕೆಲಸಕ್ಕೆ ಆಧಾರವಾಗುವ ವಿವರಗಳನ್ನು ಒದಗಿಸಬಲ್ಲರು. ಆದಾಗ್ಯೂ, ನಾವಿಲ್ಲಿ ಸಹಸಂಬಂಧವಿರುವ ಪಠ್ಯಕ್ರಮದ ಸ್ಥೂಲ ವಿವರಣೆಯೊಂದನ್ನು ನೀಡಲು ಪ್ರಯತ್ನಿಸಿದ್ದೇವೆ. ಅದನ್ನು ಈ ವರದಿಯ ಕೊನೆಯಲ್ಲಿ ಅನುಬಂಧವನ್ನಾಗಿ ಕೊಡಲಾಗಿದೆ.

## ಏಳು ವರ್ಷ ಅವಧಿಯ ಮೂಲ ಶಿಕ್ಷಣದ ರೂಪುರೇಷೆಗಳು

## I. ಮೂಲ ಕರಕೌಶಲ್ಯ

ವಿದ್ಯಾರ್ಥಿ ಏಳು ವರ್ಷಗಳ ಅವಧಿಯ ನಂತರ ಶಾಲೆಯಲ್ಲಿ ಕಲಿತದ್ದನ್ನು ತನ್ನ ವೃತ್ತಿಯನ್ನಾಗಿ ಆರಿಸಿಕೊಳ್ಳಲು ಸಾಧ್ಯವಾಗುವಂತೆ ಆಯ್ಕೆ ಮಾಡಿಕೊಂಡಿರುವ ಕರಕೌಶಲ್ಯದಲ್ಲಿ ಸಾಕಷ್ಟು ಸೂಕ್ತ ಪರಿಣಿತಿಯನ್ನು ಹೊಂದಿರಬೇಕು.

ವಿವಿಧ ಶಾಲೆಗಳಲ್ಲಿ ಕೆಳಕಂಡವುಗಳನ್ನು ಮೂಲ ಕರಕೌಶಲ್ಯಗಳಾಗಿ ಆಯ್ಕೆ ಮಾಡಿಕೊಳ್ಳಬಹುದು:

a. ನೂಲುವುದು ಮತ್ತು ನೇಯುವುದು.
b. ಮರಗೆಲಸ.
c. ವ್ಯವಸಾಯ.
d. ಹಣ್ಣು ಮತ್ತು ತರಕಾರಿ ಬೆಳೆಯುವಿಕೆ.
e. ಚರ್ಮಗಾರಿಕೆ.
f. ಈ ಹಿಂದೆ ಪ್ರಸ್ತಾಪಿಸಿದ ಎರಡು ಅಗತ್ಯ ಪೂರ್ವಭಾವಿ ಷರತ್ತುಗಳನ್ನು ಪೂರೈಸುವ ಆಯಾಯ ಸ್ಥಳೀಯ ಮತ್ತು ಭೌಗೋಳಿಕ ಸನ್ನಿವೇಶಕ್ಕೆ ಸೂಕ್ತವಾದ ಬೇರೆ ಯಾವುದೇ ಕರಕೌಶಲ್ಯ.

ನೂಲುವುದು ಮತ್ತು ನೇಯುವುದು, ಅಥವಾ ವ್ಯವಸಾಯದ ಬದಲು ಬೇರೆ ಯಾವುದೇ ಮೂಲ ಕೌಶಲ್ಯದ ಉದ್ಯಮವಿದ್ದರೂ ಸಹ ವಿದ್ಯಾರ್ಥಿಗಳು ಹತ್ತಿಯನ್ನು ಹಿಂಜುವುದು ಮತ್ತು ತಕಲಿ(takli)ಯ ಸಹಾಯದಿಂದ ನೂಲುವುದರ ಕನಿಷ್ಠ ಜ್ಞಾನವನ್ನು, ಹಾಗೂ ಸ್ಥಳೀಯ ಪ್ರದೇಶದ ಮೂಲ ವ್ಯವಸಾಯ ಕೆಲಸದ ಬಗ್ಗೆ ಪ್ರಾಯೋಗಿಕ ಪರಿಚಯವನ್ನಾದರೂ ಹೊಂದಿರುವುದು ಮುಖ್ಯವಾಗುತ್ತದೆ.

## II. ಮಾತೃಭಾಷೆ

ಮಾತೃಭಾಷೆಯನ್ನು ಸರಿಯಾಗಿ ಬೋಧಿಸುವುದು ಎಲ್ಲ ಶಿಕ್ಷಣದ ನಿಜವಾದ ನೆಲೆಗಟ್ಟು. ಸ್ಪಷ್ಟವಾಗಿ ಮಾತಾಡುವ ಹಾಗೂ ಸರಿಯಾಗಿ ಮತ್ತು ಸರಳವಾಗಿ ಅರ್ಥವಾಗುವಂತೆ ಓದಿ ಬರೆಯುವ ಶಕ್ತಿಯಿಲ್ಲದಿದ್ದಲ್ಲಿ ಯಾವುದೇ ಆಲೋಚನೆಯ ಬಗ್ಗೆ ನಿಖರತೆ ಅಥವಾ ವಿಚಾರಗಳ ಬಗ್ಗೆ ಸ್ಪಷ್ಟತೆಯನ್ನು ಬೆಳಸಿಕೊಳ್ಳಲು ಸಾಧ್ಯವಿಲ್ಲ. ಮೇಲಾಗಿ ಇದು ಮಗುವಿಗೆ ತನ್ನ ಜನರ ವಿಚಾರ, ಭಾವನೆ ಮತ್ತು ಆಸೆ ಆಕಾಂಕ್ಷೆಗಳ ಶ್ರೀಮಂತ ಪರಂಪರೆಯನ್ನು ಪರಿಚಯಿಸಲು ಒಂದು ಸಾಧನವಾಗುವುದರಿಂದ ಉತ್ತಮ ನೈತಿಕ ಹಾಗೂ ಸನ್ನಡತೆಯ ಮೌಲ್ಯಗಳನ್ನು ಅಂತರ್ಗತವಾಗಿಸುತ್ತಲೇ ಸಾಮಾಜಿಕ ಶಿಕ್ಷಣವನ್ನು ಒದಗಿಸಲು ಅಮೂಲ್ಯವಾದೊಂದು ಸಾಧನವಾಗುವ ಸಾಧ್ಯತೆಯಿದೆ. ಹಾಗೆಯೇ ಮಗುವಿನ ಸೌಂದರ್ಯ ಪ್ರಜ್ಞೆ ಮತ್ತು ಗ್ರಹಿಕೆಯನ್ನು ಸಹಜವಾಗಿ ಅಭಿವ್ಯಕ್ತಿಸಲು ಮಾತೃಭಾಷೆಯೇ ಅತ್ಯುತ್ತಮ ಸಾಧನ. ಸರಿಯಾದ ತರಬೇತಿ ಕ್ರಮವನ್ನು ಸಮರ್ಥವಾಗಿ ಬಳಸಿಕೊಂಡಲ್ಲಿ ಸಾಹಿತ್ಯದ ಓದು ಸಂತೋಷ ಮತ್ತು ಸೃಜನಶೀಲತೆಯ ನೆಲೆಯಾಗಿ ಒದಗಬಲ್ಲದು. ಇನ್ನೂ ಸಷ್ಟವಾಗಿ ಹೇಳಬೇಕೆಂದರೆ, ಏಳುವರ್ಷಗಳ ಕೊನೆಯಲ್ಲಿ ಈ ಕೆಳಗಿನ ಉದ್ದೇಶಗಳು ಈಡೇರಿರಬೇಕು:

1. ಮಗು ತನ್ನ ಸುತ್ತಮುತ್ತಲಿನ ವಾತಾವರಣದಲ್ಲಿ ಇರುವ ವಸ್ತು, ಜನ ಮತ್ತು ಆಗುಹೋಗುಗಳ ಬಗ್ಗೆ ಮುಕ್ತವಾಗಿ, ಸಹಜವಾಗಿ ಮತ್ತು ದಿಟ್ಟತನದಿಂದ ಸಂವಾದಿಸುವ ಶಕ್ತಿಯನ್ನು ಹೊಂದಿರಬೇಕು. ಈ ಸಾಮರ್ಥ್ಯ ಕ್ರಮೇಣ ಈ ಕೆಳಗಿನಂತೆ ವಿಸ್ತಾರಗೊಳ್ಳಬೇಕು:
2. ದಿನನಿತ್ಯದ ಬದುಕಿಗೆ ಸಂಬಂಧಪಟ್ಟ ಯಾವುದೇ ವಿಷಯಗಳ ಬಗ್ಗೆ ವಿದ್ಯಾರ್ಥಿ ಸ್ಪಷ್ಟವಾಗಿ, ಸುಸಂಬದ್ಧವಾಗಿ ಹಾಗೂ ಸಂಬಂಧಿತವಾಗಿ ಅರ್ಥವಾಗುವಂತೆ ಮಾತಾಡುವ ಶಕ್ತಿಯನ್ನು ಹೊಂದಬೇಕು.
3. ಸಾಮಾನ್ಯ ಮಟ್ಟಿಗೆ ಬರವಣಿಗೆಯಲ್ಲಿರುವ ಕ್ಲಿಷ್ಟವಾದ ಪಠ್ಯಭಾಗಗಳನ್ನು ವೇಗವಾಗಿ ಅರ್ಥವಾಗುವಂತೆ ಮನಸ್ಸಿನಲ್ಲಿಯೇ ಓದುಕೊಳ್ಳುವ ಶಕ್ತಿಯನ್ನು ಪಡೆದಿರಬೇಕು. (ಅಂದರೆ ವಿದ್ಯಾರ್ಥಿಯು ದೈನಂದಿನ ಆಸಕ್ತಿಯ ವಾರ್ತಾಪತ್ರಿಕೆ ಮತ್ತು ಇತರ ನಿಯತಕಾಲಿಕೆಗಳನ್ನು ಓದಿ ಅರ್ಥಮಾಡಿಕೊಳ್ಳುವಷ್ಟು ಸಾಮರ್ಥ್ಯವನ್ನು ಬೆಳಸಿಕೊಳ್ಳಬೇಕು.)
4. ಗದ್ಯ ಮತ್ತು ಪದ್ಯಗಳೆರಡನ್ನೂ ಆಸ್ವಾದಿಸಿಕೊಂಡು ಸ್ಪಷ್ಟವಾಗಿ ಮತ್ತು ಅರ್ಥಪೂರ್ಣವಾಗಿ ಓದುವ ಶಕ್ತಿಯನ್ನು ಹೊಂದಿರಬೇಕು. (ಯಾಂತ್ರಿಕವಾಗಿ ಮತ್ತು ನೀರಸವಾಗಿ ಓದುವ ಅಭ್ಯಾಸವನ್ನು ಬಿಟ್ಟಿರಬೇಕು.)
5. ಪರಿವಿಡಿ, ಸಂಖ್ಯೆಸೂಚಿ, ಅರ್ಥಕೋಶ ಮತ್ತು ಉಲ್ಲೇಖಿತ ಪುಸ್ತಕಗಳನ್ನು ಬಳಸುವ, ಹಾಗೂ ಗ್ರಂಥಾಲಯವನ್ನು ಮಾಹಿತಿಗಾಗಿ ಮತ್ತು ತೃಪ್ತಿಕೊಡುವ ಕಾರಣಕ್ಕಾಗಿ ಬಳಸಿಕೊಳ್ಳುವ ಶಕ್ತಿಯನ್ನು ಪಡೆದಿರಬೇಕು.
6. ತಕ್ಕ ಮಟ್ಟಿಗಿನ ವೇಗದಲ್ಲಿ ಸ್ಪಷ್ಟವಾಗಿ ಅರ್ಥವಾಗುವಂತೆ ಸರಿಯಾಗಿ ಬರೆಯಬೇಕು.
7. ದಿನನಿತ್ಯದ ಆಗುಹೋಗುಗಳನ್ನು ಸರಳ ಮತ್ತು ಸ್ಪಷ್ಟ ಬರವಣಿಗೆಯ ಶೈಲಿಯಲ್ಲಿ ವಿವರಿಸುವ ಶಕ್ತಿಯನ್ನು ಹೊಂದಿರಬೇಕು. ಉದಾಹರಣೆಗೆ ಹಳ್ಳಿಯಲ್ಲಿ ಪರಸ್ಪರ ಸಹಕಾರದ ಉದ್ದೇಶಕ್ಕೆ ನಡೆಯುವ ಸಭೆಗಳ ವರದಿಯನ್ನು ಬರೆಯುವಷ್ಟು.
8. ಸರಳ ರೀತಿಯ ವೈಯಕ್ತಿಕ ಮತ್ತು ವಾಣಿಜ್ಯಕ್ಕೆ ಸಂಬಂಧಪಟ್ಟ ಪತ್ರಗಳನ್ನು ಬರೆಯುವಂತಿರಬೇಕು.
9. ಪ್ರಸಿದ್ಧ ಲೇಖಕರ ಕೃತಿಗಳು ಅಥವಾ ಅವುಗಳ ಕೆಲವು ಭಾಗಗಳ ಮೇಲೆ ಅಧ್ಯಯನ ಮಾಡುವುದರ ಮೂಲಕ ಅವರ ಪರಿಚಯವನ್ನು ಮತ್ತು ಅವರ ಕೃತಿಗಳ ಬಗ್ಗೆ ಆಸಕ್ತಿಯನ್ನು ಹೊಂದಿರಬೇಕು.

## III. ಗಣಿತಶಾಸ್ತ್ರ

ಇದರ ಧ್ಯೇಯ ಮಕ್ಕಳಲ್ಲಿ ಸಂಖ್ಯಾಪ್ರಜ್ಞೆಯನ್ನು ಬೆಳೆಸುವುದು. ತಮ್ಮ ಕರಕೌಶಲ್ಯ, ಮನೆ ಮತ್ತು ಸಮುದಾಯದ ಬದುಕಿನಲ್ಲಿ ಸಂಖ್ಯೆಗಳು ಮತ್ತು

ರೇಖಾಗಣಿತಶಾಸ್ತ್ರಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ವಿದ್ಯಾರ್ಥಿಗಳು ಚುರುಕಾಗಿ ಬಗೆಹರಿಸಿಕೊಳ್ಳಲು ಸಾಧ್ಯವಾಗಬೇಕು. ವಿದ್ಯಾರ್ಥಿಗಳು ವ್ಯವಹಾರ ಅಭ್ಯಾಸಗಳು ಮತ್ತು ಲೆಕ್ಕ ಇಡುವುದರ ಬಗ್ಗೆಯೂ ಸಹ ಜ್ಞಾನವನ್ನು ಗಳಿಸಿರಬೇಕು.

ನಮ್ಮ ಅಭಿಪ್ರಾಯದಲ್ಲಿ ಈ ಉದ್ದೇಶಗಳು ಈಡೇರಲು ಈ ಕೆಳಗಿನ ವಿಷಯಗಳ ಜ್ಞಾನ ಮತ್ತು ಸಾಕಷ್ಟು ಅಭ್ಯಾಸ ಎರಡೂ ಅಗತ್ಯ:

ನಾಲ್ಕು ಸರಳ ನಿಯಮಗಳು; ನಾಲ್ಕು ಮಿಶ್ರ ನಿಯಮಗಳು; ಭಿನ್ನರಾಶಿಗಳು; ದಶಾಂಶಗಳು; ಮೂರರ ಅನುಪಾತಗಳು; ಏಕಮಾನ ಪದ್ಧತಿ; ಬಡ್ಡಿ; ಕ್ಷೇತ್ರಗಣಿತದ ಅಂಶಗಳು; ಪ್ರಾಯೋಗಿಕ ರೇಖಾಗಣಿತ; ಮತ್ತು ಲೆಕ್ಕ ಇಡುವಿಕೆಯ ಮೂಲ ಜ್ಞಾನ.

ಬೋಧನೆ ಕೇವಲ ನಿಜಾಂಶಗಳಿಗೆ ಮತ್ತು ಅಂಕಿಅಂಶಗಳಿಗೆ ಸೀಮಿತವಾಗಬಾರದು. ಅದು ಕಲಿಸುತ್ತಿರುವ ಮೂಲ ಕರಕೌಶಲ್ಯದ ನೆಲೆಯಿಂದ ಅನೇಕ ಮತ್ತು ವಿವಿಧ ವಾಸ್ತವ ಸಮಸ್ಯೆಗಳಿಂದ ಹೊಮ್ಮುವ ಶಾಲೆಯ ಮತ್ತು ಸಮುದಾಯದ ಬದುಕಿನ ಪರಿಸ್ಥಿತಿಗಳೊಂದಿಗೆ ಸಮನ್ವಯಿಸಿದ್ದಾಗಿರಬೇಕು. ಅದಕ್ಕೆ ಸಂಬಂಧಪಟ್ಟ ಪ್ರಮಾಣಗಳ ಅಳತೆ ಮತ್ತು ಸಂಖ್ಯಾತ್ಮಕ ಮೌಲ್ಯಗಳ ಕಲಿಕೆ ವಿದ್ಯಾರ್ಥಿಯ ತಾರ್ಕಿಕ ಸಾಮರ್ಥ್ಯವನ್ನು ಹೆಚ್ಚಿಸುವ ಅವಕಾಶಗಳನ್ನು ಹೇರಳವಾಗಿ ಒದಗಿಸಬಲ್ಲದು.

## IV. ಸಾಮಾಜಿಕ ಅಧ್ಯಯನ

**ಉದ್ದೇಶಗಳು:**

- ಸಾಮಾನ್ಯವಾಗಿ ಮಾನವಕುಲದ ಪ್ರಗತಿಯಲ್ಲಿ ಮತ್ತು ವಿಶೇಷವಾಗಿ ಭಾರತದ ಪ್ರಗತಿಯಲ್ಲಿ ವಿಶಾಲ ಮಾನವಾಸಕ್ತಿಯನ್ನು ಬೆಳೆಸುವುದು.
- ವಿದ್ಯಾರ್ಥಿಯ ಸಾಮಾಜಿಕ ಮತ್ತು ಭೌಗೋಳಿಕ ಹಿನ್ನೆಲೆಯ ಬಗ್ಗೆ ಸರಿಯಾದ ತಿಳುವಳಿಕೆಯನ್ನು ಬೆಳೆಸುವುದರ ಜೊತೆಗೆ ಅದನ್ನು ಉತ್ತಮಪಡಿಸುವ ಉತ್ಸಾಹವನ್ನು ಮೂಡಿಸುವುದು.
- ತಾಯ್ನಾಡಿನ ಬಗ್ಗೆ ಪ್ರೀತಿ, ಅದರ ಗತದ ಬಗ್ಗೆ ಗೌರವ, ಮತ್ತು ಒಗ್ಗಟ್ಟು, ಪ್ರೀತಿ, ಸತ್ಯ ಮತ್ತು ನ್ಯಾಯಗಳಿಗೆ ಬದ್ಧವಾದ ಭವಿಷ್ಯದ ಒಂದು ಒಗ್ಗಟ್ಟಿನ ಸಹಕಾರ ಸಮುದಾಯದ ನೆಲೆಯಾಗಿ ಅದರ ಬಗ್ಗೆ ನಂಬಿಕೆಯನ್ನು ಮೂಡಿಸುವುದು.
- ಪೌರತ್ವದ ಹಕ್ಕು ಮತ್ತು ಜವಾಬ್ದಾರಿಗಳ ಬಗ್ಗೆ ಅರಿವನ್ನು ಬೆಳೆಸುವುದು.
- ವಿಶ್ವಾಸಾರ್ಹ ಸಹಪ್ರಜೆ ಮತ್ತು ನಂಬಲರ್ಹ ನೆರೆಯಾಗಲು ಬೇಕಾದ ಎಲ್ಲ ವ್ಯಕ್ತಿಗತ ಮತ್ತು ಸಾಮಾಜಿಕ ಗುಣಗಳನ್ನು ಬೆಳೆಸುವುದು.

- ವಿಶ್ವಧರ್ಮಗಳ ಬಗ್ಗೆ ಪರಸ್ಪರ ಗೌರವವನ್ನು ಬೆಳೆಸುವುದು.

ಮೂಲಸತ್ವದಲ್ಲಿ ಎಲ್ಲ ವಿಶ್ವಧರ್ಮಗಳೂ ಒಂದೇ ಎಂಬ ಗೌರವಾನ್ವಿತ ಅಧ್ಯಯನದೊಂದಿಗೆ ಕೂಡಿದ ಇತಿಹಾಸ, ಭೂಗೋಳ, ಪೌರನೀತಿ, ಮತ್ತು ಪ್ರಸಕ್ತ ವಿದ್ಯಮಾನಗಳ ಪಠ್ಯಕ್ರಮ ಈ ಉದ್ದೇಶಗಳು ಸಫಲವಾಗಿ ಈಡೇರುವಲ್ಲಿ ಸಹಾಯ ಮಾಡುತ್ತವೆ. ಈ ಅಧ್ಯಯನ ಮಗುವಿನ ಸುತ್ತಮುತ್ತಲ ಪರಿಸರ ಮತ್ತು ಅದರ ಸಮಸ್ಯೆಗಳೊಂದಿಗೆ ಪ್ರಾರಂಭವಾಗಬೇಕು. ಮಾನವಕುಲ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಹೇಗೆ ಹಲವಾರು ಮಾರ್ಗಗಳನ್ನು ಅನುಸರಿಸುತ್ತದೆ ಎನ್ನುವುದರ ಬಗ್ಗೆ ವಿದ್ಯಾರ್ಥಿಯಲ್ಲಿ ಆಸಕ್ತಿ ಹುಟ್ಟಿಸುವಂತಿರಬೇಕು. ಮಹಿಳೆಯರ ಮತ್ತು ಪುರುಷರ ಬದುಕು ಮತ್ತು ಕೊಡುಗೆಗಳ ಬಗ್ಗೆ ಕುತೂಹಲವನ್ನು ಬೆಳೆಸಲು ಇದು ಪ್ರಾರಂಭಿಕ ಪ್ರಕ್ರಿಯೆಯಾಗಿ ರೂಪುಗೊಳ್ಳಬೇಕು.

1. ಮಗುವಿನ ಪಠ್ಯಕ್ರಮ ಭಾರತೀಯ ಇತಿಹಾಸದ ಸ್ಥೂಲವಾದ ವಿವರಣೆಯನ್ನು ಹೊಂದಿರಬೇಕು. ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಮಹತ್ತರ ಮೈಲಿಗಲ್ಲುಗಳಿಗೆ ಪ್ರಾಮುಖ್ಯತೆ ನೀಡುತ್ತಾ ಅವುಗಳು ಹೇಗೆ ಕ್ರಮೇಣ ಹೆಚ್ಚಿನ ರಾಜಕೀಯ ಮತ್ತು ಸಾಂಸ್ಕೃತಿಕ ಐಕ್ಯತೆಯತ್ತ ಚಲಿಸಿದವು ಎನ್ನುವುದನ್ನು ವಿವರಿಸಬೇಕು. ಅಂತಹ ವಿವರಣೆ ಪ್ರೀತಿ, ಸತ್ಯ ಮತ್ತು ನ್ಯಾಯ, ಸಹಕಾರಿ ಪ್ರಯತ್ನಗಳು, ರಾಷ್ಟ್ರೀಯ ಐಕ್ಯತೆ, ಮತ್ತು ಮನುಷ್ಯರ ನಡುವಿನ ಸಮಾನತೆ ಮತ್ತು ಸಹಭಾವಗಳಿಗೆ ವಿಶೇಷ ಒತ್ತು ನೀಡಬೇಕು. ಮೊದಲ ಹಂತಗಳಲ್ಲಿ ಜೀವನಚರಿತ್ರೆಗಳಿಗೆ ಪ್ರಾಮುಖ್ಯತೆ ನೀಡಿದರೆ ನಂತರದಲ್ಲಿ ಸಾಮಾಜಿಕ ಮತ್ತು ಸಾಂಸ್ಕೃತಿಕ ಕಲಿಕೆಗಳಿಗೆ ಮಹತ್ವ ನೀಡಬೇಕು. ಗತದ ಬಗೆಗಿನ ಹೆಮ್ಮೆ ಕ್ರಮೇಣ ದುರಭಿಮಾನದಿಂದ ಕೂಡಿದ ಪ್ರತ್ಯೇಕಿಸುವ ರಾಷ್ಟ್ರೀಯತೆಗೆ ಜಾರದಂತೆ ಎಚ್ಚರ ವಹಿಸಬೇಕು. ಮನುಷ್ಯಕುಲದ ಮಹಾನ್ ಹೋರಾಟಗಾರರ ಮತ್ತು ಅವರ ಶಾಂತಿಯ ವಿಜಯಗಳ ಕಥೆಗಳು ಪಠ್ಯಕ್ರಮದಲ್ಲಿ ಪ್ರಮುಖ ಸ್ಥಾನವನ್ನು ಪಡೆಯಬೇಕು. ಅನ್ಯಾಯ ಮತ್ತು ಕಪಟತನಗಳ ಮೇಲೆ ಜಯ ಸಾಧಿಸಬಲ್ಲ ಸತ್ಯ, ಅಹಿಂಸೆ ಮೊದಲಾದ ಗುಣಗಳ ಹಿರಿಮೆಯನ್ನು ಸಾರುವ ಬದುಕಿನ ಪಾಠಗಳಿಗೆ ಆದ್ಯತೆ ಇರಬೇಕು. ಭಾರತೀಯ ರಾಷ್ಟ್ರೀಯ ಪ್ರಜ್ಞೆ ಎಚ್ಚೆತ್ತುಕೊಂಡ ಇತಿಹಾಸದೊಂದಿಗೆ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ವಾತಂತ್ರ್ಯ ಹೋರಾಟದ ಕಡೆಗೆ ಹೆಜ್ಜೆ ಹಾಕಿದ ರೀತಿಯನ್ನು ಗೌರವದಿಂದ ಅರ್ಥಮಾಡಿಕೊಳ್ಳುವ ವಿದ್ಯಾರ್ಥಿಯ ಕಲಿಕೆಯು ಈ ಸ್ಥಿತ್ಯಂತರದ ಒತ್ತಡವನ್ನು ತಾಳುವಂತೆ ಮತ್ತು ತಮ್ಮ ಹೊರೆಯ ಪಾಲನ್ನು ಸಂತೋಷದಿಂದ ಹೊರಲು ಸಿದ್ಧಪಡಿಸಬೇಕು. ರಾಷ್ಟ್ರೀಯ ಹಬ್ಬ ಮತ್ತು 'ರಾಷ್ಟ್ರೀಯ ಸಪ್ತಾಹ' ದ ಆಚರಣೆ ಪ್ರತಿಯೊಂದು ಶಾಲಾಬದುಕಿನ ಅಂಗವಾಗಿರಬೇಕು.

2. ವಿದ್ಯಾರ್ಥಿಗಳು ಲಭ್ಯವಿರುವ ಸಾರ್ವಜನಿಕ ಸೇವೆ ಮತ್ತು ಜನಸೇವಕರ ಕರ್ತವ್ಯಗಳ ಬಗ್ಗೆ ತಿಳುವಳಿಕೆಯನ್ನು ಹೊಂದಿರುವುದು ಅವಶ್ಯಕ. ಪಂಚಾಯತ್ ಮತ್ತು ಸಹಕಾರ ಸಂಘಗಳು ಕೆಲಸ ಮಾಡುವ ರೀತಿ ಮತ್ತು ತಾಲ್ಲೂಕು ಮಂಡಳಿ ಮತ್ತು ಪುರಸಭೆಗಳ ರಚನೆ, ಮತ ಚಲಾವಣೆಯ ಉಪಯೋಗ ಮತ್ತು ಮಹತ್ವ, ಹಾಗೂ ಪ್ರಾತಿನಿಧಿಕ ಸಂಸ್ಥೆಗಳ ಬೆಳವಣಿಗೆ ಮತ್ತು ಮಹತ್ವದ ಬಗೆಗಿನ ಅರಿವು ತುಂಬ ಮುಖ್ಯ. ಇವುಗಳ ಬಗ್ಗೆ ನೀಡುವ ತಿಳುವಳಿಕೆ ಆದಷ್ಟೂ ವಾಸ್ತವಕ್ಕೆ ಮತ್ತು ಬದುಕಿಗೆ ಹತ್ತಿರವಿರಬೇಕಾದ್ದು ಅತ್ಯಗತ್ಯ. ಸ್ವಯಂ ನಿರ್ವಹಣಾ ಸಂಸ್ಥೆಗಳ ಮಾದರಿಯನ್ನು ಶಾಲೆಯಲ್ಲೇ ಪರಿಚಯಿಸಬೇಕು. ವಿದ್ಯಾರ್ಥಿಗಳು ವಿಶೇಷವಾಗಿ ಶಾಲಾ ಸಮುದಾಯವೇ ಹೊರತರುವ ಪತ್ರಿಕೆಗಳನ್ನು ಪರಸ್ಪರ ಸಹಕಾರದಿಂದ ಓದುವುದರ ಮೂಲಕ ಪ್ರಸಕ್ತ ವಿದ್ಯಮಾನಗಳ ಬಗ್ಗೆ ಜ್ಞಾನ ಹೊಂದುವಂತಿರಬೇಕು.
3. ಮಕ್ಕಳು ಕಲಿಯುವ ಸಾಮಾಜಿಕ ಅಧ್ಯಯನ ಸ್ಥೂಲವಾಗಿ ವಿಶ್ವದ ಭೌಗೋಳಿಕ ಅರಿವನ್ನು ನೀಡಬೇಕು. ಭಾರತದ ಬಗ್ಗೆ ಹೆಚ್ಚಿನ ಜ್ಞಾನವನ್ನು ನೀಡುವುದರ ಜೊತೆಗೆ ಇತರ ದೇಶಗಳೊಂದಿಗೆ ಇರುವ ಸಂಬಂಧದ ಸ್ವರೂಪದ ಬಗ್ಗೆ ತಿಳುವಳಿಕೆಯನ್ನು ನೀಡಬೇಕು. ಅದು ಈ ಕೆಳಗಿನ ಅಂಶಗಳನ್ನು ಒಳಗೊಳ್ಳಬೇಕು:

   a. ತಾಯ್ನೆಲದಲ್ಲಿ ಮತ್ತು ಬೇರೆ ಪ್ರದೇಶಗಳಲ್ಲಿ ಸಸ್ಯ, ಪ್ರಾಣಿ ಮತ್ತು ಮನುಷ್ಯನ ಬದುಕು ಹೇಗೆ ನೈಸರ್ಗಿಕ ನಿಯಮಗಳಿಗೆ ಒಳಪಟ್ಟಿವೆ ಎನ್ನುವ ಅಧ್ಯಯನವನ್ನು ಸ್ಥಳೀಯ ವಾಸ್ತವಾಂಶ ಹಾಗೂ ವಿದ್ಯಮಾನಗಳನ್ನು ಉಲ್ಲೇಖಿಸುವುದರೊಂದಿಗೆ ಕಥೆ, ವಿವರಣೆ, ಚಿತ್ರದ ಅರ್ಥವಿವರಣೆ, ಪ್ರಾಯೋಗಿಕ ವೀಕ್ಷಣೆ ಮತ್ತು ಚರ್ಚೆಗಳ ಸಮೇತ ಮಕ್ಕಳಿಗೆ ಮನದಟ್ಟು ಮಾಡಿಕೊಡಬೇಕು.
   b. ಹವಾಮಾನದಲ್ಲಾಗುವ ವಿದ್ಯಮಾನಗಳ ಅಧ್ಯಾಯನ ಮತ್ತು ಅವುಗಳ ಪ್ರಾತಿನಿಧ್ಯತೆ; (ಮುಖ್ಯವಾಗಿ ತರಗತಿಯ ಹೊರಗಿನ ಕಲಿಕೆ. ಉದಾಹರಣೆಗೆ ಸೂರ್ಯನ ಸೂರ್ಯನ ಬೆಳಕಿನ ನೇರ ವೀಕ್ಷಣೆ; ಮಧ್ಯಾಹ್ನ ಸೂರ್ಯನ ಕಿರಣ ಶಾಖದಲ್ಲಾಗುವ ಬದಲಾವಣೆಗಳನ್ನು ವರ್ಷದ ವಿವಿಧ ಹಂತಗಳಲ್ಲಿ ಗಮನಿಸುವುದು; ಹವಾಮಾನ ದಿಕ್ಸೂಚಿಯನ್ನು ಓದುವುದು; ಉಷ್ಣಮಾಪನ ಮತ್ತು ವಾಯುಪನಗಳ ಮೂಲಕ ಉಷ್ಣ ಮತ್ತು ವಾಯುಭಾರಗಳನ್ನು ಅಳೆಯುವ ರೀತಿಯನ್ನು ಗಮನಿಸುವುದು; ಮಳೆಗಾಲ ಮತ್ತು ಶುಷ್ಕ ಕಾಲಗಳನ್ನು ಹಾಗೂ ಮಳೆಯನ್ನು ದಾಖಲಿಸುವುದು; ಗಾಳಿಯ ದಿಕ್ಕನ್ನು ಗಮನಿಸುವುದು; ಮತ್ತು ಬೇರೆ ಬೇರೆ ತಿಂಗಳುಗಳಲ್ಲಿ ದಿನ ಮತ್ತು ರಾತ್ರಿಗಳ ಕಾಲಾವಧಿಯನ್ನು ದಾಖಲಿಸುವುದು ಇತ್ಯಾದಿ ಚಟುವಟಿಕೆಗಳು.)

c. ಭೂಪಟದ ನಕ್ಷೆಯನ್ನು ತಯಾರಿಸುವ ಮತ್ತು ಅರ್ಥ ಮಾಡಿಕೊಳ್ಳುವ ಬಗೆ; ಭೂಮಿ ಗುಂಡಾಗಿದೆ ಎನ್ನುವ ಅರಿವು; ಸ್ಥಳೀಯ ಸ್ಥಳವಿವರಣೆಯ ಅಧ್ಯಯನ; ನೆರೆಹೊರೆಯ ಯೋಜನೆಗಳ ತಯಾರಿಕೆ ಮತ್ತು ಪರಿಶೀಲನೆ; ಸಾಂಪ್ರದಾಯಿಕ ಚಿಹ್ನೆಗಳ ಗುರುತಿಸುವಿಕೆ; ಭೂಪಟದ ಮತ್ತು ಅದರ ಸೂಚಿಗಳ ಅರಿವು ಮತ್ತು ಬಳಕೆ ಇತ್ಯಾದಿಗಳ ಬಗ್ಗೆ ಗಮನ ಕೊಡಬೇಕು.
d. ಉದ್ಯಮ ಮತ್ತು ಬದುಕಿಗೆ ಸಹಸಂಬಂಧಿಸಿ ಸಂಪರ್ಕ ಮತ್ತು ಸಾಗಾಣಿಕೆಗಳ ಬಗೆಗಿನ ಅರಿವನ್ನು ಪರಿಚಯಿಸಬೇಕು.
e. ವಿವಿಧ ಉದ್ಯೋಗಗಳು; ಹೊಲಗದ್ದೆಗಳು ಮತ್ತು ಕಾರ್ಖಾನೆಗಳ ಭೇಟಿಯನ್ನೊಳಗೊಂಡ ಸ್ಥಳೀಯ ವ್ಯವಸಾಯ ಮತ್ತು ಉದ್ಯಮಗಳು; ಆರ್ಥಿಕ ಸ್ವಾವಲಂಬನೆ ಮತ್ತು ವಿವಿಧ ಪ್ರದೇಶಗಳ ಪರಸ್ಪರ ಅವಲಂಬನೆ; ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿರುವ ವ್ಯವಸಾಯ ಮತ್ತು ಉದ್ಯಮ ವಿಧಗಳು; ಮತ್ತು ಭಾರತದ ಪ್ರಮುಖ ಉದ್ಯಮಗಳ ಬಗ್ಗೆ ಪರಿಚಯವನ್ನು ಒಳಗೊಂಡಿರಬೇಕು.

## V. ಸಾಮಾನ್ಯ ವಿಜ್ಞಾನ

**ಉದ್ದೇಶಗಳು:**

1. ವಿದ್ಯಾರ್ಥಿಗಳಿಗೆ ನಿಸರ್ಗದ ಬಗ್ಗೆ ಅರಿವು ಮತ್ತು ಪ್ರೀತಿಗೌರವಗಳು ತುಂಬಿದ ದೃಷ್ಟಿಕೋನವನ್ನು ರೂಪಿಸುವುದು.
2. ನಿಖರವಾದ ವೀಕ್ಷಣೆ ಮತ್ತು ಅನುಭವವನ್ನು ಪ್ರಯೋಗಕ್ಕೊಳಪಡಿಸುವ ಅಭ್ಯಾಸಗಳನ್ನು ವಿದ್ಯಾರ್ಥಿಗಳಲ್ಲಿ ಬೆಳೆಸುವುದು.
3. ನಿಸರ್ಗದ ವಿದ್ಯಮಾನಗಳಲ್ಲಿ ಮತ್ತು ವಿಜ್ಞಾನವನ್ನು ಮನುಷ್ಯಕುಲದ ಒಳಿತಿಗೆ ಬಳಸುವುದರಲ್ಲಿ ಇರುವ ಮುಖ್ಯ ವೈಜ್ಞಾನಿಕ ನಿಯಮಗಳನ್ನು ಗುರುತಿಸಲು ವಿದ್ಯಾರ್ಥಿಗಳಿಗೆ ಸಾಧ್ಯವಾಗಿಸಬೇಕು.
4. ಸತ್ಯದ ಅನ್ವೇಷಣೆಗೆಂದು ತ್ಯಾಗಮಾಡಿದ ಮಹಾನ್ ವಿಜ್ಞಾನಿಗಳ ಬದುಕಿನ ಪ್ರಮುಖ ಘಟನೆಗಳು ಬೆಳೆಯುವ ಮನಸ್ಸನ್ನು ಗಾಢವಾಗಿ ಪ್ರಭಾವಿಸಬಲ್ಲವು. ಮಕ್ಕಳಿಗೆ ಅವುಗಳ ಪರಿಚಯ ಮಾಡಿಕೊಡಬೇಕು.

ಮಕ್ಕಳ ಪಠ್ಯಕ್ರಮದಲ್ಲಿ ವಿವಿಧ ವಿಜ್ಞಾನಗಳ ಈ ಕೆಳಗಿನ ವಿಷಯಗಳನ್ನು ಸೇರಿಸುವುದು:

### A. ನಿಸರ್ಗ ಅಧ್ಯಯನ

a. ಚಿ. ಸುತ್ತಮುತ್ತಲ ವಾತಾವರಣದಲ್ಲಿ ಇರುವ ಸಸ್ಯ, ಪ್ರಾಣಿ, ಪಕ್ಷಿ, ಮತ್ತು ಬೆಳೆಗಳ ಜ್ಞಾನ.
b. ಋತುಮಾನದಲ್ಲಿನ ಬದಲಾವಣೆಗಳು ಮತ್ತು ಸಸ್ಯ, ಪ್ರಾಣಿ, ಪಕ್ಷಿ ಮತ್ತು ಮನುಷ್ಯನ ಮೇಲೆ ಅದರಿಂದಾಗುವ ಪರಿಣಾಮಗಳ ಜ್ಞಾನ.
c. ವಿವಿಧ ಋತುಮಾನಗಳಲ್ಲಿ ಬೆಳೆಯುವ ವಿವಿಧ ಬೆಳೆಗಳ ಜ್ಞಾನ.

**B. ಸಸ್ಯ ವಿಜ್ಞಾನ**

a. ಸಸ್ಯದ ವಿವಿಧ ಭಾಗಗಳು ಮತ್ತು ಅವು ನಿರ್ವಹಿಸುವ ಕಾರ್ಯಗಳು.
b. ಅವುಗಳ ಹುಟ್ಟು, ಬೆಳವಣಿಗೆ ಮತ್ತು ಪ್ರಸರಣ ಪ್ರಕ್ರಿಯೆಗಳು.
c. ಸುತ್ತಮುತ್ತಲ ಬಯಲಲ್ಲಿ ಮತ್ತು ಶಾಲಾತೋಟದಲ್ಲಿ ಮಕ್ಕಳನ್ನು ಕೆಲಸಕ್ಕೆ ಹಚ್ಚಿ ಬೆಳಕು, ಶಾಖ ಮತ್ತು ತೇವ ಇತ್ಯಾದಿ ನೈಸರ್ಗಿಕ ಅಂಶಗಳ ಪರಿಣಾಮ ಹಾಗೂ ವಿವಿಧ ರೀತಿಯ ಬೀಜ ಮತ್ತು ಗೊಬ್ಬರಗಳ ಬಗ್ಗೆ ತಿಳುವಳಿಕೆ ನೀಡುವುದು.

**C. ಪ್ರಾಣಿಶಾಸ್ತ್ರ**

ಮನುಷ್ಯನಿಗೆ ಮಿತ್ರನಾಗಿಯೋ ಅಥವಾ ಶತ್ರುವಾಗಿಯೋ ಇರುವ ಕೀಟ, ಪಕ್ಷಿ, ಸರೀಸೃಪ, ಮತ್ತು ಸೂಕ್ಷ್ಮಜೀವಿಗಳ ಬಗ್ಗೆ ಅಧ್ಯಯನ.

**D. ಶರೀರಶಾಸ್ತ್ರ**

ಮನುಷ್ಯದೇಹದ ರಚನೆ, ವಿವಿಧ ಅಂಗಗಳು ಮತ್ತು ಅವುಗಳು ನಿರ್ವಹಿಸುವ ಕಾರ್ಯಗಳು.

**E. ಆರೋಗ್ಯಶಾಸ್ತ್ರ**

a. ಹಲ್ಲು, ನಾಲಿಗೆ, ಉಗುರು, ಕಣ್ಣು, ಕೂದಲು, ಮೂಗು, ಚರ್ಮ, ಬಟ್ಟೆಗಳ ಶುಚಿಯೂ ಸೇರಿದಂತೆ ವೈಯಕ್ತಿಕ ಸ್ವಚ್ಛತೆ.
b. ಮಲವಿಸರ್ಜನೆ ಸೇರಿದಂತೆ ಮನೆ ಮತ್ತು ಹಳ್ಳಿಯ ಸ್ವಚ್ಛತೆ ಮತ್ತು ನೈರ್ಮಲ್ಯ.
c. ಹಳ್ಳಿಯ ಬಾವಿ, ಶುದ್ಧ ನೀರಿನ ಬಗ್ಗೆ ಅರಿವು.
d. ಶುದ್ಧವಾದ ಗಾಳಿ ಮತ್ತು ಅದರ ಶುದ್ಧೀಕರಣದಲ್ಲಿ ಮರಗಳ ಪಾತ್ರ; ಸರಿಯಾದ ಉಸಿರಾಟ.
e. ಶುದ್ಧ ಮತ್ತು ಅಶುದ್ಧ ಆಹಾರಗಳ ನಡುವಿನ ವ್ಯತ್ಯಾಸ; ಸಮತೋಲನ ಆಹಾರ.
f. ಪ್ರಥಮ ಚಿಕಿತ್ಸೆ ಮತ್ತು ಸರಳ ಪರಿಹಾರಗಳು.

g. ಸಾಮಾನ್ಯ ಸೋಂಕು; ಸಾಂಕ್ರಾಮಿಕ ರೋಗಗಳು; ಅವುಗಳನ್ನು ತಡೆಯುವ ಬಗ್ಗೆ.
h. ಉತ್ತಮ ನಡವಳಿಕೆ ಆರೋಗ್ಯವನ್ನು ಸಂರಕ್ಷಿಸುವುದರ ಬಗ್ಗೆ .

**F. ವ್ಯಾಯಾಮ**

ಅಂಗಸಾಧನೆ, ಆಟೋಟ, ಕವಾಯತು (ದೇಸೀಯ ಆಟಗಳಿಗೆ ವಿಶೇಷ ಪ್ರೋತ್ಸಾಹ ನೀಡಬೇಕು).

**G. ರಸಾಯನಶಾಸ್ತ್ರ**

ಗಾಳಿ, ನೀರು, ಆಮ್ಲ, ಕ್ಷಾರ, ಮತ್ತು ಲವಣಗಳ ಬಗ್ಗೆ ಅರಿವು.

**H. ನಕ್ಷತ್ರಗಳ ಬಗ್ಗೆ ಜ್ಞಾನ**

ರಾತ್ರಿಯ ಹೊತ್ತಿನಲ್ಲಿ ಕಾಲ ಮತ್ತು ದಿಕ್ಕಿನ ಬಗ್ಗೆ ಅರಿವು.

**I. ಕಥೆಗಳು**

ಮನುಷ್ಯ ಕುಲದ ಒಳಿತಿಗೆ ಕೊಡುಗೆಯನ್ನಿತ್ತ ಮಹಾನ್ ವಿಜ್ಞಾನಿಗಳ ಮತ್ತು ಅನ್ವೇಷಕರ ಬಗೆಗಿನ ಕಥೆಗಳು.

**VI. ಚಿತ್ರಕಲೆ**

**ಉದ್ದೇಶಗಳು:**

1. ವಿವಿಧ ರೀತಿಯ ಬಣ್ಣ ಮತ್ತು ಆಕಾರಗಳನ್ನು ಸರಿಯಾಗಿ ವೀಕ್ಷಿಸಲು ಮತ್ತು ಗ್ರಹಿಸಲು ಕಣ್ಣಿಗೆ ತರಬೇತು ನೀಡುವುದು.
2. ಆಕಾರಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳುವ ಶಕ್ತಿಯನ್ನು ಬೆಳೆಸುವುದು.
3. ನಿಸರ್ಗ ಮತ್ತು ಕಲೆಯಲ್ಲಿ ಇರುವ ಚೆಲುವಿನ ಅರಿವು ಮತ್ತು ಮೆಚ್ಚುಗೆ ವ್ಯಕ್ತಪಡಿಸುವ ಶಕ್ತಿಯನ್ನು ಬೆಳೆಸುವುದು.
4. ಮಕ್ಕಳಲ್ಲಿರುವ ಕಲಾತ್ಮಕ ವಿನ್ಯಾಸ ಮತ್ತು ಅಲಂಕಾರ ಶಕ್ತಿಯನ್ನು ಪ್ರೋತ್ಸಾಹಿಸುವುದು.
5. ತಯಾರಿಸಬಲ್ಲ ವಸ್ತುಗಳ ರೇಖಾಚಿತ್ರಗಳನ್ನು ರೂಪಿಸುವ ಶಕ್ತಿಯನ್ನು ಬೆಳೆಸುವುದು.

ಈ ಉದ್ದೇಶಗಳು ಈಡೇರಲು ಕೆಳಗಿನ ಅಂಶಗಳು ಮುಖ್ಯವಾಗುತ್ತವೆ:

a. ಮಕ್ಕಳು ಓದಿದ ಮತ್ತು ವೀಕ್ಷಿಸಿದ್ದನ್ನು ಚಿತ್ರ ಬಿಡುಸುವುದರ ಮೂಲಕ ವಿವರಿಸುವ ಸಾಮರ್ಥ್ಯವನ್ನು ಹೊಂದುವುದು.
b. ವಸ್ತು ಮತ್ತು ನೆನಪಿನಲ್ಲಿರುವುದನ್ನು ಚಿತ್ರ ಬಿಡಿಸಿ ತೋರಿಸುವಂತಿರಬೇಕು. ಉದಾಹರಣೆಗೆ ಸಾಮಾನ್ಯ ವಿಜ್ಞಾನ, ಕಲೆ ಇತ್ಯಾದಿ ಕೆಲಸಗಳಿಗೆ ಸಹಸಂಬಂಧಿಸಿದಂತೆ ಸಸ್ಯ, ಪ್ರಾಣಿ, ಮತ್ತು ಮನುಷ್ಯ ರೂಪಗಳ ಚಿತ್ರಣ.
c. ವಿನ್ಯಾಸ.
d. ಪ್ರಮಾಣಕ್ಕೆ ತಕ್ಕಂತೆ ರೇಖಾಚಿತ್ರವನ್ನು ಬಿಡಿಸುವುದು, ಹಾಗೂ ಗ್ರಾಫ್ ಮತ್ತು ಸಚಿತ್ರ ಗ್ರಾಫ್ ಗಳನ್ನು ರಚಿಸುವುದು.

ಮೊದಲ ನಾಲ್ಕು ವರ್ಷಗಳಲ್ಲಿ ರೇಖಾಚಿತ್ರವನ್ನು ಬಿಡಿಸುವ ಕೆಲಸವು ಮುಖ್ಯವಾಗಿ ಓದುವಿಕೆ ಮತ್ತು ಕರಕುಶಲತೆ ಮತ್ತು ನಿಸರ್ಗ ಅಧ್ಯಯನದಲ್ಲಿ ಸಚಿತ್ರ ಪ್ರಾತಿನಿಧ್ಯದೊಂದಿಗೆ ಸಹಸಂಬಂಧಿತವಾಗಿರಬೇಕು. ಕೊನೆಯ ಮೂರು ವರ್ಷಗಳಲ್ಲಿ ಮಕ್ಕಳು ಸರಿಯಾದ ರೇಖಾಚಿತ್ರಗಳನ್ನು ರೂಪಿಸಲು ಸಾಧ್ಯವಾಗುವಂತೆ ವಿನ್ಯಾಸ, ಅಲಂಕಾರ, ಮತ್ತು ಯಾಂತ್ರಿಕ ಚಿತ್ರಗಳನ್ನು ಬಿಡಿಸುವುದರ ಮೇಲೆ ಗಮನ ಹರಿಸಬಹುದು.

## VII. ಸಂಗೀತ

ಸುಮಧುರ ಸಂಗೀತದ ಬಗ್ಗೆ ಮಕ್ಕಳಿಗೆ ಒಲವು ಬೆಳೆಯುವಂತೆ ಹಲವಾರು ಹಾಡುಗಳನ್ನು ಕಲಿಸುವುದು ಇದರ ಉದ್ದೇಶ. ಮಗುವಿಗೆ ಸಹಜವಾಗಿ ಇರುವ ಲಯಜ್ಞಾನವನ್ನು ಪ್ರೋತ್ಸಾಹಿಸಲು ತಾಳ ತಟ್ಟುವ ಅಭ್ಯಾಸವನ್ನು ಕಲಿಸಬೇಕು. ಲಯಕ್ಕೆ ತಕ್ಕಂತೆ ಹೆಜ್ಜೆ ಹಾಕುವ ಅಭ್ಯಾಸ ಇದಕ್ಕೆ ಸಹಾಯ ಮಾಡಬಲ್ಲದು.

ಕಲಾತ್ಮಕವಾಗಿ ಆರೋಗ್ಯ ಮತ್ತು ಉತ್ಸಾಹ ತುಂಬಿದ ಸ್ಫೂರ್ತಿ ನೀಡುವ ಅತ್ಯುತ್ತಮ ಹಾಡುಗಳನ್ನು ಮಾತ್ರ ಆಯ್ಕೆ ಮಾಡಬೇಕು. ವೃಂದಗಾಯನ ಅಥವಾ ಮೇಳಗಾಯನಕ್ಕೆ ಪ್ರೋತ್ಸಾಹ ಕೊಡಬೇಕು.

## VIII. ಹಿಂದೂಸ್ಥಾನಿ

ಎಲ್ಲಾ ರಾಷ್ಟ್ರೀಯ ಶಾಲೆಗಳಲ್ಲಿ ಕಲಿಯುತ್ತಿರುವ ಮಕ್ಕಳಿಗೆ ಸಂಪರ್ಕ ಮಾಧ್ಯಮವಾಗಿ ತಕ್ಕಷ್ಟು ಮಟ್ಟಿಗೆ "ಸಾಮಾನ್ಯ ಭಾಷೆ (lingua franca)" ಯ ಪರಿಚಯವಿರುವುದನ್ನು ಖಾತ್ರಿಪಡಿಸುವ ಉದ್ದೇಶದಿಂದ ಶಾಲೆಯ ಪಠ್ಯಕ್ರಮದಲ್ಲಿ ಹಿಂದೂಸ್ಥಾನಿಯನ್ನು ಕಡ್ಡಾಯ ವಿಷಯವನ್ನಾಗಿ ಮಾಡಲಾಗಿದೆ. ವಯಸ್ಕ ಪ್ರಜೆಗಳಾದಾಗ ರಾಷ್ಟ್ರದ ಯಾವುದೇ ಭಾಗದ ಸಹಪ್ರಜೆಗಳೊಂದಿಗೆ ಸಹಕರಿಸಲು ಇದು ಸಹಾಯ ಮಾಡುವಂತಿರಬೇಕು. ಹಿಂದೂಸ್ಥಾನಿಯನ್ನು ಕಲಿಸುವ ಶಿಕ್ಷಕರು ಈ ಭಾಷೆ ಹಿಂದೂ ಮತ್ತು

ಮುಸ್ಲಿಮರ ನಡುವಿನ ಸಾಂಸ್ಕೃತಿಕ ಸಂಪರ್ಕದ ಪರಿಣಾಮದಿಂದಾದ ಅತ್ಯಂತ ಗಮನಾರ್ಹ ವಿಷಯ ಎನ್ನುವುದನ್ನು ಎಲ್ಲಾ ರೀತಿಯಲ್ಲಿ ಮಕ್ಕಳಿಗೆ ಮನದಟ್ಟು ಮಾಡಿಕೊಡಬೇಕು. ಈ ಸಾಂಸ್ಕೃತಿಕ ಸಂಪರ್ಕದ ಅತ್ಯಂತ ಶ್ರೇಷ್ಟ ವಿಚಾರಗಳು ಮತ್ತು ಆಕಾಂಕ್ಷೆಗಳನ್ನು ಅದು ಗಹನವಾದ ರೀತಿಗಳಲ್ಲಿ ಒಳಗೊಂಡಿರುವ ಭಂಡಾರವೇ ಹೌದು. ಮಕ್ಕಳು ಅದರ ಶ್ರೀಮಂತಿಕೆ ಮತ್ತು ಜೀವಂತಿಕೆಯ ಬಗ್ಗೆ ಹೆಮ್ಮೆಯ ಜೊತೆಗೆ ಶ್ರದ್ದೆಯಿಂದ ಅದರ ಏಳಿಗೆಗೆ ಶ್ರಮ ವಹಿಸಬೇಕು ಎನ್ನುವ ಅಭಿಲಾಷೆಯನ್ನು ಹೊಂದಿರಬೇಕು.

ಹಿಂದೂಸ್ಥಾನಿ ಮಾತಾಡುವ ಪ್ರದೇಶಗಳಲ್ಲಿ ಸಹಜವಾಗಿ ಅದು ಮಕ್ಕಳ ಮಾತೃಭಾಷೆಯಾಗಿರುತ್ತದೆ. ಆದರೆ ಮಕ್ಕಳು ಮತ್ತು ಶಿಕ್ಷಕರು ಇಬ್ಬರಿಗೂ ಉರ್ದು ಮತ್ತು ಹಿಂದಿ ಲಿಪಿಗಳನ್ನು ಕಲಿಯುವುದು ಮುಖ್ಯ. ಏಕೆಂದರೆ ಆಗ ಅವರು ಎರಡೂ ಭಾಷೆಗಳಲ್ಲಿ ಇರುವ ಪುಸ್ತಕಗಳನ್ನು ಓದಲು ಸಾಧ್ಯವಾಗುತ್ತದೆ. ದೇಶದ ಉಳಿದ ಭಾಗಗಳಲ್ಲಿ, ಅಂದರೆ ಹಿಂದೂಸ್ಥಾನಿ ಮಾತಾಡದ ಪ್ರದೇಶಗಳಲ್ಲಿ, ಪ್ರಾಂತೀಯ ಭಾಷೆ ಮಗುವಿನ ಮಾತೃಭಾಷೆಯಾಗಿರುತ್ತದೆ. ಆಗ ಶಾಲೆಯ ಐದು ಮತ್ತು ಆರು ವರ್ಷಗಳಲ್ಲಿ ಹಿಂದೂಸ್ಥಾನಿ ಕಡ್ಡಾಯವಾಗಿದ್ದು ಯಾವುದಾದರೂ ಒಂದು ಲಿಪಿಯನ್ನು ಮಾತ್ರ ಕಲಿಯಬಹುದು. ಆದರೆ ಕಲಿಸುವ ಶಿಕ್ಷಕರಿಗೆ ಎರಡೂ ತೆರನಾದ ಮಕ್ಕಳೊಂದಿಗೆ ವ್ಯವಹರಿಸಬೇಕಾಗುವುದರಿಂದ ಎರಡೂ ಲಿಪಿಗಳ ಜ್ಞಾನವಿರುವುದು ಅವಶ್ಯಕವಾಗಿರುತ್ತದೆ.

ಅದು ಏನೇ ಇರಲಿ ಪ್ರತಿ ಸಾರ್ವಜನಿಕ ಶಾಲೆಯು ಎರಡೂ ಲಿಪಿಗಳನ್ನು ಕಲಿಸಲು ಸಾಕಷ್ಟು ಅವಕಾಶಗಳನ್ನು ಕಲ್ಪಿಸಬೇಕು.

ಈ ಪಠ್ಯಕ್ರಮದ ಸಾಮಾನ್ಯ ಸ್ಥೂಲವಾದ ರೂಪುರೇಷೆಗಳು ಶಾಲೆಯ ಐದನೇ ತರಗತಿಯವರೆಗೆ ಹೆಣ್ಣು ಮತ್ತು ಗಂಡು ಮಕ್ಕಳಿಗೆ ಒಂದೇ ತೆರನಾಗಿರುತ್ತದೆ. ನಾಲ್ಕು ಮತ್ತು ಐದನೇ ತರಗತಿಯಲ್ಲಿ ಸಾಮಾನ್ಯ ವಿಜ್ಞಾನವು ಹೆಣ್ಣುಮಕ್ಕಳಿಗೆ ಗೃಹವಿಜ್ಞಾನವನ್ನೂ ಒಳಗೊಂಡಿರುವಂತೆ ಮಾರ್ಪಡಿಸಬೇಕು. ಆರು ಮತ್ತು ಏಳನೇ ತರಗತಿಗಳಲ್ಲಿ ಹೆಣ್ಣುಮಕ್ಕಳು ಮೂಲ ಕರಕೌಶಲ್ಯದ ಬದಲು ಹೆಚ್ಚಿನ ಮಟ್ಟದ ಗೃಹವಿಜ್ಞಾನವನ್ನು ಆರಿಸಿಕೊಳ್ಳಬಹುದು.

# ಬೋಧಕರ ತರಬೇತಿ

ಈ ಪಠ್ಯಕ್ರಮದ ಯಶಸ್ಸಿಗೆ ಬಹು ಮುಖ್ಯ ಪೂರ್ವಾಪೇಕ್ಷಿತವೆಂದರೆ ಅದು ಬೋಧಕರ ಸಮರ್ಪಕ ತರಬೇತಿ. ಸಾಧಾರಣ ಸನ್ನಿವೇಶಗಳಲ್ಲಿ ಸಹ ಬೋಧಿಸುವ ಪಾಠದ ಗುಣಮಟ್ಟ ಬೋಧಕರ ಗುಣಮಟ್ಟವನ್ನು ಅವಲಂಬಿಸಿರುತ್ತದೆ. ಇಡೀ ಶೈಕ್ಷಣಿಕ ವ್ಯವಸ್ಥೆಯನ್ನೇ ಸಂಪೂರ್ಣವಾಗಿ ಮತ್ತು ಮೂಲಭೂತವಾಗಿ ಬದಲಾಯಿಸಬೇಕಾದ ಪರಿಸ್ಥಿತಿಯಲ್ಲಂತೂ ಈ ಬದಲಾವಣೆಗಳನ್ನು ತರುವ ಬೋಧಕರ ಪಾತ್ರ ಇನ್ನಷ್ಟು ಮಹತ್ವವನ್ನು ಪಡೆದುಕೊಳ್ಳುತ್ತದೆ.

ಆದ್ದರಿಂದ ಬೋಧಕರಿಗೆ ಈ ಹೊಸ ಶೈಕ್ಷಣಿಕ ಮತ್ತು ಸಾಮಾಜಿಕ ಸಿದ್ಧಾಂತದ ಮೇಲೆ ರೂಪಿಸಲ್ಪಟ್ಟ ಯೋಜನೆಯ ಅರಿವು ಮತ್ತು ಅದನ್ನು ಕಾರ್ಯಗತಗೊಳಿಸಲು ಉತ್ಸಾಹ ಇರುವುದು ಅತ್ಯಂತ ಅವಶ್ಯಕ.

ಬೋಧಿಸಬೇಕಾದ್ದು ಕೇವಲ ಶೈಕ್ಷಣಿಕ ವಿಷಯಗಳಲ್ಲದೇ ಕೆಲವು ಕರಕೌಶಲ್ಯಗಳೂ ಸೇರಿರುವುದರಿಂದ ಬೋಧಕರ ತರಬೇತಿಯಲ್ಲಿ ಕೆಲವು ಮೂಲ ಕರಕೌಶಲ್ಯಗಳಿಗೆ ಸಂಬಂಧಿಸಿದಂತೆ ಪ್ರಕ್ರಿಯೆ ಮತ್ತು ತಂತ್ರಗಳ ಬಗ್ಗೆ ಸಾಕಷ್ಟು ನೈಪುಣ್ಯವಿರುವುದು ಅತ್ಯಗತ್ಯ.

ಬೋಧಕರು ವಿಷಯ ವಸ್ತುವನ್ನು ಗ್ರಹಿಸುವ ಮತ್ತು ಬೋಧಿಸುವ ರೀತಿಯೇ ಬೇರೆಯದಾಗಿರುತ್ತದೆ. ಅವರು ಈ ವಿವಿಧ ವಿಷಯಗಳನ್ನು ಪರಸ್ಪರ ಪ್ರತ್ಯೇಕವಾಗಿರುವ ಜ್ಞಾನದ ಶಾಖೆಗಳಾಗಿ ನೋಡದೆ, ಬೆಳೆಯುತ್ತಿರುವ ಮತ್ತು ಅಭಿವೃದ್ಧಿ ಹೊಂದುತ್ತಿರುವ ಚಟುವಟಿಕೆಗಳ ಒಂದಕ್ಕೊಂದು ಗಾಢವಾಗಿ ಹೆಣೆದುಕೊಂಡಿರುವ ಅಂಶಗಳಾಗಿ ನೋಡಬೇಕು. ಇದು ಅವುಗಳ ಸಹಸಂಬಂಧಗಳ ಮೇಲೆ ಗಮನವನ್ನು ಕೇಂದ್ರೀಕರಿಸಲು ಅನುವು ಮಾಡಿಕೊಡುತ್ತದೆ. ಆದ್ದರಿಂದಲೇ ಬೋಧಕರಿಗೆ ಬದುಕು, ಕಲಿಕೆ ಮತ್ತು ಚಟುವಟಿಕೆಗಳನ್ನು ಪರಸ್ಪರ ಹೆಣೆಯಬಲ್ಲಂತಹ ಸಹಸಂಬಂಧಿತ ವಿಷಯಗಳ ಸಂಶೋಧನೆ ಮತ್ತು ಯೋಜನೆಗಳನ್ನು ರೂಪಿಸುವಲ್ಲಿ ತರಬೇತಿ ಪಡೆಯುವುದು ಅತ್ಯಂತ ಅವಶ್ಯಕವಾಗಿರುತ್ತದೆ.

ಬೋಧಕರಿಗೆ ಮನುಷ್ಯನ ಬದುಕು ಮತ್ತು ಚಟುವಟಿಕೆಗಳ ಬಗ್ಗೆ ಜೀವನೋತ್ಸಾಹದಿಂದ ಕೂಡಿದ ಆಸಕ್ತಿ ಹಾಗೂ ಶಾಲೆ ಮತ್ತು ಸಮಾಜದ ನಡುವೆ ಇರುವ ಅವಿನಾಭಾವ ಸಂಬಂಧದ ಬಗ್ಗೆ ಅರಿವಿರುವುದು ತುಂಬ ಮುಖ್ಯ.

ಈ ಹೊಸ ಯೋಜನೆಯನ್ನು ಪರಿಕಲ್ಪಿಸಿದ ರೀತಿಯಲ್ಲೇ ಕಾರ್ಯಗತ ಮಾಡಬೇಕೆಂದರೆ ಬೋಧಕರ ತರಬೇತಿ ಪಠ್ಯಕ್ರಮದಲ್ಲಿ ಈ ಮೇಲೆ ಹೇಳಿದ

ಅಂಶಗಳ ಜೊತೆಗೆ ಬೇರೆ ವಿಷಯಗಳನ್ನು ಮತ್ತು ಅರ್ಹತೆಗಳನ್ನು ಸೇರಿಸುವುದು ಅತ್ಯಾವಶ್ಯಕ.

ತರಬೇತಿ ಸಂಸ್ಥೆಗೆ ಸೇರಲಿಚ್ಛಿಸುವ ಅಭ್ಯರ್ಥಿ ಯಾವುದಾದರೂ ರಾಷ್ಟ್ರೀಯ ಅಥವಾ ನೋಂದಾಯಿತ ಸರ್ಕಾರಿ ಸಂಸ್ಥೆಯಲ್ಲಿ ಹತ್ತನೇ ತರಗತಿಯನ್ನು ಪೂರ್ಣಗೊಳಿಸಿದ್ದು ಅಥವಾ ಪ್ರಾದೇಶಿಕ ಅಂತಿಮ ಯಾ ಅದಕ್ಕೆ ಸಮನಾದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ನಂತರ ಕನಿಷ್ಠ ಪಕ್ಷ ಎರಡು ವರ್ಷದ ಮಟ್ಟಿಗೆ ಪಾಠ ಮಾಡಿದ ಅನುಭವವಿರಬೇಕು.

## ಬೋಧಕರ ತರಬೇತಿಯ ಮೂರು ವರ್ಷದ ಸಂಪೂರ್ಣ ಪಠ್ಯಕ್ರಮ

a. a. ಹತ್ತಿ (ಅಥವಾ ಉಣ್ಣೆ)ಯನ್ನು ಬೆಳೆಯುವುದು, ಕೀಳುವುದು, ಹಿಂಜುವುದು, ಹೊಸೆಯುವುದು, ಮತ್ತು ಹಾಸನ್ನು ತಯಾರಿಸುವುದು.

   b. ಚರಕದ (ಅಥವಾ ಆಯ್ದ ಕರಕೌಶಲ್ಯಕ್ಕೆ ಸಂಬಂಧಪಟ್ಟ ಯಾವುದೇ ಉಪಕರಣ ಯಾ ಸಾಧನಗಳ) ಯಾಂತ್ರಿಕ ಜ್ಞಾನ.

   c. ಆಯ್ದ ಕರಕೌಶಲ್ಯಕ್ಕೆ ಸಂಬಂಧಪಟ್ಟ ಗ್ರಾಮೀಣ ಉದ್ಯಮಗಳ ಆರ್ಥಿಕ ಅರಿವು.

   d. ಆಯ್ದ ಕರಕೌಶಲ್ಯಕ್ಕೆ ಸಂಬಂಧಿಸಿದಂತೆ ಮರಗೆಲಸದ ಮೂಲ ಜ್ಞಾನ.

b. ಈ ಕೆಳಗಿನ ಯಾವುದಾದರೂ ಒಂದು ಮೂಲ ಕರಕೌಶಲ್ಯದಲ್ಲಿ ತರಬೇತಿ ಪಡೆಯಬೇಕು:

   a. ನೂಲುವುದು ಮತ್ತು ನೇಯುವುದು.
   b. ತರಕಾರಿ ಮತ್ತು ಹಣ್ಣು ತೋಟಗಾರಿಕೆ.
   c. ವ್ಯವಸಾಯ.
   d. ಮರಗೆಲಸ.
   e. ಆಟದ ವಸ್ತುಗಳ ತಯಾರಿಕೆ.
   f. ಚರ್ಮಗಾರಿಕೆ.
   g. ಕಾಗದ ತಯಾರಿಸುವಿಕೆ.

ಅಥವಾ ಯಾವುದಾದರೂ ನಿರ್ದಿಷ್ಟ ಪ್ರದೇಶಕ್ಕೆ ಹೊಂದಿಕೊಳ್ಳುವ ಕರಕೌಶಲ್ಯ.

## 3. ಶೈಕ್ಷಣಿಕ ತತ್ವಗಳು

ಅವು ಈ ಕೆಳಗಿನವುಗಳನ್ನು ಒಳಗೊಂಡಿರಬೇಕು:

a. ಯಾವುದಾದರೂ ಉತ್ಪಾದನಾಶೀಲ ಕೆಲಸದ ಮೂಲಕವೇ ಶಿಕ್ಷಣದ ಮೂಲ ಪರಿಕಲ್ಪನೆ.
b. ಶಾಲೆ ಮತ್ತು ಸಮುದಾಯದ ನಡುವೆ ಅವಿನಾಭಾವ ಸಂಬಂಧ.
c. ಮಕ್ಕಳ ಮನೋವಿಜ್ಞಾನದ ಸ್ಥೂಲ ಆದರೆ ಸಾಧ್ಯವಾದಷ್ಟೂ ಮೂರ್ತವಾದ ರೂಪುರೇಷೆಗಳು ಮತ್ತು ಪಡೆಯಲಿರುವ ತಾಂತ್ರಿಕ ಕೌಶಲ್ಯದ ಮನೋವಿಜ್ಞಾನ.
d. ಸಹಸಂಬಂಧವುಳ್ಳ ವಿಷಯಗಳ ಕಲಿಕಾ ಯೋಜನೆಗಳನ್ನು ರೂಪಿಸುವ ಮತ್ತು ಬೆಳೆಸುವುದಕ್ಕೆ ವಿಶೇಷ ಒತ್ತು ಕೊಡುವ ಬೋಧನಾ ವಿಧಾನಗಳು.
e. ಗ್ರಾಮೀಣ ಜೀವನದ ವಸ್ತುಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಹೊಸ ಶಿಕ್ಷಣ ಉದ್ದೇಶದ ಅಧ್ಯಯನ.

4. ಗ್ರಾಮೀಣ ಬದುಕಿನ ಸಮಸ್ಯೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ರೂಪಿಸಿದ ಶರೀರಶಾಸ್ತ್ರ, ಅರೋಗ್ಯಶಾಸ್ತ್ರ, ನೈರ್ಮಲ್ಯ, ಆಹಾರ ಮತ್ತು ಪೋಷಣೆಯ ಸ್ಥೂಲ ಅಧ್ಯಯನ. ಇದು ಆ ಬದುಕಿಗೆ ನೇರ ಪ್ರಾಯೋಗಿಕ ಉಪಯುಕ್ತತೆಯನ್ನು ಹೊಂದಿರಬೇಕು.

5. ಬೋಧಕ ತನ್ನ ಸಾಮಾಜಿಕ ವಾತಾವರಣದ ಬಹುರೂಪಿ ಸಮಸ್ಯೆಗಳ ಬಗ್ಗೆ ಸರಿಯಾದ ದೃಷ್ಟಿಕೋನವನ್ನು ಹೊಂದಲು ಸಾಮಾಜಿಕ ಅಧ್ಯಯನದ ಮೂಲ ಪಠ್ಯಕ್ರಮದ ಪರಿಷ್ಕರಣೆ ಮತ್ತು ಬೆಳವಣಿಗೆ. ಇದು ಕಳೆದ ಐವತ್ತು ವರ್ಷಗಳಲ್ಲಿ ಭಾರತ ಮತ್ತು ಜಗತ್ತಿನಲ್ಲಿ ನಡೆದಿರುವ ವಿದ್ಯಮಾನಗಳ ಸಾಮಾನ್ಯ ಸ್ಥೂಲ ಪರಿಚಯದೊಂದಿಗೆ ಕೊನೆಗೊಳ್ಳಬೇಕು.

6. ಮಾತೃಭಾಷೆಯಲ್ಲಿ ಕೆಲವು ಪಾಠಗಳನ್ನು ಒಳಗೊಂಡ ಒಂದು ನಿರ್ದೇಶಿತ ಅಧ್ಯಯನ ಬೋಧಕ-ಅಭ್ಯರ್ಥಿಗಳಿಗೆ ಭಾರತೀಯ ಕಲೆ ಮತ್ತು ಸಾಹಿತ್ಯದಲ್ಲಿನ ಕೆಲವು ಶ್ರೇಷ್ಠ ಪಠ್ಯಗಳ ಪರಿಚಯವನ್ನು ಮಾಡುವುದರ ಮೂಲಕ ಸಾಮಾನ್ಯ ಸಾಂಸ್ಕೃತಿಕ ಹಿನ್ನಲೆಯೊಂದನ್ನು ಒದಗಿಸುತ್ತದೆ.

7. ಹಿಂದೂಸ್ಥಾನಿ ಭಾಷಾಜ್ಞಾನ, ಹಾಗೂ ಹಿಂದೂಸ್ಥಾನಿ ಮಾತನಾಡುವ ಮತ್ತು ಮಾತನಾಡದ ಪ್ರದೇಶಗಳಲ್ಲಿ ಸಹ ಹಿಂದಿ ಮತ್ತು ಉರ್ದು ಎರಡರಲ್ಲೂ ಓದಿ ಬರೆಯಬಲ್ಲ ಸಾಮರ್ಥ್ಯವು ಅವಶ್ಯಕ. (ಈ ಶಿಕ್ಷಣದ ಸಾಂಸ್ಕೃತಿಕ ಹಾಗೂ ನಾಗರಿಕ ಉದ್ದೇಶಗಳನ್ನು ಈಡೇರಿಸಬೇಕಾದರೆ ಇದು ಎಲ್ಲಾ ಸರ್ಕಾರಿ ಮತ್ತು ಅನುದಾನಿತ ಶಾಲೆಗಳ ಬೋಧಕರಿಗೆ ಅನ್ವಯವಾಗುವುದು ಅತ್ಯಗತ್ಯ.)

8. ಕಪ್ಪು ಹಲಗೆಯ ಮೇಲೆ ಬರೆಯುವ ಮತ್ತು ಚಿತ್ರ ಬಿಡಿಸುವ ಅರಿವು.

9. ವ್ಯಾಯಾಮ, ಕವಾಯತು ಮತ್ತು ದೇಶೀಯ ಆಟಗಳ ಬಗೆಗಿನ ಜ್ಞಾನ.

10. ಆರಿಸಿಕೊಂಡ ಪ್ರಾತ್ಯಕ್ಷಿಕೆ ಶಾಲೆ (demonstration schools) ಗಳಲ್ಲಿ ಮೇಲ್ವಿಚಾರಣೆಯನ್ನು ಒಳಗೊಂಡಂತೆ ಬೋಧನಾ ಅಭ್ಯಾಸ ತರಗತಿಗಳು ನಡೆಯಬೇಕು.

ಈ ಬೋಧನಾ ತರಬೇತಿ ಶಾಲೆಗಳು ವಸತಿ ಶಾಲೆಗಳಾಗಿರಬೇಕೆಂದು ಮತ್ತು ಅವು ವಿದ್ಯಾರ್ಥಿಗಳ ಮತ್ತು ಬೋಧಕರ ನಡುವೆ ನಿಕಟ ಸಂಪರ್ಕವಿರಲು ಸಾಧ್ಯವಾಗುವಂತೆ ಆಲೋಚಿಸಿದ್ದೇವೆ. ಈ ಶಾಲೆಗಳು ಪರಸ್ಪರ ಸಹಕಾರದೊಂದಿಗೆ ಕ್ರಿಯಾಶೀಲ ಮತ್ತು ಬಹುಮುಖ ಸಾಮಾಜಿಕ ಹಾಗೂ ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸಿದಲ್ಲಿ ತರಬೇತಿಯಲ್ಲಿರುವ ಬೋಧಕರ ವೈಯಕ್ತಿಕ ಪ್ರತಿಭೆಗಳ ಅಭಿವ್ಯಕ್ತಿಗೆ ನೆಲೆಯನ್ನು ಒದಗಿಸುವ ಅವಕಾಶವಿರುತ್ತದೆ. ಆದ್ದರಿಂದ ಈ ಬೋಧಕ ಅಭ್ಯರ್ಥಿಗಳು ಬಿಡುವಿನ ಸಮಯದಲ್ಲಿ ತಮ್ಮ ಅನೇಕ ಮತ್ತು ವೈವಿಧ್ಯಮಯ ಹವ್ಯಾಸ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದನ್ನು ಈ ತರಬೇತಿ ಸಂಸ್ಥೆಗಳ ಸಿಬ್ಬಂದಿಗಳು ಪ್ರೋತ್ಸಾಹಿಸುವುದು ಅಪೇಕ್ಷಣೀಯ ಎನ್ನುವುದರ ಮೇಲೆ ಗಮನ ಸೆಳೆಯುತ್ತಿದ್ದೇವೆ.

ಈ ಸಂಸ್ಥೆಗಳ ನಿಜವಾದ ಯಶಸ್ಸು ಅದರ ವಿವಿಧ ಹವ್ಯಾಸ ಮತ್ತು ಸಾಮಾಜಿಕ ಚಟುವಟಿಕೆಗಳು ಎಷ್ಟರ ಮಟ್ಟಿಗೆ ವೈವಿಧ್ಯತೆ ಹೊಂದಿದೆ ಮತ್ತು ಸಹಜವಾಗಿದೆ, ಅವುಗಳನ್ನು ಕಾರ್ಯರೂಪಕ್ಕೆ ತರಲು ಎಷ್ಟರ ಮಟ್ಟಿಗೆ ಉತ್ಸಾಹದಿಂದ ಮತ್ತು ನಿರಂತರವಾಗಿ ಶ್ರಮವಹಿಸಿದವು ಹಾಗೂ ಶಾಲೆಯ ಮತ್ತು ಸಾಮಾಜಿಕ ಬದುಕಿನ ಮೇಲೆ ಅವು ಎಷ್ಟರ ಮಟ್ಟಿಗೆ ಪರಿಣಾಮ ಬೀರಲು ಶಕ್ತವಾದವು ಎನ್ನುವುದನ್ನು ಅವಲಂಬಿಸಿರುತ್ತದೆ .

ಈ ಮೇಲೆ ವಿವರಿಸಿದ ಅಧ್ಯಯನದ ರೂಪರೇಖೆ ತುಂಬ ಮಹತ್ವಾಕಾಂಕ್ಷೆಯಿಂದ ಕೂಡಿದ್ದು ವಾಸ್ತವಕ್ಕೆ ಹತ್ತಿರವಿಲ್ಲ ಎಂಬ ಭಾವನೆಯನ್ನು ನೀಡಬಹುದು. ಆದರೆ ಇದನ್ನು ಸರಿಯಾದ ಅರ್ಥದಲ್ಲಿ ಗ್ರಹಿಸಿದರೆ ಸಾಧಿಸಬಹುದಾದುದರಿಂದ ಆ ಭಾವನೆ ಸತ್ಯಕ್ಕೆ ದೂರ ಎಂಬ ಅಂಶವನ್ನು ಒತ್ತಿ ಹೇಳಲು ಇಚ್ಛಿಸುತ್ತೇವೆ. ಎಲ್ಲಕ್ಕಿಂತ ಹೆಚ್ಚಾಗಿ ಇದು ಸತತವಾಗಿ ಮೂರು ವರ್ಷದ ತರಬೇತಿ, ಹಾಗಾಗಿ ಅದು ಪ್ರಸ್ತುತದಲ್ಲಿರುವುದಕ್ಕಿಂತ ಇನ್ನೂ ಹೆಚ್ಚಿನ ಪಕ್ವತೆಗೆ ಒಡ್ಡಿಕೊಳ್ಳಬಲ್ಲದು ಎಂಬ ಅಂಶವನ್ನು ಮರೆಯಬಾರದು. ಎರಡನೆಯದಾಗಿ, ತರಬೇತಿ ಯೋಜನೆಯು ಕಾರ್ಯರೂಪಕ್ಕೆ ಬಂದು ಪಕ್ವವಾದ ಕೆಲವು ವರ್ಷಗಳ ನಂತರ ನಮ್ಮ ಹೊಸ ಶಾಲೆಗಳಲ್ಲಿ ಈ ತರಬೇತಿ ಹೊಂದಿದ ಬೋಧಕರು ಕರಕೌಶಲ್ಯ ಮತ್ತು ಸಾಮಾಜಿಕ ಅಧ್ಯಯನಗಳಂತಹ ಇತರ ವಿಷಯಗಳಲ್ಲಿ ಸಾಕಷ್ಟು ನೈಪುಣ್ಯವನ್ನು ಹೊಂದಿರುತ್ತಾರೆ ಎನ್ನುವುದನ್ನು ನಿರೀಕ್ಷಿಸುತ್ತೇವೆ. ಆದ್ದರಿಂದ ಈ ಪಠ್ಯಕ್ರಮವು ಹೊಸ ವಿಷಯಗಳನ್ನು ಬೋಧಿಸುವುದರ ಬದಲು ಈಗಾಗಲೇ

ಅಧ್ಯಯನ ಮಾಡಿರುವ ವಿಷಯವಸ್ತುಗಳನ್ನು ವೃತ್ತಿಪರ ದೃಷ್ಟಿಕೋನದಿಂದ ನೋಡುವ ಪ್ರಯತ್ನವನ್ನು ಮುಂದುವರೆಸುತ್ತದೆ. ಮೂರನೆಯದಾಗಿ, ಮೇಲೆ ಹೇಳಿದ ವಿಷಯಗಳನ್ನು ವ್ಯವಸ್ಥಿತವಾಗಿ ಮತ್ತು ವೈಜ್ಞಾನಿಕವಾಗಿ ಅಭ್ಯಾಸ ಮಾಡುವ ಮಹತ್ವಾಕಾಂಕ್ಷೆಯ ಉದ್ದೇಶಕ್ಕಿಂತಲೂ ಪೌರನೀತಿ, ನೈರ್ಮಲ್ಯೀಕರಣ, ಆರೋಗ್ಯಶಾಸ್ತ್ರ, ಪ್ರಥಮ ಚಿಕಿತ್ಸೆ, ಮಗುವಿನ ವರ್ತನೆ ಹಾಗೂ ತರಗತಿಯಲ್ಲಿನ ಅಭ್ಯಾಸಗಳನ್ನು ಪರಿಣಮಿಸುವ ಶಾಲೆ ಅಥವಾ ಸುತ್ತಮುತ್ತಲಿನ ಸಮುದಾಯದ ಬದುಕಿನ ಮೇಲೆ ಗಮನ ಹರಿಸಬೇಕು ಎನ್ನುವುದನ್ನು ಮತ್ತಷ್ಟು ಒತ್ತಿ ಹೇಳಲು ಇಚ್ಛಿಸುತ್ತೇವೆ. ಈ ತರಬೇತಿಯಲ್ಲಿ ಬೋಧಕ ಅಭ್ಯರ್ಥಿಗಳ ವೃತ್ತಿಪರ ಹೆಮ್ಮೆಯನ್ನು ಚುರುಕುಗೊಳಿಸಲು ಮತ್ತು ಬೌದ್ಧಿಕ ಆಸಕ್ತಿಯನ್ನು ಕೆರಳಿಸಲು ಎಲ್ಲ ಶ್ರಮ ವಹಿಸಿದಲ್ಲಿ ಅವರಲ್ಲಿ ಹಲವರು ತಮಗಿಷ್ಟವಾದ ವಿಷಯಗಳಲ್ಲಿ ಖಾಸಗಿಯಾಗಿ ಅಧ್ಯಯನವನ್ನು ಮುಂದುವರೆಸುತ್ತಾರೆ ಮತ್ತು ಕೆಲವು ವಿಷಯಗಳನ್ನು ಆಳವಾಗಿ ಅಧ್ಯಯನ ಮಾಡುತ್ತಾರೆ ಎಂಬ ಭರವಸೆ ನಮಗಿದೆ. ಆದರೆ ತರಬೇತಿ ಅವಧಿಗೆ ಸಂಬಂಧಪಟ್ಟಂತೆ ಈ ಶಿಕ್ಷಣ ಯೋಜನೆಯ ಉದ್ದೇಶ ಶೈಕ್ಷಣಿಕ ಅರ್ಥದಲ್ಲಿ ಪಂಡಿತರನ್ನು ಸೃಷ್ಟಿಸುವುದಲ್ಲ. ಬದಲಾಗಿ, ಸಮುದಾಯ ಸೇವೆ ಮಾಡಲು ಬದ್ಧರಾಗಿರುವ ಮತ್ತು ಈ ಶಿಕ್ಷಣ ಯೋಜನೆಯಲ್ಲಿ ಅಂತರ್ಗತವಾಗಿರುವ ಮೌಲ್ಯಗಳನ್ನು ಮುಂದಿನ ಪೀಳಿಗೆಯವರಿಗೆ ಸಮರ್ಥವಾಗಿ ದಾಟಿಸಬಲ್ಲ ಸರಿಯಾದ ಪರಿಕಲ್ಪನಾ ದೃಷ್ಟಿಕೋನ ಹೊಂದಿರುವಂತಹ ವಿದ್ಯಾವಂತ ಹಾಗೂ ಬುದ್ಧಿವಂತ ಕುಶಲಿ ಕೆಲಸಗಾರರನ್ನು ರೂಪಿಸುವುದು.

## ಅಲ್ಪಾವಧಿ ಶಿಕ್ಷಕ ತರಬೇತಿಯ ಪಠ್ಯಕ್ರಮ

ಈ ಯೋಜನೆಯನ್ನು ಆದಷ್ಟೂ ಬೇಗ ಪ್ರಾರಂಭಿಸುವ ಪ್ರಯತ್ನದಲ್ಲಿ ತಕ್ಷಣದ ಮೊದಲ ಹೆಜ್ಜೆಯಾಗಿ ಬೋಧಕರಿಗೆ, ವಿಶೇಷವಾಗಿ ಅಸ್ತಿತ್ವದಲ್ಲಿರುವ ಶಾಲೆಗಳಿಂದ, ರಾಷ್ಟ್ರೀಯ ಸಂಸ್ಥೆಗಳಿಂದ, ಮತ್ತು ಆಶ್ರಮಗಳಿಂದ ಆಯ್ದ ಬೋಧಕರಿಗೆ ಒಂದು ವರ್ಷದ ತುರ್ತು ತರಬೇತಿಯನ್ನು ನೀಡಬೇಕೆಂಬ ಶಿಫಾರಸ್ಸನ್ನು ಮಾಡಿದ್ದೇವೆ. ಈ ಆಯ್ದ ಅಭ್ಯರ್ಥಿಗಳು ಯಶಸ್ವಿ ಬೋಧಕ ಅಥವಾ ಕರಕೌಶಲ್ಯದ ಅನುಭವವನ್ನು ಹೊಂದಿದ್ದು ಈ ಹೊಸ ಯೋಜನೆಯನ್ನು ಅದರ ನಿಜವಾದ ಅರ್ಥದಲ್ಲಿ ಗ್ರಹಿಸಿ ತಿಳುವಳಿಕೆ ಮತ್ತು ಹುಮ್ಮಸ್ಸಿನಿಂದ ಅದರ ಅನುಷ್ಠಾನಕ್ಕೆ ಬದ್ಧರಾಗಿರಬೇಕು. ಯಾವುದೇ ಪ್ರಾಂತ್ಯದಲ್ಲಿ ಈ ಬೋಧಕ ಅಭ್ಯರ್ಥಿಗಳ ಸಂಖ್ಯೆ ಆ ಪ್ರಾಂತ್ಯದಲ್ಲಿ ಪ್ರಸ್ತಾಪಿಸುತ್ತಿರುವ ಯೋಜನೆಯನ್ನು ಮೊದಲ ಬಾರಿಗೆ ಪ್ರಾರಂಭಿಸುತ್ತಿರುವ ಶಾಲೆಗಳ ಸಂಖ್ಯೆಯ ಮೇಲೆ ನಿರ್ಧರಿಸಲಾಗುತ್ತದೆ.

ಈ ಬೋಧಕ ಅಭ್ಯರ್ಥಿಗಳ ಪಠ್ಯಕ್ರಮ ಈ ಕೆಳಗಿನವುಗಳನ್ನು ಒಳಗೊಂಡಿರಬೇಕು:

a. ಆಯ್ದ ಮೂಲ ಕರಕೌಶಲ್ಯ ಯಾವುದೇ ಇದ್ದರೂ ಸಹ ತಕಲಿಯಿಂದ ನೂಲನ್ನು ತೆಗೆಯುವುದರಲ್ಲಿ ಮತ್ತು ಹಿಂಜುವುದರಲ್ಲಿ ಕಡ್ಡಾಯ ತರಬೇತಿ.
b. ಮೇಲೆ ಪಟ್ಟಿ ಮಾಡಿದ ಯಾವುದೇ ಮೂಲ ಕರಕೌಶಲ್ಯದಲ್ಲಿ ಬೋಧಕ ಅಭ್ಯರ್ಥಿಗೆ ಸಾಕಷ್ಟು ತರಬೇತಿ. ಹಾಗಾದರೆ ಮಾತ್ರ ಆತ ಆ ಕರಕೌಶಲ್ಯದಲ್ಲಿ ಶಾಲೆಯ ಮೊದಲ ಮೂರು ವರ್ಷಗಳ ಪಠ್ಯಕ್ರಮವನ್ನು ಸಮರ್ಥವಾಗಿ ಬೋಧಿಸಬಲ್ಲವನಾಗಿರುತ್ತಾನೆ.
c. ಶರೀರಶಾಸ್ತ್ರ, ಆರೋಗ್ಯಶಾಸ್ತ್ರ, ಆಹಾರ ಮತ್ತು ಪೋಷಣೆ, ಹಾಗೂ ನೈರ್ಮಲ್ಯೀಕರಣದಂತಹ ವಿಷಯಗಳ ಸರಳ ಪಠ್ಯಕ್ರಮ.
d. ಕರಕೌಶಲ್ಯ ಶಾಲೆಯ ಮುಖ್ಯ ಪರಿಕಲ್ಪನೆ ಮತ್ತು ಸಮುದಾಯದ ಬದುಕಿನೊಂದಿಗೆ ಅದಕ್ಕಿರುವ ಅವಿನಾಭಾವ ಸಂಬಂಧ.
e. ಸಮನ್ವಯಿಸಿದ ಬೋಧನೆಗೆ ಆಧಾರವಾಗಿ ಸಮನ್ವಯಿಸಿದ ಅಧ್ಯಯನಗಳ ಸರಳ ಯೋಜನೆಗಳನ್ನು ರೂಪಿಸುವುದು.
f. ಈ ಶತಮಾನದಲ್ಲಿ ನಡೆದ ಜಾಗತಿಕ ಚಳುವಳಿಗಳು ಮತ್ತು ಭಾರತೀಯ ರಾಷ್ಟ್ರಪ್ರಜ್ಞೆ ಎಚ್ಚೆತ್ತುಕೊಂಡ ಚರಿತ್ರೆಯ ಪಾಠಗಳನ್ನೊಳಗೊಂಡ ಸರಳ ಪಠ್ಯಕ್ರಮ.
g. ಬೋಧನಾ ಅಭ್ಯಾಸಕ್ಕೆ ಆರಿಸಿಕೊಂಡ ಶಾಲೆಯಲ್ಲಿ ಉಸ್ತುವಾರಿಯಡಿ ಕನಿಷ್ಠ ಇಪ್ಪತ್ತೈದು ಪಾಠಗಳ ಬೋಧನೆ.

# ಮೇಲ್ವಿಚಾರಣೆ ಮತ್ತು ಪರೀಕ್ಷೆ

## A. ಮೇಲ್ವಿಚಾರಣೆ

ಈ ಹೊಸ ಯೋಜನೆಯನ್ನು ಪ್ರಾರಂಭಿಸುವ ಶಾಲೆಗಳಲ್ಲಿ ಸಮರ್ಥ ಹಾಗೂ ಸಹಾನುಭೂತಿಯುಳ್ಳ ಮೇಲ್ವಿಚಾರಣಾ ಸಿಬ್ಬಂದಿಯನ್ನು ಹೊಂದುವುದು ಸರಿಯಾಗಿ ತರಬೇತಿ ಹೊಂದಿದ ಬೋಧಕರನ್ನು ಹೊಂದುವಷ್ಟೆ ಮಹತ್ವವಾದದ್ದು. ಮೇಲ್ವಿಚಾರಣೆ ಎನ್ನುವುದು ವಿಶೇಷ ಜವಾಬ್ದಾರಿಯಾಗಿದ್ದು ಬೆಳೆಯುತ್ತಿರುವ ಶಾಲಾವ್ಯವಸ್ಥೆಯ ಹೆಚ್ಚುವರಿ ಅಗತ್ಯಗಳನ್ನು ನಿಭಾಯಿಸಲು ಮೇಲ್ವಿಚಾರಕಾರರಿಗೆ ತರಬೇತಿಯನ್ನು ನೀಡಬೇಕೆಂಬ ಶಿಫಾರಸ್ಸನ್ನು ಮಾಡಲು ಬಯಸುತ್ತೇವೆ. ನಮ್ಮ ಅಭಿಪ್ರಾಯದಲ್ಲಿ ಮೆಲ್ವಿಚಾರಕರು ಕನಿಷ್ಠ ಅರ್ಹತೆಗಳಾಗಿ ಮೂಲ ಶಾಲಾಶಿಕ್ಷಕರಾಗಿ ತರಬೇತಿಯನ್ನು ಮುಗಿಸಿದ್ದರ ಜೊತೆಗೆ ಯಶಸ್ವಿಯಾಗಿ ಎರಡು ವರ್ಷದ ಮಟ್ಟಿಗಿನ ಬೋಧನಾ ಅನುಭವ ಹಾಗೂ ಮೇಲ್ವಿಚರಣೆ ಮತ್ತು ಆಡಳಿತ ಕೆಲಸದಲ್ಲಿ ಒಂದು ವರ್ಷದ ತರಬೇತಿಯನ್ನು ಹೊಂದಿರಬೇಕು. ಮೇಲ್ವಿಚರಣೆ ಎಂದರೆ ಬರೀ ತನಿಖೆಯಲ್ಲ. ಬದಲಾಗಿ ಹೆಚ್ಚು ತಿಳಿದವರು ಅನುಭವ ಅಥವಾ ಸಾಮರ್ಥ್ಯಗಳ ಕೊರತೆಯಿರುವ ಸಹೋದ್ಯೋಗಿಗೆ ವೈಯಕ್ತಿಕ ಸಹಾಯ ಮತ್ತು ಸಹಕಾರವನ್ನು ನೀಡುವಂತಿರಬೇಕು. ವಾಸ್ತವವಾಗಿ, ಮೇಲ್ವಿಚಾರಕರು ಶಿಕ್ಷಣ ಪ್ರಯೋಗಗಳಿಗೆ ನಾಯಕರಾಗಿ ಮತ್ತು ಮಾರ್ಗದರ್ಶಕರಾಗಿರುವ ಸಾಮರ್ಥ್ಯವನ್ನು ಹೊಂದಿರಬೇಕು. ಈ ಸಹಾಯಕ ಮಾರ್ಗದರ್ಶನ ಮತ್ತು ನಾಯಕತ್ವದ ಹೆಚ್ಚು ಮುಖ್ಯವಾದ ಜವಾಬ್ದಾರಿಗಳನ್ನು ಸಮರ್ಥವಾಗಿ ಪೂರೈಬೇಕೆಂದರೆ ದಿನನಿತ್ಯದ ಆಡಳಿತ ಕೆಲಸದ ಹೊರೆ ಆದಷ್ಟೂ ಹಗುರವಾಗಿರಬೇಕು. ಆದ್ದರಿಂದ ಮೇಲ್ವಿಚಾರಕರ ಸಂಖ್ಯೆ ಸಾಕಷ್ಟಿರಬೇಕು ಮತ್ತು ಅವರ ಸುಪರ್ದಿಯ ಮೇಲ್ವಿಚಾರಣಾ ಪ್ರದೇಶ ನಿರ್ವಹಿಸಲು ಕಷ್ಟವಾಗುವಷ್ಟು ದೊಡ್ಡದಾಗಿರಬಾರದು. ಅದರಿಂದ ಹೆಚ್ಚಿನ ಆರ್ಥಿಕ ಹೊರೆ ಬೀಳಬಹುದು. ಆದರೆ ಇಲ್ಲಿ ಮಿತವ್ಯಯದ ಬಗ್ಗೆ ಚಿಂತಿಸುವುದು ನಕರಾತ್ಮಕ ಪರಿಣಾಮವನ್ನು ಬೀರಬಹುದು.

## B. ಪರೀಕ್ಷೆಗಳು

ನಮ್ಮ ದೇಶದಲ್ಲಿರುವ ಪ್ರಸಕ್ತ ಪರೀಕ್ಷಾ ಪದ್ಧತಿ ಶಿಕ್ಷಣಕ್ಕೇ ತಗುಲಿರುವ ಶಾಪ ಎನ್ನುವುದು ಸಾಬೀತಾಗಿರುವ ಸತ್ಯ. ಕೆಟ್ಟ ಶಿಕ್ಷಣ ವ್ಯವಸ್ಥೆ ಇನ್ನಷ್ಟು ಹಾಳಾಗಿರುವುದು ಪರೀಕ್ಷೆಗಳಿಗೆ ಅದರ ಉಪಯುಕ್ತತೆಗಿಂತ ಹೆಚ್ಚಾದ ಮೌಲ್ಯವನ್ನು ಅದಕ್ಕೆ ನೀಡಿರುವುದರಿಂದಲೇ. ವಿದ್ಯಾರ್ಥಿಯ ಅಥವಾ ಶಾಲೆಯ ಶ್ರಮವನ್ನು ಪರೀಕ್ಷೆಯ ಮಾನದಂಡವಾಗಿರುವ ತಜ್ಞರ ಅಭಿಪ್ರಾಯಗಳ ಒಮ್ಮತದಿಂದ ಅಳೆಯುವುದು ಸಮಂಜಸವೂ ಅಲ್ಲ, ಸಮರ್ಪಕವೂ ಅಲ್ಲ. ಅವು ಅಸಮರ್ಪಕ ಮತ್ತು ನಂಬಲು ಅನರ್ಹ, ಅಸ್ಥಿರ ಮತ್ತು ಸ್ವೇಚ್ಛಾನುಸಾರವಾದ ಪದ್ಧತಿಗಳು. ಈಗ ಪ್ರಸ್ತುತಪಡಿಸುತ್ತಿರುವ ಸಾಮನ್ಯ

ರಾಷ್ಟ್ರೀಯ ಶಿಕ್ಷಣ ವ್ಯವಸ್ಥೆಯನ್ನು ಪರೀಕ್ಷಾಪದ್ಧತಿಯ ಹಾನಿಕರ ಪ್ರಭಾವದಿಂದ ರಕ್ಷಿಸಲು ಎಚ್ಚರ ವಹಿಸುತ್ತೇವೆ.

ಪರೀಕ್ಷೆಯ ಉದ್ದೇಶ ಈಡೇರಬೇಕಾದರೆ ನಿರ್ದಿಷ್ಟ ಪ್ರದೇಶದ ಶಾಲೆಗಳು ಮಾಡಿರುವ ಕೆಲಸವನ್ನು ಆಡಳಿತಾತ್ಮಕ ಪರಿಶೀಲನೆಗೆ ಒಳಪಡಿಸಬೇಕು. ಅದನ್ನು ಶಿಕ್ಷಣ ಮಂಡಳಿಯ ನಿರೀಕ್ಷಕರು ಆಯ್ದ ವಿದ್ಯಾರ್ಥಿ ಗುಂಪುಗಳ ಸಾಧನೆಯ ಮಾದರಿ ಅಳತೆಯ ಮೂಲಕ ಮಾಡಬಹುದು. ಈ ರೀತಿಯ ಪರೀಕ್ಷೆಗಳನ್ನು ಪಠ್ಯಕ್ರಮ ಪರಿಷ್ಕರಣೆ ಮಾಡುವ ಜವಾಬ್ದಾರಿಯನ್ನು ಹೊಂದಿರುವ ನುರಿತ ತಜ್ಞರೊಂದಿಗೆ ಸಮಾಲೋಚನೆ ಮಾಡುವುದರ ಮೂಲಕ ರೂಪಿಸಬಹುದು. ಅವು ಪಠ್ಯಕ್ರಮದ ಎಲ್ಲಾ ಭಾಗಗಳನ್ನೂ ಒಳಗೊಳ್ಳುವಷ್ಟು ದೀರ್ಘವಾಗಿರಬೇಕು ಮತ್ತು ಮೌಲ್ಯಮಾಪನವು ಯಾವುದೇ ವ್ಯಕ್ತಿಗತ ಅಭಿಪ್ರಾಯಗಳನ್ನು ಒಳಗೊಳ್ಳದೆ ವಸ್ತುನಿಷ್ಠವಾಗಿ ಮತ್ತು ಸ್ವತಂತ್ರವಾಗಿ ರೂಪಗೊಂಡದ್ದಾಗಿರಬೇಕು.

ಕೆಲವು ಆಯ್ದ ವಿದ್ಯಾರ್ಥಿಗಳನ್ನು ಮಾತ್ರ ಪರೀಕ್ಷೆಗೆ ಒಳಪಡಿಸುವ ಈ ಮಾದರಿ ಶಾಲಾವ್ಯವಸ್ಥೆಯನ್ನು ಪರಿಣಾಮಕಾರಿತ್ವಗೊಳಿಸುವುದರ ಜೊತೆಗೆ ಅಂತಿಮ ತರಗತಿಯ ಸಧ್ಯದ ಪದ್ಧತಿಯಲ್ಲಿ ಪರೀಕ್ಷೆ ಎಂಬ ಅಗ್ನಿಪರೀಕ್ಷೆಯ ಮುನ್ನ "ಪುನರಾವರ್ತನೆ" "ಟಿಪ್ಪಣಿಗಳ" ಬಾಯಿಪಾಠ ಇತ್ಯಾದಿಗಳಿಗೆ ಸವೆಸುವ ಆರು ವಾರಗಳ ಕಾಲವನ್ನು ಬೋಧನೆ ಮತ್ತು ಕಲಿಕೆಯಲ್ಲಿ ಕ್ರಿಯಾಶೀಲವಾಗಿ ಬಳಸಿಕೊಳ್ಳಬಹುದು. ಅದನ್ನು ಮೂಲ ಕರಕೌಶಲ್ಯದಲ್ಲಿ ಪ್ರತೀ ವಿದ್ಯಾರ್ಥಿಯ ಸಾಮರ್ಥ್ಯವನ್ನು ಪ್ರಕರಣದಿಂದ ಪ್ರಕರಣಕ್ಕೆ ನಿರ್ಧರಿಸಲಾಗುವ ವಾರಗಳ ಮಟ್ಟಿಗೆ ಪರೀಕ್ಷೆಗೆ ಒಳಪಡಿಸಲು, ಹಾಗೂ ಶಾಲೆಯು ಸೇವೆ ಮಾಡುತ್ತಿರುವ ಹಳ್ಳಿಯ ಸಮುದಾಯದ ಅಭಿವೃದ್ಧಿಗಾಗಿ ಹೆಚ್ಚು ಹೆಚ್ಚು ಕೆಲಸವನ್ನು ಮಾಡುವುದಕ್ಕೆ ಉಪಯೋಗಿಸಿಕೊಳ್ಳಬಹುದು.

ವಿದ್ಯಾರ್ಥಿಯ ಕೆಲಸದ ದಾಖಲೆಗಳನ್ನು ಜಾಗರೂಕತೆಯಿಂದ ಪರಿಶೀಲಿಸಿದ ಆಧಾರದ ಮೇಲೆ ಮುಂದಿನ ತರಗತಿಗೆ ಉತ್ತೀರ್ಣಗೊಳಿಸಬಹುದು. ಅದನ್ನು ಬೋಧಕರು ಮಾತ್ರವೇ ಮಾಡಬೇಕು. ಶಾಲಾವ್ಯವಸ್ಥೆಯುದ್ದಕ್ಕೂ ಸಾಮರ್ಥ್ಯದ ಗುಣಮಟ್ಟವನ್ನು ಕಾಯ್ದುಕೊಳ್ಳಲು ಶಿಕ್ಷಣ ಮಂಡಳಿಯು ಶಾಲೆಗಳ ವಿವಿಧ ವಿಭಾಗಗಳ ಪ್ರತಿ ತರಗತಿಯ ವಿಶಿಷ್ಟ ಭಾಗಗಳಿಗೆ ವಾರ್ಷಿಕವಾಗಿ ಸಾಮಾನ್ಯ ಪರೀಕ್ಷೆಯೊಂದನ್ನು ನಡೆಸಬಹುದು. ಸಾಧ್ಯವಾದಷ್ಟು ವಿದ್ಯಾರ್ಥಿಗಳು ಅದೇ ತರಗತಿಯಲ್ಲಿ ಅಥವಾ ಅದರ ಯಾವುದೇ ಭಾಗವೊಂದಕ್ಕೆ ಸಂಬಂಧಿಸಿದ ಪಾಠಗಳನ್ನು ಪುನರಾವರ್ತಿಸುವುದನ್ನು ತಡೆಯಬೇಕು. ತರಗತಿಯ ವಿದ್ಯಾರ್ಥಿಗಳು ಹೆಚ್ಚಿನ ಸಂಖ್ಯೆಯಲ್ಲಿ "ಫೇಲ್" ಆದರೆ ಬೋಧಕರ ಕೆಲಸವನ್ನು ಪರಿಶೀಲನೆಗೆ ಒಳಪಡಿಸಬೇಕು. ಯಾವುದಾದರೂ ಶಾಲೆ ಹೆಚ್ಚಿನ ಸಂಖ್ಯೆಯಲ್ಲಿ 'ಅನುತ್ತೀರ್ಣ' ವಿದ್ಯಾರ್ಥಿಗಳನ್ನು ಹೊಂದಿದರೆ ಆಡಳಿತ ವ್ಯವಸ್ಥೆಯನ್ನು ಪುನರ್ವಿಮರ್ಶೆಗೆ ಒಳಪಡಿಸುವ ಅಗತ್ಯವಿರುತ್ತದೆ. ಸಮಗ್ರ ಶಾಲಾವ್ಯವಸ್ಥೆಯಲ್ಲಿ ಹೆಚ್ಚಿನ

ವಿದ್ಯಾರ್ಥಿಗಳು ಅನುತ್ತೀರ್ಣರಾದರೆ ಪಠ್ಯಕ್ರಮದಲ್ಲಿ ಮತ್ತು ತರಗತಿಗಳಿಗೆ ನಿಗದಿಪಡಿಸಿದ ಅರ್ಹತಾ ಮಾನದಂಡಗಳಲ್ಲಿ ದೋಷವಿರಬಹುದು. ಅದನ್ನು ಸರಿಪಡಿಸಲೇಬೇಕು. ವಿದ್ಯಾರ್ಥಿಗಳು ಒಂದು ವರ್ಷ ಕಲಿತಿದ್ದನ್ನು ಪುನರಾವರ್ತಿಸುವುದನ್ನು ಯಾವ ರೀತಿಯಲ್ಲಿಯೂ ಸಮರ್ಥಿಸಲಾಗುವುದಿಲ್ಲ.

ಶಿಕ್ಷಣ ಮಂಡಳಿ ತನ್ನ ಶಾಲೆಗಳ ಕಾರ್ಯಕಾರಿತ್ವವನ್ನು ಈ ಮೇಲೆ ಹೇಳಿದ ಸಾಧನಾ ಮಾದರಿ ಪರೀಕ್ಷೆ, ಮೂಲ ಕರಕೌಶಲ್ಯದಲ್ಲಿ ವಿದ್ಯಾರ್ಥಿಗಳು ಹೊಂದಿದ ಸಾಮರ್ಥ್ಯ ಹಾಗೂ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ತಮ್ಮ ಸುತ್ತಲ ಸಮುದಾಯದ ಸಾಮಾನ್ಯ ಜೀವನದ ಅಭಿವೃದ್ಧಿಗೆ ನೀಡಿದ ವಿಶಿಷ್ಟ ಕೊಡುಗೆಯ ಮೂಲಕ ಅಳೆಯಬೇಕು. ಈ ಶಾಲೆಗಳು ಮಾಡಿರುವ ಕೆಲಸದ ಜಿಲ್ಲಾವಾರು ವಾರ್ಷಿಕ ಪ್ರದರ್ಶನವೂ ಸಹ ಸಾಮರ್ಥ್ಯದ ನಿರ್ದಿಷ್ಟ ಗುಣಮಟ್ಟವನ್ನು ಕಾಯ್ದುಕೊಳ್ಳಲು ಹೆಚ್ಚಿನ ಸಹಾಯ ಮಾಡಬಲ್ಲದು.

# ಆಡಳಿತ

1. ನಾವು ಮೇಲೆ (ಭಾಗ ಎರಡು) ವಿವರಿಸಿದ ಶಿಕ್ಷಣದ ಉದ್ದೇಶಗಳು ಈಡೇರಬೇಕೆಂದರೆ ಮಕ್ಕಳು ಶಾಲೆಯಲ್ಲಿ ಏಳು ವರ್ಷದ ಮಟ್ಟಿಗೆ ಇರುವುದು ಅಗತ್ಯವಾಗುತ್ತದೆ. ಗಂಭೀರ ಪರಿಗಣನೆಯ ನಂತರ ನಾವು ತೀರ್ಮಾನಕ್ಕೆ ಬಂದಿರುವುದೇನೆಂದರೆ ಶಿಕ್ಷಣವನ್ನು ಕಡ್ಡಾಯ ಮಾಡಬೇಕೆಂದರೆ ಶಾಲೆಗೆ ಸೇರಲು ಮಕ್ಕಳಿಗೆ ಏಳು ಅಥವಾ ಹೆಚ್ಚು ವರ್ಷ ವಯಸ್ಸಾಗಿರಬೇಕು. ಮೂಲ ಶಿಕ್ಷಣ ಸಾಧ್ಯವಾದಷ್ಟೂ ಮಟ್ಟಿಗೆ ಎಲ್ಲರಿಗೂ ಒಂದೇ ರೀತಿಯಲ್ಲಿ ಇರಬೇಕೆಂಬ ನಿಯಮವನ್ನು ನಾವು ಒಪ್ಪಿಕೊಂಡಿರುವುದರಿಂದ ಈ ಏಳು ವರ್ಷ ಅವಧಿಯ ಶಿಕ್ಷಣ ಏಳು ಮತ್ತು ಹದಿನಾಲ್ಕರ ನಡುವಿನ ಗಂಡು ಮತ್ತು ಹೆಣ್ಣುಮಕ್ಕಳಿಗಿಬ್ಬರಿಗೆ ಉಚಿತವಾಗಿಯೂ ಮತ್ತು ಕಡ್ಡಾಯವಾಗಿಯೂ ಇರಬೇಕೆಂದು ನಾವು ಶಿಫಾರಸ್ಸು ಮಾಡುತ್ತಿದ್ದೇವೆ. ಆದಾಗ್ಯೂ ಅಪವಾದವೆಂದರೆ, ಹೆಣ್ಣುಮಕ್ಕಳಿಗೆ ಹನ್ನೆರಡರ ವಯಸ್ಸಿನ ನಂತರ ಪಾಲಕರು ಬೇಕಿದ್ದಲ್ಲಿ ಶಿಕ್ಷಣವನ್ನು ನಿಲ್ಲಿಸಬಹುದು.

2. ಕಡ್ಡಾಯ ಶಿಕ್ಷಣದ ಯೋಜನೆಯಲ್ಲಿ ಶಾಲೆಗೆ ಸೇರಲು ಮಗುವಿಗೆ ಕನಿಷ್ಠ ಏಳು ವರ್ಷ ವಯಸ್ಸಾಗಿರಬೇಕು ಎಂದು ನಾವು ನಿಗದಿಪಡಿಸಿರುವುದರಿಂದ ಅದರ ಮುಂಚಿನ ಅತಿ ಮುಖ್ಯವಾದ ವರ್ಷಗಳನ್ನು ಮನೆಯಲ್ಲಿ ಕಳೆಯುವ ಅನಿವಾರ್ಯತೆಗೆ ಮಗುವನ್ನು ಒಡ್ಡುತ್ತಿದ್ದೇವೆ ಎನ್ನುವುದರ ಅರಿವು ನಮಗಿದೆ. ಹಳ್ಳಿಯ ಬಡಕುಟುಂಬಗಳಲ್ಲಿ ಬದುಕುಳಿಯಲೂ ಕಷ್ಟಪಡುತ್ತಿರುವ ಅಶಿಕ್ಷಿತ ತಂದೆತಾಯಿಯರ ಸಹಜವಾದ ನಿರ್ಲಕ್ಷ್ಯದಿಂದ ಕೂಡಿದ ಅನನುಕೂಲಕರ ವಾತಾವರಣ ಮಗುವನ್ನು ರೂಪಿಸುತ್ತದೆ ಎನ್ನುವುದನ್ನು ಬಲ್ಲೆವು. ಆದ್ದರಿಂದ ಮೂರು ಮತ್ತು ಏಳರ ನಡುವಿನ ವಯಸ್ಸಿನ ಮಕ್ಕಳಿಗೆ ಶಾಲಾ-ಮುಂಚಿನ ಶಿಕ್ಷಣ ವ್ಯವಸ್ಥೆಯೊಂದನ್ನು ಪ್ರಭುತ್ವ ಖುದ್ದಾಗಿ ನಡೆಸುವ ಅಥವಾ ಬೆಂಬಲಿಸುವ ಅಗತ್ಯವಿದೆ ಎನ್ನುವುದು ನಮ್ಮ ಬಲವಾದ ಅಭಿಪ್ರಾಯ. ಆದರೆ ಆರ್ಥಿಕ ತಡೆಗಳ ದೆಸೆಯಿಂದ ಅದನ್ನು ಶಿಫಾರಸ್ಸು ಮಾಡಲು ಸಾಧ್ಯವಾಗುತ್ತಿಲ್ಲ ಎಂಬ ವಾಸ್ತವವನ್ನು ನಾವು ಖೇದದಿಂದಲೇ ಒಪ್ಪಿಕೊಳ್ಳಬೇಕಾಗಿದೆ. ಅದಾಗ್ಯೂ ಪ್ರಭುತ್ವ ಈ ವಿಷಯದಲ್ಲಿ ತನ್ನ ಅಂತಿಮ ಜವಾಬ್ದಾರಿಯನ್ನು ನಿರ್ಲಕ್ಷಿಸಬಾರದು ಎನ್ನುವುದು ನಮ್ಮ ಕಾಳಜಿ. ಇಲ್ಲಿ ವಿವರಿಸಿರುವ ಮೂಲ ಶಿಕ್ಷಣದ ಯೋಜನೆಯು ಮನೆಯ ಜೀವನಕ್ಕೆ ನಿಕಟ ಸಂಬಂಧ ಹೊಂದಿದೆ ಎನ್ನುವುದನ್ನು ಸರಿಯಾದ ರೀತಿಯಲ್ಲಿ ಗ್ರಹಿಸಿ ಅನುಷ್ಠಾನಗೊಳಿಸಿದರೆ ಮಗುವಿಗೆ ಮನೆಯಲ್ಲಿ ಈಗಿರುವುದಕ್ಕಿಂತಲೂ ಉತ್ತಮವಾದ ಶಾಲಾ-ಮುಂಚಿನ ಶಿಕ್ಷಣದ ತರಬೇತಿ ದೊರೆಯಬಲ್ಲದು ಎನ್ನುವ ವಿಶ್ವಾಸ ನಮಗಿದೆ. ಸಧ್ಯದಲ್ಲೇ ರೂಪಿಸಬೇಕಾದ ಮಹತ್ವ ಕೆಲಸವಾಗಿರುವ ವಯಸ್ಕ ಶಿಕ್ಷಣಕ್ಕೂ ಸಹ ಅದು ಸಾಕಷ್ಟು ಸಹಾಯ ಮಾಡಬಲ್ಲದು.

3. ಪಠ್ಯಕ್ರಮದ ವಿವಿಧ ಭಾಗಗಳನ್ನು ಪೂರ್ಣಗೊಳಿಸಲು ಬೇಕಾದ ಕಾಲಾವಧಿಯನ್ನು ಅಂದಾಜಿಸಲು ಇಲ್ಲಿ ಪ್ರಯತ್ನಿಸಿದ್ದೇವೆ. ಈ ಕೆಳಗಿನ ವಿತರಣೆ ಸೂಕ್ತವಾಗಿರಬಹುದು ಎಂದು ನಂಬುತ್ತೇವೆ :

ಮೂಲ ಕರಕೌಶಲ್ಯ - 3 ಗಂಟೆ ಮತ್ತು 20 ನಿಮಿಷಗಳು.

ಸಂಗೀತ, ಚಿತ್ರಕಲೆ ಮತ್ತು ಗಣಿತ - 40 ನಿಮಿಷಗಳು..

ಮಾತೃಭಾಷೆ - 40 ನಿಮಿಷಗಳು.

ಸಾಮಾಜಿಕ ಅಧ್ಯಯನ ಮತ್ತು ಸಾಮಾನ್ಯ ವಿಜ್ಞಾನ - 30 ನಿಮಿಷÀಗಳು.

ದೈಹಿಕ ತರಬೇತಿ - 10 ನಿಮಿಷಗಳು.

ಮಧ್ಯಂತರ ಬಿಡುವು - 10 ನಿಮಿಷಗಳು

------------------------------

ಒಟ್ಟು 5 ಗಂಟೆ 30 ನಿಮಿಷಗಳು

---------------------------------

ಈ ಅಂದಾಜನ್ನು ರೂಪಿಸುವಾಗ ನೂಲುವಿಕೆ ಮತ್ತು ನೇಯುವಿಕೆಯನ್ನು ಮೂಲ ಕರಕೌಶಲ್ಯಗಳಾಗಿ ಪರಿಗಣಿಸಿದ್ದೇವೆ. ಬೇರೆ ಕರಕೌಶಲ್ಯಗಳಿಗೆ ಈ ಅಂದಾಜು ಬೇರೆ ರೀತಿಯಾಗಿರಬಹುದಾದ ಸಾಧ್ಯತೆಗಳಿವೆ. ಆದರೆ ಮೂಲ ಕರಕೌಶಲ್ಯಕ್ಕೆ ಅಂದಾಜಿಸುವ ಕಾಲಾವಧಿ ಮೇಲೆ ಸೂಚಿಸಿರುವ ಅವಧಿಯನ್ನು ಯಾವ ಸಂದರ್ಭದಲ್ಲಿಯೂ ಮೀರಬಾರದು.

ಶಾಲೆ ಒಂದು ವರ್ಷಕ್ಕೆ 288 ಮತ್ತು ತಿಂಗಳಿಗೆ 24 ದಿನಗಳ ಮಟ್ಟಿಗೆ ಕೆಲಸ ನಿರ್ವಹಿಸಬೇಕು.

4. ಮಕ್ಕಳ ಆಸಕ್ತಿಗಳಲ್ಲಿ ವೈವಿಧ್ಯತೆ ಇರುವುದರಿಂದ ಸಾಧ್ಯವಾದಷ್ಟೂ ವಿವಿಧ ಕರಕೌಶಲ್ಯಗಳ ತರಬೇತಿಯನ್ನು ಶಾಲೆಯ ಕೊನೆಯ ಎರಡು ವರ್ಷದ ಮಟ್ಟಿಗಾದರೂ ಒದಗಿಸಬೇಕು ಎಂದು ಶಿಫಾರಸ್ಸು ಮಾಡುತ್ತಿದ್ದೇವೆ.

5. ಪ್ರತಿಯೊಂದು ಶಾಲೆಗೆ ಹೊಂದಿಕೊಂಡಂತೆ ಶಾಲಾತೋಟ ಮತ್ತು ಆಟದ ಮೈದಾನವಾಗಿ ಒದಗಬಲ್ಲಷ್ಟು ದೊಡ್ಡದಾದ ಒಂದು ಜಮೀನಿರಬೇಕು.

6. ಅಹಾರಪೌಷ್ಟಿಕದ ಕೊರತೆ ಮತ್ತು ಶಾಲೆಯಲ್ಲಿ ಹಿಂದುಳಿಯುವಿಕೆಯ ನಡುವಿನ ನಿಕಟ ಸಂಬಂಧವನ್ನು ಸಂಶೋಧನೆಗಳು ಸ್ಪಷ್ಟಪಡಿಸಿವೆ. ಗ್ರಾಮೀಣ

ಮಕ್ಕಳು ಹೆಚ್ಚು ಕಮ್ಮಿ ಸದಾ ಅಹಾರಪೌಷ್ಟಿಕತೆಯ ಕೊರತೆಯಿಂದ ಬಳಲುತ್ತಿರುತ್ತಾರೆ ಎಂಬ ಅಂಶವನ್ನು ಪರಿಗಣಿಸಿ ಮಕ್ಕಳಿಗೆ ಶಾಲಾವಧಿಯ ನಡುವೆ ಪೌಷ್ಟಿಕ ಲಘು ಉಪಾಹಾರವನ್ನು ಒದಗಿಸಲು ಎಲ್ಲಾ ಪ್ರಯತ್ನಗಳನ್ನು ಮಾಡಬೇಕು ಎಂದು ಶಿಫಾರಸ್ಸು ಮಾಡುತ್ತಿದ್ದೇವೆ. ಪ್ರಭುತ್ವ ಅದರ ಖರ್ಚುಗಳನ್ನು ಭರಿಸುವ ನಿಟ್ಟಿನಲ್ಲಿ ಸಾಕಷ್ಟು ಸಾರ್ವಜನಿಕ ಸಹಕಾರವನ್ನು ಪಡೆಯಬಲ್ಲದು ಎಂಬ ಭರವಸೆ ನಮಗಿದೆ.

7. ಶಿಕ್ಷಕರ ಸಂಬಳಕ್ಕೆ ಸಂಬಂಧಪಟ್ಟಂತೆ ಗಾಂಧೀಜಿಯವರ "ಸಾಧ್ಯವಾದರೆ ಇಪ್ಪತ್ತೈದು ರೂಪಾಯಿಗಳು, ಆದರೆ ಇಪ್ಪತ್ತು ರೂಪಾಯಿಗಳಿಗಿಂತ ಕಡಮೆ ಇರಬಾರದು" ಎಂಬ ಸಲಹೆಯನ್ನು ನಾವು ಅನುಮೋದಿಸುತ್ತೇವೆ. ಆದರೆ ಶಾಲೆಯ ಉನ್ನತ ತರಗತಿಗಳಿಗೆ ಬೋಧಿಸಲು ಉನ್ನತ ಮಟ್ಟದ ಶೈಕ್ಷಣಿಕ ಅರ್ಹತೆಗಳನ್ನು ಹೊಂದಿರುವ ಶಿಕ್ಷಕರನ್ನು ನೇಮಕ ಮಡುವುದು ಅವಶ್ಯಕ ಎನ್ನುವ ಅಂಶವನ್ನು ಪರಿಗಣಿಸಿ ಅಂತಹ ಶಿಕ್ಷಕರಿಗೆ ಸ್ವಲ್ಪ ಹೆಚ್ಚಿನ ಸಂಬಳವನ್ನು ನೀಡಬೇಕಾಗಿ ಬರಬಹುದು .

8. ಈ ಹೊಸ ಶಿಕ್ಷಣ ಪ್ರಯೋಗದ ಮೊದಲ ಎರಡು ಮೂರು ವರ್ಷಗಳಲ್ಲಿ ಸಮರ್ಥ ಮತ್ತು ವಿಶೇಷ ಅರ್ಹತೆಯನ್ನು ಹೊಂದಿರುವ ಬೋಧಕರಿಗೆ ಸ್ವಲ್ಪ ಹೆಚ್ಚಿನ ಸಂಬಳವನ್ನು ನೀಡಬೇಕಾಗಿ ಬಂದರೂ ಸಹ ಅವರನ್ನು ನೇಮಕ ಮಾಡಬೇಕೆಂದು ಶಿಫಾರಸ್ಸು ಮಾಡುತ್ತಿದ್ದೇವೆ. ಅಂತಹ ಬೋಧಕರಿಗೆ ಆಯ್ದ ಶಾಲೆಗಳಲ್ಲಿ ಅಗತ್ಯವಾದ ಈ ಹೊಸ ಪಠ್ಯಕ್ರಮದ ತಂತ್ರಗಳನ್ನು ಮತ್ತು ಬೋಧನಾ ವಿಧಾನಗಳನ್ನು ಕಾರ್ಯಗತಗೊಳಿಸುವ ಜವಾಬ್ದಾರಿಯನ್ನು ನೀಡಬೇಕು. ಈ ಮುಂಚೂಣಿ ಜವಾಬ್ದಾರಿಯನ್ನು ಯಶಸ್ವಿಯಾಗಿ ನಿರ್ವಹಿಸಿದ ಮೇಲೆ ನಮ್ಮ ಮೂರು ವರ್ಷಗಳ ತರಬೇತಿಯನ್ನು ಸಮರ್ಪಕವಾಗಿ ಮುಗಿಸಿದ ಹೆಚ್ಚು ಸಾಮರ್ಥ್ಯ ಹೊಂದಿರದ ಬೋಧಕರನ್ನು ಈ ಶಾಲೆಗಳಲ್ಲಿ ನೇಮಕ ಮಾಡಿಕೊಂಡರೆ ಅವರು ಸಾಕಷ್ಟು ತೃಪ್ತಿಕರವಾಗಿ ಈ ಯೋಜನೆಯನ್ನು ಮುಂದಕ್ಕೆ ಕೊಂಡೊಯ್ಯಬಹುದು.

9. ನಮ್ಮ ಅಭಿಪ್ರಾಯದಲ್ಲಿ ಪ್ರತಿ ತರಗತಿಯಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಮೂವತ್ತನ್ನು ಮೀರಿರಬಾರದು. ಸಂಖ್ಯೆ ದೊಡ್ಡದಿದ್ದರೆ ಬೋಧಕರು ತಮ್ಮ ಭಾರವಾದ ಮತ್ತು ಜವಾಬ್ದಾರಿಯುತ ಕರ್ತವ್ಯಗಳನ್ನು ಸಮರ್ಥವಾಗಿ ನಿರ್ವಹಿಸಲಾಗುವುದಿಲ್ಲ.

10. ಬೋಧಕರನ್ನು ಆರಿಸುವಾಗ ಶಾಲೆ ಇರುವ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳಿಗೆ ಆದ್ಯತೆ ಕೊಡುವುದು ಒಳ್ಳೆಯದು.

11. ಮಹಿಳೆಯರು ಈ ವೃತ್ತಿಯನ್ನು ಆರಿಸಿಕೊಳ್ಳುವಂತೆ ಪ್ರೋತ್ಸಾಹಿಸಲು ಅವರಿಗೆ ಬೋಧನಾ ತರಬೇತಿಯ ಎಲ್ಲಾ ಅನುಕೂಲಗಳು ಲಭ್ಯವಾಗುವಂತೆ ವಿಶೇಷ ಶ್ರಮ ವಹಿಸಬೇಕು.

12. ತರಬೇತಿಗೆ ಸೂಕ್ತವಾದ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಮಸ್ಯೆಯನ್ನು ಎಚ್ಚರಿಕೆಯಿಂದ ಮತ್ತು ಸಮರ್ಥವಾಗಿ ಪರಿಶೀಲಿಸಿ, ಆಯ್ಕೆ ಮಾಡಲು ವಿಶ್ವಾಸಾರ್ಹ ವಿಧಾನವೊಂದನ್ನು ರೂಪಿಸಬೇಕು. ಈ ಕ್ಲಿಷ್ಟ ಸಮಸ್ಯೆಯನ್ನು ಜಾಗರೂಕತೆಯಿಂದ ಬಗೆಹರಿಸದಿದ್ದರೆ ಈ ಯೋಜನೆ ಹೆಚ್ಚು ಯಶಸ್ವಿಯಾಗುವುದಿಲ್ಲ ಎನ್ನುವುದು ನಮಗೆ ಮನವರಿಕೆಯಾಗಿದೆ. ಬೋಧನೆಗೆ ವಿಶೇಷವಾದ ಸಾಮಾಜಿಕ ಮತ್ತು ನೈತಿಕ ಧೋರಣೆಗಳು ಮತ್ತು ಗುಣಗಳು ಅತ್ಯಾವಶ್ಯಕ. ಬೋಧನೆಯ ವೃತ್ತಿಯನ್ನು ಸ್ವಯಂಪ್ರೇರಿತವಾಗಿ ಆರಿಸಿಕೊಳ್ಳಲು ಬಯಸುವವರೆಲ್ಲರೂ ಅದಕ್ಕೆ ಅರ್ಹರು ಎಂದು ಭಾವಿಸುವುದು ಸರಿಯಲ್ಲ . ಹಾಗಾಗಿ ಆಯ್ಕೆಯನ್ನು ಅತಿ ಎಚ್ಚರಿಕೆಯಿಂದ ಮತ್ತು ಮುಂದಾಲೋಚನೆಯಿಂದ ನಿರ್ವಹಿಸಬೇಕು. ಆದಷ್ಟೂ ಮನಶಾಸ್ತ್ರಜ್ಞರು ಹೇಳುವ “ಜನರೊಡನೆ ಬೆರೆಯುವ (social type)” ವ್ಯಕ್ತಿತ್ವ ಹೊಂದಿದವರನ್ನು ಮಾತ್ರ ಆರಿಸಬೇಕು.

13. ತರಬೇತಿ ಸಂಸ್ಥೆಗಳು ವಸತಿ-ಸಹಿತವಾಗಿರಬೇಕು. ಅವು ಅಸ್ಪೃಶ್ಯತೆ ಅಥವಾ ಸಹಭೋಜನಕ್ಕೆ ಸಂಬಂಧಪಟ್ಟಂತೆ ಯಾವುದೇ ನಿರ್ಬಂಧಗಳಿಲ್ಲದೇ ಎಲ್ಲಾ ಧರ್ಮ ಮತ್ತು ವರ್ಗಗಳಿಗೆ ತೆರೆದಿರಬೇಕು.

14. ಈ ಸಂಸ್ಥೆಗಳಲ್ಲಿ ಕರಕುಶಲದ ತರಬೇತಿ ನೀಡಲು ನುರಿತ ಕುಶಲಕರ್ಮಿಗಳನ್ನು ನೇಮಿಸಬಹುದು. ಅಗತ್ಯವಿದ್ದರೆ ಮೂಲ ಶಾಲೆಗಳ ಬೋಧಕರು ಕರಕುಶಲ ಶಿಕ್ಷಣ ನೀಡುವಾಗ, ಬೋಧಿಸುವಾಗ ಮತ್ತು ಮಕ್ಕಳು ತಯಾರಿಸಿದ ಕರಕುಶಲ ವಸ್ತುಗಳನ್ನು ಮಾರಾಟ ಮಾಡುವ ಮುನ್ನ ಪರಿಷ್ಕರಿಸುವಾಗ ಸ್ಥಳೀಯ ಕುಶಲಕರ್ಮಿಗಳ ಸಹಾಯವನ್ನು ತೆಗೆದುಕೊಳ್ಳಬಹುದು.

15. ಬೋಧನಾ ಸಾಮರ್ಥ್ಯದ ಗುಣಮಟ್ಟವನ್ನು ಕಾಯ್ದುಕೊಳ್ಳಲು ತರಬೇತಿ ಕಾಲೇಜು ಮತ್ತು ಶಾಲೆಗಳಲ್ಲಿ ಕ್ರಮೇಣ ‘ರಿಫ್ರೆಶರ್ ಕೋರ್ಸ್ (Refresher course)’ ಗಳನ್ನು ಭಾರಿ ಪ್ರಮಾಣದಲ್ಲಿ ಹಮ್ಮಿಕೊಳ್ಳಬೇಕು. ಆ ಕೋರ್ಸ್‌ಗಳು ಸಾಂಸ್ಕೃತಿಕ, ವೃತ್ತಿಪರ ಮತ್ತು ಕೈಗಾರಿಕಾ ಇತ್ಯಾದಿ ವಿಧಗಳಾಗಿರಬೇಕು.

16. ಶೈಕ್ಷಣಿಕ ವಿಧಾನಗಳನ್ನು ಪ್ರದರ್ಶಿಸುವ ಮತ್ತು ಬೋಧನಾ ಅಭ್ಯಾಸಕ್ಕೋಸ್ಕರ ಆಯ್ದ ಶಾಲೆಗಳು ತರಬೇತಿ ಸಂಸ್ಥೆಗೆ ಹೊಂದಿಕೊಂಡಂತೆ ಇರಬೇಕು. ಅವು ಹೊಸ ಹೊಸ ಬೋಧನಾ ವಿಧಾನಗಳನ್ನು ಪ್ರಯೋಗಿಸಿ ಬೆಳೆಸಬಲ್ಲ ಪ್ರಯೋಗಾಲಯಗಳಾಗಿರಬೇಕು. ನುರಿತ ಶಿಕ್ಷಕರನ್ನೊಳಗೊಂಡ ಈ ಶಾಲೆಗಳು ಅವರ ಸ್ಥಳೀಯ ಪ್ರದೇಶಕ್ಕೆ ಮಾದರಿ ಶಾಲೆಗಳಾಗಿರಬೇಕು ಹಾಗೂ ಇತರ ಶಾಲೆಗಳ ಬೋಧಕರು ಅವುಗಳ ಕಾರ್ಯವಿಧಾನಗಳನ್ನು, ಶಿಕ್ಷಣಸಾಮಗ್ರಿಗಳನ್ನು ಮತ್ತು ಬೋಧನಾಕ್ರಮಗಳನ್ನು ವೀಕ್ಷಿಸಲು ಅವಕಾಶವಿರಬೇಕು.

17. ಕರಕೌಶಲ್ಯದ ಪರಿಚಯ, ಪಠ್ಯಕ್ರಮದ ವಿಷಯವನ್ನು ಸಹಸಂಬಂಧಿಸಿ ಸಮನ್ವಯಿಸುವುದು, ಶಿಕ್ಷಣಕ್ರಮಕ್ಕೂ ಬದುಕಿಗೂ ಇರಬೇಕಾದ ನಿಕಟ ಸಂಬಂಧ, ಮಾಡಿ-ಕಲಿ ವಿಧಾನದ ಮೂಲಕ ಶಿಕ್ಷಣ, ವೈಯಕ್ತಿವಾಗಿ ಉಪಕ್ರಮಿಸುವ ಶಕ್ತಿ ಮತ್ತು ಸಾಮಾಜಿಕ ಜವಾಬ್ದಾರಿಯ ಅರಿವು ಇವು ಈ ಹೊಸ ಯೋಜನೆಯ ಮುಖ್ಯ ಲಕ್ಷಣಗಳು. ಆದರೆ ವಿದ್ಯಾರ್ಥಿಗಳಿಗೆ ಮತ್ತು ವಿಶೇಷವಾಗಿ ಬೋಧಕರಿಗೆ ಅದಕ್ಕೆ ಬೇಕಾದ ಅವಶ್ಯಕ ಪುಸ್ತಕ ಮತ್ತು ಇತರ ಸಾಮಗ್ರಿಗಳನ್ನು ಒದಗಿಸದೇ ಇದ್ದರೆ ಅವು ಈಡೇರಲಾರವು. ಆದ್ದರಿಂದ ವಿವರ್ಣಾತ್ಮಕ ಸಾಮಗ್ರಿಗಳು, ಬೋಧಕರಿಗೆ ಪುಸ್ತಕಗಳು ಮತ್ತು ಸಹಸಂಬಂಧಿತ ಕೆಲಸಗಳಿಗೆ ಅಗತ್ಯ ಕಾರ್ಯಕ್ರಮಗಳನ್ನು ಸಿದ್ಧಪಡಿಸುವುದು ಅತ್ಯಗತ್ಯ. ಈ ಹೊಸ ಚೈತನ್ಯವನ್ನು ಹೊಂದಿರಬೇಕೆಂದರೆ ಸಂಪೂರ್ಣವಾಗಿ ಹೊಸದಾದ ಪಠ್ಯಪುಸ್ತಕಗಳು ಸಹ ಅತ್ಯಗತ್ಯ. ಪ್ರತಿ ಪ್ರಾಂತ್ಯದ ಶಿಕ್ಷಣ ಮಂಡಳಿ ಮತ್ತು ಈ ಕೆಳಗೆ ಸ್ಥಾಪಿತವಾಗಬೇಕೆಂದು ಶಿಫಾರಸ್ಸು ಮಾಡಲ್ಪಟ್ಟಿರುವ ರಾಷ್ಟ್ರೀಯ ಶಿಕ್ಷಣದ ಕೇಂದ್ರ ಸಂಸ್ಥೆ, ಇವೆರಡೂ ಈ ನಿಟ್ಟಿನಲ್ಲಿ ಅಮೂಲ್ಯ ಸಹಾಯವನ್ನು ಒದಗಿಸಬಲ್ಲವು. ಈ ಹೊಸ ಬಗೆಯ ಶಾಲೆಗಳನ್ನು ಸ್ಥಾಪಿಸಲು ಮುಂದೆ ಬಂದಿರುವ ಪ್ರಾಂತ್ಯಗಳು ಆzಷ್ಟೂ ಬೇಗ ಅಗತ್ಯ ಪಠ್ಯಪುಸ್ತಕಗಳು ಮತ್ತು ಇತರೆ ಸಾಮಗ್ರಿಗಳನ್ನು ತಯಾರಿಸಲು ಬೇಕಾದ ಎಲ್ಲ ಸಿದ್ಧತೆಯನ್ನು ಮಾಡಿಕೊಳ್ಳಲು ಅಗತ್ಯವಾದ ವ್ಯವಸ್ಥೆಯನ್ನು ಸ್ಥಾಪಿಸಬೇಕು.

18. ‘ಪರೀಕ್ಷೆಗಳು’ ಎಂಬ ವಿಭಾಗದಲ್ಲಿ ಶಾಲೆಯ ಸಾಧನೆಗಳನ್ನು ವ್ಯವಸ್ಥಿತವಾಗಿ ಅಳೆಯುವುದು ಆಯಾ ಪ್ರಾಂತ್ಯದ ಶಿಕ್ಷಣ ಅಧಿಕಾರದ ಪ್ರಮುಖವಾದ ಜವಾಬ್ದಾರಿ ಎಂದು ಸ್ಪಷ್ಟವಾಗಿ ಸೂಚಿಸಿದ್ದೇವೆ. ಪ್ರತಿಯೊಂದು ಪ್ರಾಂತ್ಯದ ಶಿಕ್ಷಣ ಮಂಡಳಿ ಸಮರ್ಥ ಶಿಕ್ಷಣತಜ್ಞರ ಸಿಬ್ಬಂದಿಯನ್ನು ನೇಮಿಸಬೇಕು ಎಂದು ನಾವು ಶಿಫಾರಸ್ಸು ಮಾಡಲು ಬಯಸುತ್ತೇವೆ. ಈ ಸಿಬ್ಬಂದಿಯು ಶಾಲೆಯ ಪಠ್ಯಕ್ರಮವನ್ನು ಜನಸಮುದಾಯದ ವಾಸ್ತವ ಬದುಕಿಗೆ ಹತ್ತಿರವಾಗಿಸಲು ವೈಜ್ಞಾನಿಕ ಸಂಶೋಧನೆಯಲ್ಲಿ ತೊಡಗಿಸಿಕೊಂಡು ಶಿಕ್ಷಕರಿಗೆ ಸಾಧನೆಯ ಹೊಸ ಮಟ್ಟ ಮತ್ತು ಮಾನದಂಡಗಳ ಬಳಕೆಯ ಬಗ್ಗೆ ತಿಳುವಳಿಕೆ ನೀಡಬೇಕು. ಹಾಗೂ ಈ ನುರಿತ ಸಿಬ್ಬಂದಿ ಪ್ರಗತಿಪರ ಶಿಕ್ಷಣ ವಿಧಾನಗಳನ್ನು ಪ್ರಯತ್ನಿಸುತ್ತಾ, ಈ ದೇಶದಲ್ಲಿ ಮತ್ತು ಇತರ ಕಡೆಗಳಲ್ಲಿ ಯಶಸ್ವಿಯಾಗಿ ನಡೆದಿರುವ ಅಂತಹ ಪ್ರಯೋಗಗಳ ಫಲಿತಾಂಶಗಳನ್ನು ಶಿಕ್ಷಕರಿಗೆ ಪರಿಚಯಿಸುವುದರ ಜೊತೆಗೆ ಬೋಧಕರ ಮತ್ತು ಮೇಲ್ವಿಚಾರಕರ ತರಬೇತಿಗೆ ಮಾರ್ಗದರ್ಶನ ನೀಡುತ್ತಿರಬೇಕು.

19. ಅಧಿಕೃತ ಮಂಡಳಿಗಳಲ್ಲದೆ ಒಂದು ಸ್ವತಂತ್ರ ಹಾಗೂ ಅನಧಿಕೃತವಾದ ಕೇಂದ್ರೀಯ ಭಾರತೀಯ ಶಿಕ್ಷಣ ಸಂಸ್ಥೆಯೊಂದನ್ನು ಪ್ರಾರಂಭಿಸುವ ವಿಚಾರವನ್ನು ಶಿಫಾರಸ್ಸು ಮಾಡಲು ಬಯಸುತ್ತೇವೆ. ಅದು ಆಡಳಿತ ಜವಾಬ್ದಾರಿಯಿಂದ ಮುಕ್ತವಾಗಿದ್ದು ಶಿಕ್ಷಣ ಮತ್ತು ಇತರ ಸಾಂಸ್ಕೃತಿಕ

ಕ್ಷೇತ್ರಗಳಲ್ಲಿ ಪ್ರಸಿದ್ಧರಾದವರ ಹೆಸರುಗಳನ್ನು ಒಳಗೊಂಡಿರಬೇಕು. ಈ ಸಂಸ್ಥೆಯ ಧ್ಯೇಯೋದ್ದೇಶಗಳು ಈ ಕೆಳಗಿನಂತಿರಬೇಕು:

a. ಶಿಕ್ಷಣ ಕಾರ್ಯನೀತಿ ಮತ್ತು ಅದರ ಆಚರಣೆಗೆ ಸಂಬಂಧಪಟ್ಟಂತೆ ಸಲಹಾ ಸಮಿತಿಯಾಗಿ ಕಾರ್ಯನಿರ್ವಹಿಸುವುದು.
b. ಭಾರತ ಮತ್ತು ಹೊರಗಿನ ದೇಶಗಳಲ್ಲಿ ಶಿಕ್ಷಣದ ಈ ಪ್ರಯತ್ನಗಳಿಗೆ ಸಂಬಂಧಪಟ್ಟಂತಹ ಧ್ಯೇಯಗಳನ್ನು ಮತ್ತು ವಿಚಾರಗಳನ್ನು ಸಂಶೋಧಿಸಿ, ಚರ್ಚಿಸಿ, ಎಲ್ಲಾ ಆ ಆಸಕ್ತರಿಗೆ ಸಂಶೋಧನೆಯ ಫಲಿತಾಂಶಗಳನ್ನು ಲಭ್ಯವಾಗಿಸುವುದು.
c. ಭಾರತದ ಎಲ್ಲಾ ಪ್ರಾಂತ್ಯ ಮತ್ತು ರಾಜ್ಯ ಹಾಗೂ ಹೊರಗಿನ ದೇಶಗಳಲ್ಲಿ ಆಗುತ್ತಿರುವ ನೂತನ ಶೈಕ್ಷಣಿಕ ಪರಿಪಾಠಗಳ ಬಗ್ಗೆ ತಿಳಿದುಕೊಳ್ಳುವುದು ಮತ್ತು ಮಾಹಿತಿಯನ್ನು ಸಂಗ್ರಹಿಸಿ ಇಡುವುದು.
d. ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಇರುವ ಸಮಸ್ಯೆಗಳ ಬಗ್ಗೆ ಸಂಶೋಧನೆಯನ್ನು ನಡೆಸುವುದು.
e. ಶೈಕ್ಷಣಿಕ ಕಾರ್ಯಕರ್ತರಿಗೆ ಶಿಕ್ಷಣಕ್ಕೆ ಸಂಬಂಧಪಟ್ಟ ಪ್ರಬಂಧಗಳನ್ನು ಮತ್ತು ಒಂದು ನಿಯತಕಾಲಿಕೆಯನ್ನು ಯೋಜಿಸಿ ಲಭ್ಯವಾಗಿಸುವುದು.

20. ಭಾವೀ ಪ್ರಜೆಗಳ ಯೋಗಕ್ಷೇಮದ ಬಗ್ಗೆ ಕಾಳಜಿ ವಹಿಸಬೇಕಾದ ಒಂದು ದೇಶದ ಸಾರ್ವಜನಿಕ ಉಪಯೋಗೀ ಸಂಸ್ಥೆಗಳು ಸಮನ್ವಯದಿಂದ ಕೆಲಸಮಾಡಬೇಕಾದದು ಅತ್ಯಗತ್ಯ ಎನ್ನುವುದು ತಿಳಿದಿರುವ ವಿಷಯವೇ. ದುಃಖದ ಸಂಗತಿಯೆಂದರೆ ವಸ್ತುಸ್ಥಿತಿ ಹಾಗಿಲ್ಲದಿರುವುದು. ಶಿಕ್ಷಣ ಇಲಾಖೆ ಪ್ರಭುತ್ವದ ಇತರ (ಉದಾಹರಣೆಗೆ ಆರೋಗ್ಯ, ವ್ಯವಸಾಯ, ಲೋಕೋಪಯೋಗಿ, ಸಹಕಾರ, ಸ್ಥಳೀಯ ಸ್ವಯಂ-ಆಡಳಿತ ಸರ್ಕಾರ ಇತ್ಯಾದಿ) ಇಲಾಖೆಗಳ ಸಹಕಾರವನ್ನು ಪಡೆಯುವ ಅಧಿಕಾರವನ್ನು ಹೊಂದಿ ಸಮರ್ಥ, ಆರೋಗ್ಯಕರ, ಮತ್ತು ಸಂತೋಷದಾಯಕವಾಗಿ ಕೆಲಸ ಮಾಡುವ ಶಾಲಾಸಮುದಾಯವನ್ನು ಬೆಳೆಸುವತ್ತ ಶ್ರಮಿಸಬೇಕು ಎನ್ನುವುದನ್ನು ಶಿಫಾರಸ್ಸು ಮಾಡಲು ಬಯಸುತ್ತೇವೆ.

ಮಹಾತ್ಮಾಜೀ,

ನೀವು ಸೂಚಿಸಿದಂತೆ ತಯಾರಿಸಿ ಪ್ರಸ್ತುತಪಡಿಸುತ್ತಿರುವ ಮೂಲ ಶಿಕ್ಷಣದ ಈ ಶ್ರೇಣೀಕೃತ ಪಠ್ಯಕ್ರಮದ ಆಶಯಗಳನ್ನು ಮತ್ತು ಧ್ಯೇಯೋದ್ದೇಶಗಳನ್ನು ಕೆಲವರು ಅಕಸ್ಮಾತ್ ಸರಿಯಾಗಿ ಗ್ರಹಿಸದಿರುವ ಸಂದರ್ಭದಲ್ಲಿ ಉಂಟಾಗಿರುವ ಮತ್ತು ಉಂಟಾಗಬಹುದಾದ ಕೆಲವು ಅಪಾರ್ಥಗಳಿಗೆ ನಾವು ಇಲ್ಲಿ ಸ್ಪಷ್ಟೀಕರಣವನ್ನು ನೀಡಬಯಸುತ್ತೇವೆ.

ಎಲ್ಲಕಿಂತ ಹೆಚ್ಚಾಗಿ, ನಾವು ಹಲವಾರು ಮಿತಿಗಳ ನಡುವೆಯೇ ಈ ಜವಾಬ್ದಾರಿಯನ್ನು ನಿರ್ವಹಿಸಿದ್ದೇವೆ ಎಂಬುದನ್ನು ಗಮನಿಸಬೇಕು. ನಮ್ಮ ವರದಿಯಲ್ಲಿ ಸೂಚಿಸಿರುವಂತೆ ಶೈಕ್ಷಣಿಕ ಅಭ್ಯಾಸವನ್ನು ಮರುರಚಿಸುವ ಗುರಿಯನ್ನು ಹೊಂದಿರುವ ಮತ್ತು ಬಹು ದೂರದ ಪರಿಣಾಮ ಬೀರುವ ಈ ರೀತಿಯ ಪಠ್ಯಕ್ರಮವು ಸಾಕಷ್ಟು ಪ್ರಯೋಗಾತ್ಮಕ ಕೆಲಸ ಮಾಡಿರುವ ಹಿನ್ನೆಲೆಯನ್ನು ಬೇಡುತ್ತದೆ. ಏಕೆಂದರೆ ಅಂತಹ ಪ್ರಾಯೋಗಿಕ ಅನುಭವವನ್ನು ಹೊಂದಿದ ನಂತರವೇ ಸಾಧ್ಯವಿರುವ ಎಲ್ಲ ಸಹಸಂಬಂಧವನ್ನು ಸಮರ್ಥವಾಗಿ ರೂಪಿಸಲು ಸಾಧ್ಯ. ಈ ಪಠ್ಯಕ್ರಮವನ್ನು ತಯಾರಿಸುವಲ್ಲಿ ಹಲವಾರು ಮಿತ್ರರ ಸಲಹೆಗಳ ಜೊತೆಗೆ ಶಿಕ್ಷಕರಾಗಿ ನಮ್ಮ ಅತ್ಯುತ್ತಮ ಸಾಮೂಹಿಕ ಅನುಭವದ ಸಾರವನ್ನು ಎರಕ ಹೊಯ್ದಿದ್ದೇವೆ. ಆದರೆ ನಮ್ಮ ವರದಿಯಲ್ಲಿ ಪ್ರಸ್ತಾಪಿಸಿರುವ ಈ ಸಮನ್ವಯಿಸಿದ ಬೋಧನೆಯ ತತ್ವವನ್ನು ವಾಸ್ತವದಲ್ಲಿ ಸಾಧಿಸಿ ಅದನ್ನು ಪಠ್ಯಕ್ರಮವನ್ನಾಗಿ ರೂಪಾಂತರಗೊಳಿಸುವಲ್ಲಿ ಇದು ಮೊದಲ ಹೆಜ್ಜೆಯನ್ನಾಗಿ ಪರಿಗಣಿಸಬೇಕಾಗಿದೆ ಎನ್ನುವುದನ್ನು ಗಮನಕ್ಕೆ ತರುತ್ತಿದ್ದೇವೆ. ನಮ್ಮ ಮೂಲ ಶಿಕ್ಷಣದ ಹೊಸ ಶಾಲೆಗಳಲ್ಲಿ ಹಾಗೂ ಶಿಕ್ಷಕ ತರಬೇತಿ ಶಾಲೆ ಮತ್ತು ಕಾಲೇಜುಗಳಲ್ಲಿನ ಬೋಧಕರು ಈ ಯೋಜನೆಯನ್ನು ವೈಜ್ಞಾನಿಕವಾಗಿ ರೂಪಿಸಿ ಅವರ ಅನಿಸಿಕೆ ಮತ್ತು ಅನುಭವಗಳನ್ನು ದಾಖಲೆ ಮಾಡುತ್ತಾ ಹೋದಂತೆಲ್ಲಾ, ಈ ಪಠ್ಯಕ್ರಮ ಪರಿಷ್ಕಾರಗೊಳ್ಳುವ ಸಾಧ್ಯತೆ ಇದೆ. ಈ ಶಿಕ್ಷಣ ಯೋಜನೆಯ ಪರಿಣಾಮಕಾರಿತ್ವ ಮತ್ತು ಯಶಸ್ಸು ಅಡಗಿರುವುದೇ ಶಿಕ್ಷಕರಲ್ಲಿ ಅಗತ್ಯವಾಗಿ ಇರಬೇಕಾದ ಅಂತಹ ಪ್ರಯೋಗಾತ್ಮಕ ದೃಷ್ಟಿಕೋನದಲ್ಲಿ.

ನಾವು ಇಲ್ಲಿ ನೂಲುವುದು ಮತ್ತು ನೇಯುವದನ್ನು ಉದಾಹರಣೆಯನ್ನಾಗಿ ತೆಗೆದುಕೊಂಡು, ಅದರೊಂದಿಗೆ ಭಾಷೆ, ಗಣಿತ, ಸಾಮಾಜಿಕ ಅಧ್ಯಯನ, ಸಾಮಾನ್ಯ ವಿಜ್ಞಾನ, ಚಿತ್ರಕಲೆಗಳ ಮುಖ್ಯ ವಿಷಯವಸ್ತುವನ್ನು ಪ್ರತಿಯೊಂದು ವಿಷಯಕ್ಕೂ ಲಭ್ಯವಿರುವ ಸಮಯದಲ್ಲಿ ಕಲಿಸಲು ಮತ್ತು ತಕ್ಕ ಮಟ್ಟಿಗೆ ಕರಕೌಶಲ್ಯದೊಂದಿಗೆ ,ಮನ್ವಯಿಸಲು ಸಾಧ್ಯವೆಂದು ತೋರಿಸಲು ಮೂಲ ಶಾಲೆಯ ಏಳು ತರಗತಿಗಳಿಗೆ ವಿವಿಧ ವಿಷಯಗಳನ್ನು ಮತ್ತು ಕರಕೌಶಲ್ಯಗಳನ್ನು ಯಾವ ಹಂತದಲ್ಲಿ ಪರಿಚಯಿಸಬಹುದು (grade placement) (ಗ್ರೇಡ್ ಪ್ಲೇಸ್ಮೆಂಟ್) ಎನ್ನುವುದರ ಬಗ್ಗೆ ವಿವರಗಳನ್ನು ನೀಡಿದ್ದೇವೆ. ಇದು ನಾವು ಆರಿಸಿರುವ ವಿಷಯಗಳು ಕೆಲವು ವಿಮರ್ಶಕರಿಗೆ ಅನಿಸಿದಂತೆ ಕಲಿಕೆಗೆ ಭಾರವೇನಲ್ಲ ಎಂದು ತೋರಿಸುವುದು

ಒಂದು ಉದ್ದೇಶವಾದರೆ, ಇನ್ನೊಂದು ಸಾಂಸ್ಕೃತಿಕ ಪಠ್ಯಕ್ರಮದ ಯಾವುದೇ ಗಮನಾರ್ಹವಾದ ಘಟಕಗಳನ್ನು ಬಿಟ್ಟುಬಿಡಲಾಗಿಲ್ಲ ಎನ್ನುವುದನ್ನು ಸ್ಪಷ್ಟಪಡಿಸುವುದು.

ನಮ್ಮ ವರದಿಯಲ್ಲಿ ವ್ಯವಸಾಯ ಮತ್ತು ಮರಗೆಲಸ - ಇವೆರಡು ಮೂಲ ಕರಕೌಶಲ್ಯಕ್ಕೆ ಸಂಬಂಪಟ್ಟಂತೆ ಸಹ ವಿವಿಧ ವಿಷಯಗಳನ್ನು ಮತ್ತು ಕರಕೌಶಲ್ಯಗಳನ್ನು ಯಾವ ಹಂತದಲ್ಲಿ ಪರಿಚಯಿಸಬಹುದು ಎನ್ನುವುದರ ಬಗ್ಗೆ ವಿವರಗಳನ್ನು ಕೊಟ್ಟಿದ್ದೇವೆ. ಈ ಕರಕೌಶಲ್ಯಗಳಿಗೆ ಸಂಬಂಧಪಟ್ಟಂತೆ ನಮ್ಮಲ್ಲಿ ಯಾರಿಗೂ ಅಗತ್ಯ ಜ್ಞಾನ ಮತ್ತು ಅನುಭವವಿಲ್ಲದ್ದರಿಂದ ಸಮಿತಿಯ ಹೊರಗಿದ್ದ ಕೆಲವು ತಜ್ಞರು ಅದನ್ನು ನಮಗೋಸ್ಕರ ತಯಾರಿಸಿ ಕೊಟ್ಟಿದ್ದಾರೆ. ಈ ಪಠ್ಯಕ್ರಮಗಳ ವಿವರಗಳನ್ನು ಬದಿಗಿಟ್ಟು, ಸಾಮಾನ್ಯ ಪಠ್ಯಕ್ರಮದ ವಿಷಯಗಳನ್ನು ಈ ಎರಡು ಮೂಲ ಕರಕೌಶಲ್ಯದೊಂದಿಗೆ ಸಹಸಂಬಂಧಿಸಲು ಸಾಧ್ಯ ಅಥವಾ ಅವುಗಳ ಮೂಲಕ ತಲುಪಿಸಬಹುದು ಎನ್ನುವುದರ ಬಗ್ಗೆ ನಮಗೆ ವಿಶ್ವಾಸವಿದೆ.

ಇಲ್ಲಿರುವ ವಿವಿಧ ವಿಷಯಗಳ ನಡುವೆ ಸಹಜವಾದ ಮತ್ತು ಪರಿಣಾಮಕಾರಿಯಾದ ಸಮನ್ವಯತೆಯನ್ನು ಸಾಧಿಸಲು ಮತ್ತು ಮಗುವನ್ನು ಸಮರ್ಥವಾಗಿ ಮತ್ತು ಕ್ರಿಯಾಶೀಲವಾಗಿ ತನ್ನ ವಾತಾವರಣಕ್ಕೆ ಒಗ್ಗಿಸಲು ನಾವು ಮೂರು ಮೂಲತಃ ಪರಸ್ಪರ ಸಂಬಂಧ ಹೊಂದಿರುವ ವಿಷಯಗಳನ್ನು ಪಠ್ಯಕ್ರಮದ ಕೇಂದ್ರಬಿಂದುಗಳಾಗಿ ಆಯ್ದುಕೊಂಡಿದ್ದೇವೆ. ಅವು ಮಗುವಿನ ಭೌತಿಕ ವಾತಾವರಣ, ಸಾಮಾಜಿಕ ವಾತಾವರಣ, ಮತ್ತು ಕರಕೌಶಲ್ಯ. ಮೊದಲ ಎರಡರ ಸಂಪನ್ಮೂಲಗಳು ಮೂರನೆಯದಕ್ಕೆ ಪೂರಕವಾಗುವುದರಿಂದ ಅವುಗಳ ನಡುವೆ ಸಹಜವಾದ ಸಂಬಂಧವಿರುತ್ತದೆ. ಗ್ರೇಡ್ ಪ್ಲೇಸ್ಮೆಂಟ್ (grade placement) ಅಲ್ಲದೆ, ಆರಿಸಿರುವ ವಿಷಯಗಳು ಈ ಮೂರು ಕೇಂದ್ರಬಿಂದುಗಳೊಡನೆ ಹೇಗೆ ಸಮನ್ವಯಿಸಲಾಗಿದೆ ಎಂದು ತೋರಿಸುವ ದೃಷ್ಟಿಕೋನದಿಂದ ಪಠ್ಯಕ್ರಮದ ವಿವಿಧ ವಿಷಯಗಳು ನೂಲುವ ಮತ್ತು ನೇಯುವ ಕರಕೌಶಲ್ಯಗಳೊಂದಿಗೆ ಹೇಗೆ ಸಹಸಂಬಂಧಿಸಲು ಸಾಧ್ಯ ಎನ್ನುವುದರ ಬಗ್ಗೆ ಪ್ರತ್ಯೇಕ ಸೂಚನೆಯನ್ನೂ ನೀಡಿದ್ದೇವೆ. ಇದು ಪ್ರಾಸಂಗಿಕವಾಗಿ ಯೋಜನೆಯು ಮಗು-ಕೇಂದ್ರಿತವಾಗಿಲ್ಲ ಎಂಬ ಟೀಕೆಗೂ ಸಹ ಉತ್ತರ ನೀಡಬಲ್ಲದು. ನಾವು ನಮ್ಮ ವರದಿಯಲ್ಲಿ ಹೆಚ್ಚು ಪ್ರಾಮುಖ್ಯತೆ ನೀಡಿರುವ ವಿಷಯವನ್ನು ಸರಿಯಾದ ಅರ್ಥದಲ್ಲಿ ಗ್ರಹಿಸಿಲ್ಲದಿರುವ ನೆಲೆಯಿಂದ ಅಂತಹ ಟೀಕೆಯು ಬಂದಿರುತ್ತದೆ. ಇಡೀ ಪಠ್ಯಕ್ರಮ ಹೇಗೆ ಸ್ಪಷ್ಟವಾಗಿ ಮಗು-ಕೇಂದ್ರಿತವಾಗಿದೆ ಎನ್ನುವುದರ ಸಚಿತ್ರ ವಿವರಣೆಯನ್ನು ನಮ್ಮ ಸಹೋದ್ಯೋಗಿಗಳಲ್ಲಿ ಒಬ್ಬರು ತಯಾರಿಸಿದ ವಿಸ್ತೃತ ನಕಾಶೆಯೊಂದನ್ನು ಅನುಬಂಧವಾಗಿ ಸಹ ನೀಡಿದ್ದೇವೆ. 'ಮಾಡಿ-ಕಲಿ' ವಿಧಾನ ಮತ್ತು ಮಗುವಿನ ಭೌತಿಕ ಹಾಗೂ ಸಾಮಾಜಿಕ ವಾತಾವರಣದ ಬಗ್ಗೆ ಮಾಡಿರುವ ಅಧ್ಯಾಯನದ ಮೇಲೆ ಆಧಾರಿತವಾಗಿರುವ ಈ ಯೋಜನೆಯು

ಪ್ರಸಕ್ತ ಪುಸ್ತಕ-ಕೇಂದ್ರಿತ ಪಠ್ಯಕ್ರಮಕ್ಕೆ ಹೋಲಿಸಿದರೆ ಅದು ಹೇಗೆ ಮಗು-ಕೇಂದ್ರಿತವಲ್ಲ ಎನ್ನುವುದು ನಮಗೆ ಅರ್ಥವಾಗದ ವಿಷಯ!

ನಾವು "ಪಠ್ಯಕ್ರಮದ ಚಟುವಟಿಕೆ-ಆಧಾರಿತ" ಕರಡೊಂದನ್ನು ರೂಪಿಸಲು ಹೆಣಗಿದ್ದೇವೆ ಎಂಬ ಅಂಶವನ್ನು ಎಲ್ಲಾ ಬೋಧಕರು ಮತ್ತು ಶೈಕ್ಷಣಿಕ ಕಾರ್ಯಕರ್ತರು ಅರ್ಥ ಮಾಡಿಕೊಳ್ಳುವುದು ತುಂಬ ಮುಖ್ಯ. ಅಂದರೆ ನಮ್ಮ ಶಾಲೆಗಳು ಶ್ರಮ, ಪ್ರಯೋಗ ಮತ್ತು ಆವಿಷ್ಕಾರಗಳ ಕೇಂದ್ರಗಳಾಗಬೇಕೇ ಹೊರತು ಯಾರಿಂದಲೋ ಪಡೆದ ಮಾಹಿತಿಯನ್ನು ಕುರುಡಾಗಿ ಬಾಯಿಪಾಠ ಮಾಡುವ ಸ್ಥಳಗಳಾಗಬಾರದು. ಆದ್ದರಿಂದಲೇ ಈ ಪಠ್ಯಕ್ರಮಕ್ಕೆ ಸಂಬಂಧಪಟ್ಟಂತೆ ಬೋಧನೆ ಎನ್ನುವುದು ಒಂದು ಕರಕೌಶಲ್ಯ ಅಥವಾ ವಾಸ್ತವ ಬದುಕಿನ ಭೌತಿಕ ಮತ್ತು ಸಾಮಾಜಿಕ ಸನ್ನಿವೇಶಗಳ ಜೊತೆ ಆತ್ಮೀಯವಾಗಿ ಹೆಣೆದುಕೊಂಡಿರಬೇಕು ಎನ್ನುವುದನ್ನು ಪ್ರಸ್ತಾಪಿಸುವುದರ ಮೂಲಕ ನಾವು ಈ ತತ್ವವನ್ನು ಮತ್ತೆ ಮತ್ತೆ ಸ್ಪಷ್ಟಪಡಿಸಿದ್ದೇವೆ. ಆಗ ಮಾತ್ರ ಮಗುವು ಆ ವಾತಾವರಣದಲ್ಲಿ ಕಲಿತಿದ್ದೆಲ್ಲವನ್ನೂ ತನ್ನ ಬೆಳಯುತ್ತಿರುವ ಪ್ರಕ್ರಿಯೆಯಲ್ಲಿ ಮೈಗೂಡಿಸಿಕೊಳ್ಳಲು ಸಾಧ್ಯ.

ಈ ವಿಷಯಕ್ಕೆ ಸಂಬಂಧಿಸಿದಂತೆ ಗಮನಿಸಬೇಕಾದ ಮತ್ತೊಂದು ಅಂಶವೇನೆಂದರೆ, ನಾವು ಪಠ್ಯಕ್ರಮವನ್ನು ಸಿದ್ಧಪಡಿಸುವಾಗ ವಿಷಯವಸ್ತುವನ್ನು ಅನುಭವದ ಗಮನಾರ್ಹ ಮತ್ತು ಸಮಗ್ರ ಘಟಕಗಳಾಗಿ ಸಂಘಟಿಸಲು ಪ್ರಯತ್ನಿಸಿದ್ದೇವೆ. ಮಗುವು ಅದನ್ನು ಸಮರ್ಥವಾಗಿ ಗ್ರಹಿಸಿದ್ದಲ್ಲಿ ಅದು ಮಗುವಿನ ಸುತ್ತಮುತ್ತಲಿನ ಪರಿಸ್ಥಿತಿ ಮತ್ತು ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವುದರಿಂದ ಮಗುವಿಗೆ ತನ್ನ ಸುತ್ತಮುತ್ತಲಿನ ಬದುಕನ್ನು ಅರ್ಥಮಾಡಿಕೊಂಡು ಕ್ರಿಯಾಶೀಲವಾಗಿ ಮತ್ತು ಬುದ್ಧಿವಂತಿಕೆಯಿಂದ ಸ್ಪಂದಿಸಲು ಸಾಧ್ಯವಾಗಿಸುತ್ತದೆ. ನಾವು ಆಯ್ದ ಪಠ್ಯಕ್ರಮದ ಘಟಕಗಳು ಬೇಕಾದಷ್ಟು ಸುಧಾರಣೆಗಳಿಗೆ ತೆರೆದುಕೊಳ್ಳಬಲ್ಲವು ಎಂಬುದರ ಬಗ್ಗೆ ನಮಗೆ ಅರಿವಿದೆ. ಆದರೆ ಪರಸ್ಪರ ಸಂಬಂಧವೇ ಇಲ್ಲದ ಹಾಗೂ ಮಕ್ಕಳ ನೇರವಾದ ಮತ್ತು ಸಾಮಾಜಿಕವಾದ ಬದುಕಿಗೂ ತಾಳೆಯಾಗದ ಮತ್ತು ಬಿಡಿ ಭಾಗಗಳನ್ನು ಸುಮ್ಮನೇ ಗುಡ್ಡೆ ಹಾಕುವ ಪ್ರಸಕ್ತ ಪಠ್ಯಕ್ರಮದ ಬದಲು ಅದಕ್ಕೆ ಇದೇ ಅತ್ಯಂತ ಸೂಕ್ತವಾದ ದೃಷ್ಟಿಕೋನ ಎಂಬುದರ ಬಗ್ಗೆಯೂ ನಮಗೆ ವಿಶ್ವಾಸವಿದೆ. ನಮ್ಮ ಸಾಮಾಜಿಕ ಅಧ್ಯಯನ ಮತ್ತು ಸಾಮಾನ್ಯವಿಜ್ಞಾನದ ಪಠ್ಯಕ್ರಮ ಈ ಅಂಶಕ್ಕೆ ಪುರಾವೆಯನ್ನು ಒದಗಿಸುತ್ತದೆ. ಉದಾಹರಣೆಗೆ, ಸಾಮಾಜಿಕ ಅಧ್ಯಯನ ಮತ್ತು ಸಾಮಾನ್ಯವಿಜ್ಞಾನ ನೀಡುವ ಅರಿವು ಚಿತ್ರಕಲೆಗೆ ತಳುಕು ಹಾಕಿಕೊಂಡಾಗ, ಇತಿಹಾಸ ಮತ್ತು ಭೌಗೋಳಿಕ ಜ್ಞಾನ ಮಗು ತಾನು ಕಲಿಯುತ್ತಿರುವ ಕರಕೌಶಲ್ಯದ ಅರಿವನ್ನು ಶ್ರೀಮಂತಗೊಳಿಸಿದಾಗ, ಹಾಗೂ ತೋಟಗಾರಿಕೆ ಮತ್ತು ವ್ಯವಸಾಯ ಶಿಕ್ಷಣದ ಅವಿಭಾಜ್ಯ ಭಾಗವಾದಾಗ ಶಾಲೆ ಎನ್ನುವುದು ಅನುಭವದ ಮತ್ತು ಸಮೃದ್ಧ ಬದುಕಿನ ಸಕ್ರಿಯ ಕೇಂದ್ರವಾಗಬೇಕು.

ಆದರೆ ಈ ಪಠ್ಯಕ್ರಮವನ್ನು ಸಮರ್ಥವಾಗಿ ಕಾರ್ಯಗತಗೊಳಿಸುವುದು ಒಂದು ಅಪಾರ ಮಹತ್ವದ ಸಮಸ್ಯೆಯೇ ಸರಿ. ಇದು ಶಿಕ್ಷಕರಿಂದ ಚುರುಕುಬುದ್ಧಿ ಮತ್ತು ಸ್ಪಂದಿಸುವಿಕೆಯನ್ನು ಬೇಡುತ್ತದೆ. ಏಕೆಂದರೆ ಅಳವಡಿಸಿಕೊಂಡಿರುವ ಬೋಧನಾ ವಿಧಾನ ಮತ್ತು ಶಿಸ್ತಿನಲ್ಲಿ ಚಟುವಟಿಕೆಯ ಜೀವಂತಿಕೆ ಇರದಿದ್ದಲ್ಲಿ ಎಂಥಹಾ ಅದ್ಭುತ ಪಠ್ಯಕ್ರಮವೂ ಅರ್ಥಹೀನವಾಗುವ ಸಾಧ್ಯತೆಗಳಿವೆ. ಈ ಪಠ್ಯಕ್ರಮದ ಎಲ್ಲಾ ಸಾಧ್ಯತೆಗಳನ್ನು ದುಡಿಸಿಕೊಳ್ಳಬೇಕೆಂದರೆ ಕೆಲವು ವಿಷಯಗಳ ಬೋಧನಾವಿಧಾನ ಹೇಗಿರಬೇಕು ಎಂಬ ವಿವರಣೆಯನ್ನು ಒದಗಿಸುವುದು ಅಗತ್ಯವಾಗುತ್ತದೆ. ಉದಾಹರಣೆಗೆ ಸಮಾಜವಿಜ್ಞಾನ ಮತ್ತು ಸಾಮಾನ್ಯವಿಜ್ಞಾನದಂತಹ ವಿಷಯಗಳನ್ನು ಕೇವಲ ಘಟನೆಗಳ ಪಟ್ಟಿಯನ್ನಾಗಿಸಿಬಿಟ್ಟು ಮಕ್ಕಳಿಗೆ ಬಾಯಿಪಾಠ ಮಾಡಲು ಹೇಳಿದರೆ ಅವರು ವಿವಿಧ ವಿಷಯಗಳ ಸಹಸಂಬಂಧದ ನಿಜ ಸ್ವರೂಪವನ್ನು ಗ್ರಹಿಸಲು ಸಂಪೂರ್ಣವಾಗಿ ವಿಫಲರಾಗಿ ಈ ಪಠ್ಯಕ್ರಮದ ಮೂಲ ಉದ್ದೇಶವೇ ಹಾಳಾಗಿ ಹೋದೀತು. ಬದಲಿಗೆ ಆ ವಿಷಯಗಳ ಅರಿವನ್ನು ಮಗುವಿನ ದಿನನಿತ್ಯದ ಕಲಿಕೆಯ ಸನ್ನಿವೇಶಗಳ ಮೂಲಕ ಮತ್ತು 'ಮಾಡಿ-ಕಲಿ' ವಿಧಾನದ ಮೂಲಕವೇ ನೀಡಬೇಕು.

ಮಾತೃಭಾಷೆಯ ಪಠ್ಯಕ್ರಮದಲ್ಲಿ ನಾವು ಭಾಷೆ ಮತ್ತು ಸಾಹಿತ್ಯ ಎರಡೂ ಸೇರಿದಂತೆ ಅವುಗಳ ಪ್ರಯೋಜನಾತ್ಮಕ ಮತ್ತು ಸೃಜನಶೀಲ ಮೌಲ್ಯಗಳಿಗೆ ಒತ್ತು ನೀಡಿದ್ದೇವೆ. ಬೋಧಕರು ಓದುವ ಮತ್ತು ಮಾತಾಡುವ ವಿಷಯಗಳನ್ನು ಮಕ್ಕಳ ಬೆಳೆಯುತ್ತಿರುವ ಬದುಕು ಮತ್ತು ಆಸಕ್ತಿಗಳನ್ನು ಆಧರಿಸಿ ಯೋಜಿಸಿಕೊಳ್ಳಬೇಕು. ಈ ಪ್ರಕ್ರಿಯೆಯ ಉದ್ದೇಶಗಳು ಇಂತಿರಬೇಕು:

a. ಮಗು ತನ್ನ ಸುತ್ತಲಿನ ನೈಸರ್ಗಿಕ ಅದ್ಭುತಗಳಿಗೆ ತೆರೆದುಕೊಳ್ಳಬೇಕು.
b. ತನ್ನ ಮನೆ, ಹಳ್ಳಿ ಮತ್ತು ಶಾಲೆಯ ಬದುಕಿನ ಹಾಗೂ ತಾನು ಶಾಲೆಯಲ್ಲಿ ಕಲಿಯುತ್ತಿರುವ ಕರಕೌಶಲ್ಯಗಳಲ್ಲಿನ ವಿವಿಧ ಪ್ರಕ್ರಿಯೆಗಳನ್ನು ಗಮನಿಸಿ ತನ್ನ ಮಾತುಗಳಲ್ಲಿ ವಿವರಿಸಬೇಕು.
c. ಸಾಮಾಜಿಕ ಬದುಕಿನ ಒಂದು ಸಹಜ ಚಟುವಟಿಕೆಯಾಗಿ ಸರಳವಾದ ವೈಯಕ್ತಿಕ ಮತ್ತು ವ್ಯಾವಹಾರಿಕ ಪತ್ರಗಳನ್ನು ಬರೆಯಲು ಕಲಿಯಬೇಕು.
d. ಕರಕೌಶಲ್ಯದ ಕಲಿಕೆಯಲ್ಲಿ ಸಾಧಿಸುತ್ತಿರುವ ಪ್ರಗತಿಯನ್ನು ದಿನಚರಿಯಲ್ಲಿ ಬರೆದಿಡಬೇಕು.
e. ಶಾಲಾಪತ್ರಿಕೆಯನ್ನು ಸಂಪಾದಿಸುವ ಮತ್ತು ದೈನಿಕ ಸುದ್ದಿಪತ್ರಿಕೆಯ ತಯಾರಿಕೆಯಲ್ಲಿ ಸಹಾಯ ಮಾಡಬೇಕು.
f. ಸಾಮಾನ್ಯ ಆಸಕ್ತಿಯ ಯಾವುದಾದರೂ ವಿಷಯದ ಮೇಲೆ ಕೆಲವು ನಿಮಿಷಗಳ ಮಟ್ಟಿಗಾದರೂ ಸ್ಪಷ್ಟ ಹಾಗೂ ಸುಸಂಬದ್ಧವಾಗಿ ಮಾತನಾಡಬೇಕು.
g. ಒಳ್ಳೆಯ ಸಾಹಿತ್ಯವನ್ನು ಆಸ್ವಾದಿಸಬೇಕು.

ಇದು ಸಾಹಿತ್ಯ ವಾಚಕಗಳಲ್ಲಿ ವಿಷಯಗಳನ್ನು ಆಯ್ದುಕೊಳ್ಳುವ ಒಂದು ತತ್ವವನ್ನು ಸೂಚಿಸುವುದಷ್ಟೇ ಅಲ್ಲ, ಕರಕೌಶಲ್ಯ, ಸಾಮಾಜಿಕ ಅಧ್ಯಯನ ಹಾಗೂ ಹಳ್ಳಿಯ ಬದುಕು ಮತ್ತು ಚಟುವಟಿಕೆಗಳೊಂದಿಗೆ ತಾಯ್ನುಡಿ ಹೇಗೆ ಹೆಣೆದುಕೊಂಡಿರುತ್ತದೆ ಎನ್ನುವುದನ್ನು ಸಹ ನಿರೂಪಿಸುತ್ತವೆ. ಇದರ ಬೋಧನಾಕ್ರಮ ಹೇಗಿರಬೇಕೆಂದರೆ ಮಗುವು ತನ್ನ ತಾಯ್ನುಡಿಯಲ್ಲಿ ಪರಿಣಿತಿ ಹೊಂದಿ ಅದು ಬರೀ ಕಲಿಕೆಯ ಸಾಧನವಾಗಿರದೆ ನಿಜ ಜೀವನದ ಸನ್ನಿವೇಶಗಳಲ್ಲಿ ಬಳಸಲೂ ಸಹ ಒದಗಿ ಬರುವಂತೆ ಇರಬೇಕು.

ಹಾಗೆಯೇ, ಸಾಮಾಜಿಕ ಅಧ್ಯಯನದ ಕಲಿಕೆಯೂ ಸಹ ಮಗುವಿಗೆ ಸಾಮಾಜಿಕ ವಾತಾವರಣದ ಲಕ್ಷಣಗಳಾದ ದೇಶ (ಅದಕ್ಕಾಗಿಯೇ ಭೂಗೋಳ) ಮತ್ತು ಕಾಲ (ಆದ್ದರಿಂದಲೇ ಚರಿತ್ರೆ) ಗಳ ಅರಿವನ್ನು ನೀಡುವ ಪ್ರಯತ್ನವೂ ಹೌದು. ವರ್ತಮಾನದ ಸಮಸ್ಯೆಗಳ ಅರಿವನ್ನು ಕೆಲಮಟ್ಟಿಗೆ ನೀಡಲು ಹಾಗೂ ಸೂಕ್ತವಾದ ಸಾಮಾಜಿಕ ಮತ್ತು ಬೌದ್ಧಿಕ ಧೋರಣೆಗಳನ್ನು ಬೆಳೆಸಲೆಂದೇ ಪೌರನೀತಿಯಂತಹ ವಿಷಯವನ್ನು ಪಠ್ಯಕ್ರಮದ ಅವಿಭಾಜ್ಯ ಅಂಗವಾಗಿ ಸೇರಿಸಲಾಗಿದೆ. ಅದು ಮಗುವಿನ ಸುತ್ತಮುತ್ತಲ ವಾತಾವರಣ ಮತ್ತು ಅದರ ಮುಖ್ಯ ಲಕ್ಷಣಗಳ ಬುದ್ಧಿವಂತ ಅಧ್ಯಯನದ ಜೊತೆಗೆ ಶಾಲೆಯಲ್ಲಿ ಸ್ವಯಂನಿರ್ವಹಣೆಯಂತಹ ವ್ಯವಸ್ಥೆಯನ್ನು ಬೆಳಸುವುದನ್ನು ಹಾಗೂ ಅವುಗಳನ್ನು ಜವಾಬ್ದಾರಿ ಮತ್ತು ಕರ್ತವ್ಯಗಳನ್ನು ಹಂಚಿಕೊಂಡಿರುವ ಮತ್ತು ಪರಸ್ಪರ ಬದ್ಧತೆಯನ್ನು ಒಳಗೊಂಡಿರುವ ನಿಜವಾದ ಸಹಕಾರಿ ಸಮುದಾಯವನ್ನಾಗಿ ಸಂಘಟಿಸುವುದನ್ನು ಬೇಡುತ್ತದೆ.

ಈ ಎಲ್ಲ ವಿಷಯಗಳ ಬೋಧನೆಯನ್ನು ಜಾಗರೂಕವಾಗಿ ಸಮನ್ವಯಿಸುವುದಲ್ಲದೆ ಅವು ವಾಸ್ತವ ಬದುಕಿನಿಂದಲೇ ಹೊಮ್ಮಿರುವಂತದ್ದಾಗಿರಬೇಕು. ಮಗುವಿನ ಮನೆ, ಹಳ್ಳಿ, ಅಲ್ಲಿಯ ವೃತ್ತಿಗಳು, ಮತ್ತು ಕರಕೌಶಲ್ಯಗಳಂತಹ ಸಾಮಾಜಿಕ ಸನ್ನಿವೇಶಗಳೇ ಅದಕ್ಕೆ ನೆಲೆಯಾಗಿರಬೇಕು. ಅಲ್ಲಿಂದ ಪ್ರಾರಂಭವಾಗಿ ನಂತರ ಪ್ರಾಚೀನ ಬದುಕಿನ ಮತ್ತು ಬೇರೆ ನಾಗರಿಕತೆಗಳ ಕಥೆಗಳಿಂದ ಶ್ರೀಮಂತಗೊಳಿಸಬೇಕು ಹಾಗೂ ವಿವಿಧ ಸಾಮಾಜಿಕ ಮತ್ತು ಭೌಗೋಳಿಕ ಸನ್ನಿವೇಶಗಳಲ್ಲಿ ಬದುಕುವ ಮತ್ತು ಕೆಲಸದ ವಿಧಾನಗಳು ಹೇಗೆ ಭಿನ್ನವಾಗಿವೆ ಎನ್ನುವುದನ್ನು ತೋರಿಸುವುದನ್ನೂ ಒಳಗೊಳ್ಳಬೇಕು. ಭೂಗೋಳ ಮತ್ತು ನಿಸರ್ಗದ ಪರಿಚಯವನ್ನು ಕಲಿಕೆಯ ಮೊದಲ ವರ್ಷಗಳಲ್ಲಿ ಮಗುವು ಭಿನ್ನ ಋತುಮಾನಗಳ ಮೇಲೆ ಕೇಂದ್ರೀಕರಿಸುವುದುರ ಮೂಲಕ ಸಹಜ ವಿದ್ಯಮಾನಗಳನ್ನು ನೇರವಾಗಿ ಗ್ರಹಿಸಿ ಕಲಿಯುವಂತೆ ಮಾಡುವುದು ಅತ್ಯಗತ್ಯ. ಬುದ್ಧಿವಂತ ಶಿಕ್ಷಕರು ಅದಕ್ಕೋಸ್ಕರ ವೈಯಕ್ತಿಕ ಅವಲೋಕನ, ತೋಟಗಾರಿಕೆ, ಪ್ರವಾಸಗಳು, ಸಾಕುಪ್ರಾಣಿಗಳ ಬಗ್ಗೆ ನಿಗಾ ವಹಿಸುವುದು, ಮತ್ತು ತಾವಿರುವ ಊರಿನ ಸಮೀಕ್ಷೆ ನಡೆಸುವುದು, ಇತ್ಯಾದಿ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಾರೆ. ಈ ಎಲ್ಲಾ ವರ್ಷಗಳುದ್ದಕ್ಕೂ ಮಗು ಸಕ್ರಿಯವಾಗಿ ಈ ಅರಿವನ್ನು ಬೆಳೆಸಿಕೊಳ್ಳುವಂತೆ ಹಾಗೂ ಅದನ್ನು ತನ್ನ

ಸಾಮಾಜಿಕ ವಾತಾವರಣವನ್ನು ಅರ್ಥ ಮಾಡಿಕೊಳ್ಳಲು ಮತ್ತು ಅದನ್ನು ಉತ್ತಮವಾಗಿ ನಿಯಂತ್ರಿಸಲು ಬಳಸಿಕೊಳ್ಳುವಂತೆ ಮಾಡುವುದು ಅತ್ಯಾವಶ್ಯಕ. ಆದ್ದರಿಂದ ಶಾಲೆಯನ್ನು ಸುತ್ತಮುತ್ತಲ ಸಮುದಾಯದ ಚಟುವಟಿಕೆಗಳೊಂದಿಗೆ ಸಹಸಂಬಂಧಿಸುವ ಅಗತ್ಯವನ್ನು ಈ ವರದಿ ಮತ್ತೆ ಮತ್ತೆ ಎತ್ತಿ ಹಿಡಿದಿದೆ.

ಗಣಿತ ಎಂಬ ವಿಷಯ ಬದುಕಿಗೆ ಅನ್ವಯವಾಗಲು ಕರಕೌಶಲ್ಯದ ವಿವಿಧ ಪ್ರಕ್ರಿಯೆಗಳಿಗೆ ಹೇಗೆ ಅದು ಒದಗಿ ಬರುತ್ತದೆ ಎನ್ನುವುದನ್ನು ನಾವು ಸೂಚಿಸಿದ್ದೇವೆ. ಅಷ್ಟೇ ಅಲ್ಲ, ಸಾಮಾಜಿಕ ಅಧ್ಯಯನ ಮತ್ತು ಸಾಮಾನ್ಯವಿಜ್ಞಾನಗಳಲ್ಲಿ ಕಲಿಯುವ ವಾಸ್ತವಾಂಶಗಳಿಗೆ ಅದನ್ನು ಹೇಗೆ ಸಂಬಂಧಿಸಬಹುದು ಎನ್ನುವುದನ್ನೂ ಸಹ ಸೂಚಿಸಿದ್ದೇವೆ. ಕರಕೌಶಲ್ಯದ ಕೆಲಸದಲ್ಲಿ ಮತ್ತು ತೋಟಗಾರಿಕೆಯಲ್ಲಿ ಹೊಮ್ಮುವ ಸಮಸ್ಯೆಗಳನ್ನು ಬಗೆಹರಿಸಲು ಮತ್ತು ಅವರ ಹಳ್ಳಿಯ, ಪಟ್ಟಣದ ಅಥವಾ ದೇಶದ ಆರ್ಥಿಕ ಮತ್ತು ಸಾಮಾಜಿಕ ಸಂಗತಿಗಳನ್ನು ಅರ್ಥಮಾಡಿಕೊಳ್ಳಲು ಅಂಕಿಅಂಶಗಳನ್ನು ಬಳಸುವುದರ ಮೂಲಕ ಮಕ್ಕಳು ನಾಲ್ಕು ಸರಳವಾದ ಗಣಿತದ ನಿಯಮಗಳನ್ನು ಕಲಿಯುವಂತಾದರೆ, ಅವರು ಪ್ರಾಯೋಗಿಕವಾಗಿ ಅಳತೆ ಮಾಡುವುದನ್ನು ಕಲಿತರೆ ಮತ್ತು ಕ್ಷೇತ್ರಕಾರ್ಯದಲ್ಲಿ ತೊಡಗಿಸಿಕೊಂಡರೆ ಹಾಗೂ ಹಳ್ಳಿಯ ಸಾಲ ಮತ್ತು ಖರ್ಚುವೆಚ್ಚಗಳನ್ನು ಲೆಕ್ಕಾಚಾರ ಮಾಡಲು ಕಲಿತರೆ ಆಗ ಗಣಿತವೆನ್ನುವುದು ಕ್ರಿಯಾಶೀಲ ಪ್ರಕ್ರಿಯೆಯಾಗುವುದಷ್ಟೇ ಅಲ್ಲದೆ, ಮಕ್ಕಳಿಗೆ ತಮ್ಮ ಸಾಮಾಜಿಕ ವಾತಾವರಣವನ್ನು ಅರ್ಥಮಾಡಿಕೊಳ್ಳಲು ಒಂದು ಸಾಧನವಾಗಿಯೂ ಸಹ ಅಗುತ್ತದೆ.

ಈ ಸಮನ್ವಯದ ತತ್ವವನ್ನು ಮತ್ತಷ್ಟು ನಿರೂಪಿಸಲು ದೈಹಿಕ ವ್ಯಾಯಾಮದ ಬಗ್ಗೆ ವಿಶೇಷ ಪ್ರಸ್ತಾಪ ಮಾಡುವುದು ಸೂಕ್ತ. ಅದರ ಸೈದ್ಧಾಂತಿಕ ಅಂಶಗಳಾದ ಶರೀರಶಾಸ್ತ್ರ, ಆಹಾರಶಾಸ್ತ್ರ, ಮತ್ತು ಆರೋಗ್ಯಶಾಸ್ತ್ರಗಳ ಬಗ್ಗೆ ಮಕ್ಕಳು ಸಾಮಾನ್ಯ ವಿಜ್ಞಾನ ಪಠ್ಯಕ್ರಮಗಳ ಮೂಲಕ ಅಗತ್ಯ ಜ್ಞಾನವನ್ನು ಪಡೆದುಕೊಳ್ಳಬಹುದು. ಅದರ ಪ್ರಾಯೋಗಿಕ ತರಬೇತಿಗೆ ಸಂಬಂಧಿಸಿದಂತೆ ಕರಕೌಶಲ್ಯದ ಅಭ್ಯಾಸ, ತೋಟಗಾರಿಕೆ, ಆಟೋಟ, ಮುಂತಾದ ಕ್ರಿಯಾಶೀಲ ಚಟುವಟಿಕೆಗಳನ್ನು ಒಳಗೊಂಡಿರುವ ಶಾಲೆಯ ಸಂಪೂರ್ಣ ಕೆಲಸಗಳನ್ನು ಮಕ್ಕಳ ಆರೋಗ್ಯ ಮತ್ತು ದೈಹಿಕ ಚೈತನ್ಯ ಬೆಳವಣಿಗೆಗೆ ನೆರವಾಗುವ ಹಾಗೆ ಕಲ್ಪಿಸಿದ್ದೇವೆ.

ಸಂಗೀತದ ಮಟ್ಟಿಗೆ ಈ ಮೂಲ ಯೋಜನೆಯಲ್ಲಿ ಎಲ್ಲ ಮಕ್ಕಳಿಗೂ ಅನ್ವಯವಾಗುವಂತಹ ವೈಜ್ಞಾನಿಕ ತರಬೇತಿಯನ್ನು ಕೊಡಲು ಅಸಾಧ್ಯವಾದ್ದರಿಂದ ಸಂಗೀತಕ್ಕೆ ಸಂಬಂಧಪಟ್ಟಂತೆ ನಿಯಮಿತ ಪಠ್ಯಕ್ರಮವೊಂದನ್ನು ನಾವು ರೂಪಿಸಲಿಲ್ಲ. ಆದಾಗ್ಯೂ, ನಮ್ಮ ಶಿಫಾರಸ್ಸಿನ ಪ್ರಕಾರ ಭಾರತೀಯ ಮುಖ್ಯ ರಾಗ ಮತ್ತು ತಾಳಗಳ ಮೂಲ ಪರಿಚಯದೊಂದಿಗೆ ಪ್ರಮಾಣಿತ ರಾಗ ಮತ್ತು ತಾಳಕ್ಕೆ ಹೊಂದಿಸಲಾದ ಗಾನವೃಂದಕ್ಕೆ ಸಂಬಂಧಿಸಿದ ಪಠ್ಯಕ್ರಮವು ಎಲ್ಲಾ ತರಗತಿಗಳಿಗೂ ಇರಬೇಕು.

ಇದನ್ನು ಎಲ್ಲ ಮಕ್ಕಳಿಗೆ ಕಡ್ಡಾಯ ಮಾಡಬೇಕಾಗಿಲ್ಲ. ಸಂಗೀತ ಕಲಿಯುವ ಸಾಮರ್ಥ್ಯವಿಲ್ಲದಿದ್ದರೆ ಅಥವಾ ಕೆಲವು ರಾಗ ಮತ್ತು ತಾಳಗಳನ್ನು ಕಲಿಯಲು ಅಭ್ಯಂತರವಿದ್ದರೆ ಅಂಥ ಮಕ್ಕಳು ಹಾಡುಗಾರಿಕೆಯಿಂದ ಹೊರಗುಳಿಯಬಹುದು. ಏಳರಿಂದ ಹದಿನಾಲ್ಕು ವಯಸ್ಸಿನ ಮಕ್ಕಳು ಹಾಡಲು ಸೂಕ್ತವಾದ ಹಾಡುಗಳನ್ನು ಜಾಗರೂಕತೆಯಿಂದ ಆಯ್ದುಕೊಳ್ಳಬೇಕು. ರಾಷ್ಟ್ರೀಯ ಹಾಡುಗಳು, ಜಾನಪದ, ಭಕ್ತಿಗೀತೆ, ಋತುಮಾನಕ್ಕೆ ತಕ್ಕ ಮತ್ತು ಹಬ್ಬದ ಹಾಡುಗಳ ಜೊತೆಗೆ ವ್ಯಾಯಾಮ, ಕರಕೌಶಲ್ಯ ಅಭ್ಯಾಸಕ್ಕೆ ಸಂಬಂಧಿಸಿದಂತೆ, ಮತ್ತು ಗುಂಪು ಹಾಡುಗಾರಿಕೆಗೆ ಸೂಕ್ತವಾಗಿ ಒದಗಬಲ್ಲ ಸರಳ ಹಾಗೂ ತ್ವರಿತ ಲಯದ ಹಾಡುಗಳನ್ನು ಒಳಗೊಂಡಿರಬೇಕು. ಬೇರೆ ಬೇರೆ ಭಾಷೆಗಳ ಹಾಡುಗಳನ್ನು ಕಾಲದಿಂದ ಕಾಲಕ್ಕೆ ಒದಗಿಸಿದರೆ ಬೋಧಕರು ತಮಗೆ ಬೇಕಾದ ಆಯ್ಕೆಯನ್ನು ಮಾಡಿಕೊಳ್ಳಬಹುದು.

ಪಠ್ಯಕ್ರಮದಲ್ಲಿ ಸೇರ್ಪಡೆಯಾಗಿರುವ ಪ್ರತಿಯೊಂದು ಅಂಶಕ್ಕೂ ಸಂಬಂಧಿಸಿದಂತೆ ಅಂತಹ ಹಲವಾರು ಉದಾಹರಣೆಗಳನ್ನು ಕೊಡಲು ಸಾಧ್ಯ, ಆದರೆ ಇಲ್ಲಿ ಅದು ಅನವಶ್ಯಕ. ಪಠ್ಯಕ್ರಮ ಮತ್ತು ಬೋಧನಾ ವಿಧಾನಗಳ ನಡುವೆ ಅಂತರ್ಗತವಾದ ಸಮಗ್ರತೆ ಇದೆ ಎಂಬ ಅಂಶವನ್ನು ನಿರ್ಲಕ್ಷಿಸಲಾಗುವುದಿಲ್ಲ ಎನ್ನುವುದಕ್ಕೆ ಮೇಲೆ ಹೇಳಿದ ಉದಾಹರಣೆಗಳು ಸಾಕು. ಮೇಲೆ ವಿವರಿಸಿದ ರೀತಿಯಲ್ಲಿ ಈ ಪಠ್ಯಕ್ರಮವನ್ನು ಅರ್ಥಪೂರ್ಣವಾಗಿ ಗ್ರಹಿಸಿ ಕಾರ್ಯರೂಪಕ್ಕೆ ಇಳಿಸಿದರೆ ಬುದ್ಧಿವಂತ, ವ್ಯಾವಹಾರಿಕ ಮತ್ತು ಸಹಕಾರ ಮನೋಭಾವದ ಪ್ರಜೆಗಳನ್ನು ತಯಾರು ಮಾಡುವುದರಲ್ಲಿ ಸಹಾಯ ಮಾಡಬಲ್ಲದು.

ಈ ಪಠ್ಯಕ್ರಮಕ್ಕೆ ಸಂಬಂಧಪಟ್ಟಂತೆ ನಮಗೆ ತಲುಪಿರುವ ಅಥವಾ ಮಾಧ್ಯಮದಲ್ಲಿ ಕಾಣಿಸಿಕೊಂಡಿರುವ ಟೀಕೆ ಮತ್ತು ಆಕ್ಷೇಪಣೆಗಳನ್ನು ನಾವು ಸ್ವಾಗತಿಸಿದ್ದೇವೆ. ನಾವು ಇಲ್ಲಿ ವಿವರಿಸಿರುವ ಪಠ್ಯಕ್ರಮದ ಬಗ್ಗೆ ಬೋಧಕರು ಮತ್ತು ಸಾರ್ವಜನಿಕರು ವಿಚಾರ ಮಾಡಿರುವುದರ ನಿದರ್ಶನ ಅದು. ಆದರೂ ಸಹ ಹಲವಾರು ಅಭ್ಯಂತರಗಳು ಈ ಯೋಜನೆಯ ಆಧಾರವನ್ನು ತಪ್ಪಾಗಿ ಗ್ರಹಿಸಿರುವುದರಿಂದ ಹೊಮ್ಮಿವೆ ಎಂಬ ಅಂಶವನ್ನೂ ಸಹ ಇಲ್ಲಿ ಹೇಳಲೇಬೇಕು. ಆದ್ದರಿಂದ ನಾವಿಲ್ಲಿ ನಿಮ್ಮ ಅನುಮತಿಯೊಂದಿಗೆ ಕೆಲವು ಮುಖ್ಯ ಅಂಶಗಳನ್ನು ಇಲ್ಲಿ ಪ್ರಸ್ತಾಪಿಸುವುದಕ್ಕೆ ಇಚ್ಛಿಸುತ್ತೇವೆ:

1. ಹೆಚ್ಚಿನಂಶ ತಕರಾರಿವುದು ಕರಕೌಶಲ್ಯಕ್ಕೆ ನಿಗದಿಪಡಿಸಿರುವ ಸಮಯದ ಬಗ್ಗೆ. ಅದರಿಂದ ಶೈಕ್ಷಣಿಕ ಕೆಲಸ ಬಡವಾಗುತ್ತದೆ ಎನ್ನುವುದು ಅದರ ವಾದ. ಅಂತಹ ನಿಲುವಿನಲ್ಲಿ ಅಡಕವಾಗಿರುವ ಶೈಕ್ಷಣಿಕ ಮತ್ತು ಪ್ರಾಯೋಗಿಕಗಳ ನಡುವಿನ ವಿಭಜನೆಗೆ ಸಹಮತಿಸದೆ ನಾವು ಹೇಳಬಯಸುವುದೆಂದರೆ ಮೂಲ ಕರಕೌಶಲ್ಯಕ್ಕೆ ನಿಗದಿಪಡಿಸಿರುವ ಸಮಯ ಅದರ ಯಾಂತ್ರಿಕ ಕಲಿಕೆಗೆ ಮಾತ್ರ ಸೀಮಿತವಾಗಿರುವುದಿಲ್ಲ. ಬದಲಾಗಿ ಅದರೊಂದಿಗೆ ಸಹಜ

ಸಂಬಂಧವಿರುವ ಬೋಧನೆ, ಚರ್ಚೆ, ಮತ್ತು ಚಿತ್ರಕಲೆಗಳನ್ನೂ ಒಳಗೊಂಡಿರುತ್ತದೆ. ಅದರ ಹೇಗೆ, ಏನು, ಎತ್ತಗಳ ಬಗೆಗಿನ ಬೋಧನೆ ಮತ್ತು ಕಲಿಕೆಯಲ್ಲಿ ಅದರ ವೈಜ್ಞಾನಿಕ ಮತ್ತು ಬುದ್ಧಿವಂತ ಗ್ರಹಿಕೆಯನ್ನು ರೂಪಿಸುವುದೂ ಸಹ ಇದೇ ಸಮಯದಲ್ಲಿ ನಡೆಯುತ್ತದೆ. ಇದು ನಾವು ಹೇಳಿರುವ ತ್ರಿಕೇಂದ್ರಿತ ¸ಮನ್ವಯದ ಯೋಜನೆಯಲ್ಲಿ ಸ್ಪಷ್ಟವಾಗಿಯೇ ಇದೆ.

ಅದಕ್ಕಿಂತ ಹೆಚ್ಚಾಗಿ ವರದಿಯಲ್ಲಿ ಸ್ಪಷ್ಟಪಡಿಸಿರುವಂತೆ, ಈ ಯೋಜನೆಯ ಉದ್ದೇಶ "ತಮ್ಮ ಕಸುಬನ್ನು ಯಾಂತ್ರಿಕವಾಗಿ ಮಾಡಬಲ್ಲ ಕುಶಲಕರ್ಮಿಗಳನ್ನು ಹುಟ್ಟುಹಾಕುವುದಲ್ಲ. ಬದಲಾಗಿ ಕರಕೌಶಲ್ಯದಲ್ಲಿ ಅಂತರ್ಗತವಾಗಿರುವ ಸಂಪನ್ಮೂಲಗಳನ್ನು ಶೈಕ್ಷಣಿಕ ಉದ್ದೇಶಗಳಿಗೆ ಸಮರ್ಥವಾಗಿ ಬಳಸಿಕೊಳ್ಳುವುದು." ಈ ಯೋಜನೆಯು ಅಳವಡಿಸಿಕೊಳ್ಳುವ 'ಮಾಡಿ-ಕಲಿ' ಅಥವಾ ಚಟುವಟಿಕೆ-ಕೇಂದ್ರಿತ ವಿಧಾನ ಆ ಉದ್ದೇಶವನ್ನು ಸಾಧಿಸುವುದನ್ನು ಖಚಿತಪಡಿಸಬೇಕು.

2. ಕೆಲವರು ಈ ಯೋಜನೆಯಲ್ಲಿ ಮಾಧ್ಯಮಿಕ ಅಥವಾ ಉನ್ನತ ಶಿಕ್ಷಣದ ಬಗ್ಗೆ ಪ್ರಸ್ತಾಪವೇ ಇಲ್ಲ ಎಂದು ಆಕ್ಷೇಪಿಸಿದ್ದಾರೆ. ಮೂಲ ಶಿಕ್ಷಣದ ಮೊದಲ ಏಳು ವರ್ಷಕ್ಕೆ ಸಂಬಂಧಿಸಿದಂತೆ ಯೋಜನೆಯೊಂದನ್ನು ರೂಪಿಸಬೇಕೆಂದು ನಮಗೆ ನೀಡಿದ ಆದೇಶವನ್ನು ಅವರು ಮರೆತಂತಿದೆ. ಮಕ್ಕಳ ನಂತರದ ಶಿಕ್ಷಣದ ಸಾಧ್ಯತೆಗಳನ್ನು ಈ ಯೋಜನೆ ಸೀಮಿತಗೊಳಿಸುತ್ತದೆ ಎಂಬ ಅವರ ಆತಂಕಗಳಿಗೆ ಇದು ಎಲ್ಲ ಮಕ್ಕಳ ಸಾರ್ವತ್ರಿಕ ಮತ್ತು ಕಡ್ಡಾಯ ಮೂಲ ಶಿಕ್ಷಣಕ್ಕೆ ಸಂಬಂಧಿಸಿದ್ದು ಹಾಗೂ ಹೆಚ್ಚಿನ ಮಟ್ಟದ ಶಿಕ್ಷಣಕ್ಕೆ ಅರ್ಹರಾದ ಮಕ್ಕಳಿಗೆ ಇದರ ತದನಂತರದ ಶಿಕ್ಷಣವು ಮುಂದುವರೆಯುವುದೆಂದು; ಮತ್ತು ಆ ಯೋಜನೆಯು ರೂಪಗೊಂಡಾಗ, ಶಿಕ್ಷಣವನ್ನು ಮುಂದುವರೆಸಲು ಬಯಸಿದವರಿಗೆ ಸರಿಯಾದ ಬೌದ್ಧಿಕ ಸಂಪನ್ಮೂಲಗಳನ್ನು ಮತ್ತು ನಿರಂತರತೆಯನ್ನು ಖಚಿತಪಡಿಸಲು ಅದನ್ನು ಮೂಲ ಶಿಕ್ಷಣ ಯೋಜನೆಯೊಂದಿಗೆ ಸಮನ್ವಯ ಮಾಡಬೇಕಾಗಿದೆ ಎಂದು ಹೇಳುವುದರ ಮೂಲಕ ಪ್ರತಿಕ್ರಿಯೆ ನೀಡಲು ಬಯಸುತ್ತೇವೆ.

3. ಮಗುವಿಗೆ ಮೂಲ ಶಿಕ್ಷಣದ ಪ್ರಾರಂಭದ ವಯಸ್ಸನ್ನು ಏಳು ವರ್ಷಗಳು ಎಂದು ನಾವು ನಿಗದಿಪಡಿಸಿರುವುದು ಸಹ ಅದು ತುಂಬ ತಡವಾಯಿತು ಎಂಬ ಕಾರಣಕ್ಕೆ ಟೀಕೆಗೆ ಗುರಿಯಾಗಿದೆ. ವರದಿಯಲ್ಲಿ ನಾವು ಸ್ಪಷ್ಟಪಡಿಸಿರುವಂತೆ ಶಾಲಾ-ಮುಂಚಿನ ಶಿಕ್ಷಣದ ಮಹತ್ವವನ್ನು ನಾವು ಖಂಡಿತವಾಗಿ ಗುರುತಿಸುತ್ತೇವೆ. ಹಾಗಾಗಿಯೇ ಸಾಧ್ಯವಾದರೆ ಸರ್ಕಾರದ ಸಹಾಯದಿಂದ ಅಥವಾ ಸಮುದಾಯವೇ

ಸ್ವ-ಇಚ್ಛೆಯಿಂದ ಸ್ಥಾಪಿಸಬಲ್ಲ ಶಿಶು ಶಿಕ್ಷಣ ಕೇಂದ್ರಗಳ ಸಾಧ್ಯತೆಯನ್ನು ನಾವು ಗಮನದಲ್ಲಿ ಇರಿಸಿಕೊಂಡಿದ್ದೇವೆ. ಆದರೆ ಸಧ್ಯದ ಆರ್ಥಿಕ ಒತ್ತಡಗಳಿಂದಾಗಿ ಮತ್ತು ಇನ್ನಿತರ ಕಾಳಜಿಗಳಿಂದಾಗಿ ಈ ಕಡ್ಡಾಯ ಶಿಕ್ಷಣ ಯೋಜನೆಯಲ್ಲಿ ಅದನ್ನು ಸೇರಿಸಲು ಯಾವ ಸಮರ್ಥನೆಯೂ ಕಾಣುವುದಿಲ್ಲ. ಅದಕ್ಕಿಂತ ಹೆಚ್ಚಾಗಿ ನಾವು ಮಗುವಿನ ಕಡ್ಡಾಯ ಮೂಲ ಶಿಕ್ಷಣದ ವಯಸ್ಸನ್ನು ಏಳರಿಂದ ಹದಿನಾಲ್ಕು ವರ್ಷಗಳು ಎಂದು ಸೂಚಿಸಿರುವುದು ಮಗು ಹದಿನಾಲ್ಕು ವಯಸ್ಸಿನ ತನಕ ಶಾಲೆಯಲ್ಲಿ ಇರುವುದು ಸೂಕ್ತ ಎಂಬ ಬಲವಾದ ಕಾರಣಕ್ಕಾಗಿ. ಅದರ ಉದ್ದೇಶಗಳು ಇಂತಿವೆ:

a. ಮಗುವಿನ ಬೆಳವಣಿಗೆಗೆ ಅಗತ್ಯವಾದ ಅಲ್ಪಸ್ವಲ್ಪ ಸಾಮಾಜಿಕ ಮತ್ತು ನಾಗರಿಕ ಪ್ರಜ್ಞೆಯನ್ನು - ಮನೋವೈಜ್ಞಾನಿಕ ದೃಷ್ಟಿಯಿಂದಲೂ ಸಹ ಏಳು ವಯಸ್ಸಿಗಿಂತ ಮುಂಚೆ ಸೂಕ್ತವಾದ ಕಾಲವಲ್ಲ - ನೀಡವುದನ್ನು ಖಚಿತಪಡಿಸುವುದು.
b. ಮಗು ಮುಂದೆ ಉತ್ತಮ ಪ್ರಜೆಯಾಗುವುದನ್ನು ಖಚಿತಪಡಿಸುವುದು.
c. ಮತ್ತೆ ನಿರಕ್ಷರತೆಗೆ ಜಾರದಷ್ಟು ಮಗುವಿನ ಸಾಕ್ಷರತಾ ಶಿಕ್ಷಣ ಬಲವಾಗಿರುವುದನ್ನು ಮತ್ತು
d. ಮೂಲ ಕರಕೌಶಲ್ಯವನ್ನು ತನ್ನ ವೃತ್ತಿಯನ್ನಾಗಿ ತೆಗೆದುಕೊಂಡು ಅದನ್ನು ಯಶಸ್ವಿಯಾಗಿ ಅಭ್ಯಾಸ ಮಾಡಲು ಸಾಕಷ್ಟು ಕೌಶಲ್ಯ ಗಳಿಸುವುದನ್ನು ಖಚಿತಪಡಿಸುವುದು.

ಹದಿವಯಸ್ಸಿನಲ್ಲಿ ಮಗು ಶಾಲೆಯಲ್ಲಿ ಇರಬೇಕಾದ ಅಗತ್ಯದ ಬಗ್ಗೆ ನಮಗೆ ಎಷ್ಟ್ಟು ಬಲವಾದ ನಂಬಿಕೆ ಇದೆ ಎಂದರೆ ಸಾಧ್ಯವಾದಲ್ಲಿ ಮಗುವನ್ನು ಹದಿನಾರನೆಯ ವಯಸ್ಸಿನ ತನಕವೂ ಕಡ್ಡಾಯ ಶಿಕ್ಷಣದಡಿ ಶಾಲೆಯಲ್ಲಿ ಇರಿಸುವ ಕಾಳಜಿ ನಮ್ಮದು. ಆಗ ಮಾತ್ರ ಮಗು ಸರಿಯಾದ ನೈತಿಕ, ಸಾಮಾಜಿಕ ಮತ್ತು ನಾಗರಿಕ ತರಬೇತಿಯನ್ನು ಪಡೆಯಲು ಸಾಧ್ಯ ಎನ್ನುವುದು ನಮ್ಮ ನಂಬಿಕೆ.

4. ಈ ಯೋಜನೆಯಲ್ಲಿ ನಾವು ಆಟಕ್ಕೆ ಪ್ರತ್ಯೇಕವಾದ ಮತ್ತು ವಿಶೇಷವಾದ ಸ್ಥಾನ ನೀಡಿಲ್ಲ. ಕಾರಣವಿಷ್ಟೇ: ಆಟ ಎನ್ನುವುದು ಒಂದು ಪಠ್ಯೇತರ ಚಟುವಟಿಕೆ. ಅದನ್ನು ಕಡ್ಡಾಯ ಮಾಡಿದ ತಕ್ಷಣವೇ ಮನೋವೈಜ್ಞಾನಿಕ ದೃಷ್ಟಿಯಲ್ಲಿ ಅದು ತನ್ನ ಸಹಜ ಸ್ವಾಭಾವಿಕತೆಯನ್ನು ಕಳೆದುಕೊಂಡುಬಿಡುತ್ತದೆ. ನಮ್ಮ ಪಠ್ಯಕ್ರಮದಲ್ಲಿ ಪ್ರತ್ಯೇಕ ಮತ್ತು ಗುಂಪು ಆಟಗಳಿಗೆ ನಾವು ಸ್ಥಾನವನ್ನು ನೀಡಿದ್ದೇವೆ. ಒಳ್ಳೆಯ ಶಾಲೆಗಳು ಮಕ್ಕಳ ಆಸಕ್ತಿಗಳಿಗೆ ತಕ್ಕಂತೆ ವಿವಿಧ ಆಟಗಳಿಗೆ ಪ್ರೋತ್ಸಾಹ ನೀಡುತ್ತವೆ ಎಂದು ನಾವು ನಂಬಿದ್ದೇವೆ. ಆದಾಗ್ಯೂ, ಇನ್ನೊಂದು ಅಂಶವನ್ನೂ ಸಹ

ನೆನಪಿನಲ್ಲಿಡಬೇಕು: 'ಮಾಡಿ-ಕಲಿ' ಶಾಲೆಗಳಲ್ಲಿ ಆಟ ಅವಿಭಾಜ್ಯ ಅಂಗವಾಗಿರುತ್ತದೇ ಹೊರತು ಶೈಕ್ಷಣಿಕ ಹೊರೆಯಿಂದ ತಪ್ಪಿಸಿಕೊಳ್ಳಲು ಅಲ್ಲ.

5. ನಮ್ಮ ವರದಿಯಲ್ಲಿ ಒಂದು ಅಂಶ ಈಗಾಗಲೇ ಸಾಕಷ್ಟು ಸ್ಪಷ್ಟವಾಗಿಲ್ಲದಿದ್ದರೆ, ಮತ್ತೊಮ್ಮೆ ಇಲ್ಲಿ ಸ್ಪಷ್ಟಪಡಿಸಲು ಇಚ್ಛಿಸುತ್ತೇವೆ: ಶಿಕ್ಷಕರ ಸಂಬಳಕ್ಕೂ ಮತ್ತು ಮಕ್ಕಳು ಮಾಡಿದ ಕರಕುಶಲ ವಸ್ತುಗಳ ಮಾರಾಟಕ್ಕೂ ಯಾವುದೇ ನೇರ ಸಂಬಂಧವಿರುವುದಿಲ್ಲ. ಶಿಕ್ಷಕರು ಸಧ್ಯಕ್ಕೆ ಸರ್ಕಾರದ ಖಜಾನೆಯಿಂದ ನೇರವಾಗಿ ಸಂಬಳವನ್ನು ಪಡೆಯಬೇಕೇ ಹೊರತು ಏರಿಳಿತವಾಗಬಲ್ಲ ಕರಕುಶಲ ವಸ್ತುಗಳ ಮಾರಾಟದ ಮೇಲೆ ಅವಲಂಬಿಸಿರಬಾರದು. ಆ ಮಾರಾಟದಿಂದ ಬರುವ ಆದಾಯವನ್ನು ನೇರವಾಗಿ ಖಜಾನೆಗೆ ಪಾವತಿಸತಕ್ಕದ್ದು. ವಾರ್ಧಾ ಸಮ್ಮೇಳನದಲ್ಲಿ ಜಾರಿಯಾದ ನಡಾವಳಿಗಳ ಪ್ರಕಾರ ಶಾಲೆಯಲ್ಲಿ ತಯಾರಾದ ಕರಕುಶಲ ವಸ್ತುಗಳ ಮಾರಾಟ ಕ್ರಮೇಣ ಶಿಕ್ಷಕರ ಸಂಬಳಗಳನ್ನು ಭರಿಸುವ ನಿರೀಕ್ಷೆಯನ್ನು ಇಟ್ಟುಕೊಳ್ಳಬಹುದೇ ಹೊರತು ಕಟ್ಟಡ, ಸಲಕರಣೆ ಇತ್ಯಾದಿಗಳನ್ನು ಭರಿಸುವ ಶಕ್ತಿ ಸಾರ್ವಜನಿಕ ಮತ್ತು ಖಾಸಗಿ ಮೂಲಗಳಿಂದಲೇ ಬರಬೇಕಾಗುತ್ತದೆ.

6. ಶಾಲೆಯಲ್ಲಿ ತಯಾರಾದ ಕರಕುಶಲ ವಸ್ತುಗಳಿಗೆ ಮಾರಾಟ ಸಂಸ್ಥೆಯೊಂದನ್ನು ಯೋಜಿಸಬೇಕೇ ಎಂಬ ವಿಷಯವನ್ನು ನಾವು ವರದಿಯಲ್ಲಿ ಪ್ರತ್ಯೇಕವಾಗಿ ಪ್ರಸ್ತಾಪಿಸಿಲ್ಲ. ಏಕೆಂದರೆ ಮೂಲ ಶಿಕ್ಷಣ ಯೋಜನೆಯನ್ನು ರೂಪಿಸುವುದು ನಮ್ಮ ಮುಖ್ಯ ಕಾಳಜಿಯಾಗಿತ್ತೇ ಹೊರತು ಅದರ ರಾಜಕೀಯ ಮತ್ತು ಆಡಳಿತಾತ್ಮಕ ಸೂಚ್ಯ ಪರಿಣಾಮಗಳಲ್ಲ. ಅಲ್ಲದೇ, ನೀವೂ ಸಹ ಸಮ್ಮೇಳನದ ಭಾಷಣದಲ್ಲಿ ಆ ಕರಕುಶಲ ವಸ್ತುಗಳನ್ನು ನ್ಯಾಯಬೆಲೆಯಲ್ಲಿ ಕೊಂಡುಕೊಳ್ಳುವುದು ಕೊನೆಗೆ ಸರ್ಕಾರದ ಜವಾಬ್ದಾರಿಯಾಗಿರುತ್ತದೆ ಎಂದು ಸ್ಪಷ್ಟಪಡಿಸಿದ್ದಿರಿ. ನಮ್ಮ ವರದಿಯಲ್ಲಿ ನಿಮ್ಮ ಹೇಳಿಕೆಯನ್ನು ಸಹ ಉಲ್ಲೇಖಿಸಿದ್ದೇವೆ.

7. ಕೆಲವು ವಲಯಗಳಿಂದ ನಮ್ಮ ಯೋಜನೆಯು ಎಲ್ಲಾ ರೀತಿಯ ಕೈಗಾರೀಕರಣಕ್ಕೆ ವಿರುದ್ಧವಾಗಿದೆ ಮತ್ತು ಆಧುನಿಕತೆಯ ಎಲ್ಲಾ ಶಕ್ತಿ ಮತ್ತು ಅಗತ್ಯಗಳಿಗೆ ಸ್ಪಂದಿಸದ ಹಾದಿಯಲ್ಲಿ ನಮ್ಮನ್ನು ಪುರಾತನ ಕಾಲದತ್ತ ಕೊಂಡೊಯ್ಯುತ್ತದೆ ಎಂಬ ಊಹೆಯ ಮೇಲೆ ಹಲವಾರು ಆಕ್ಷೇಪಣೆಗಳು ಇದಿರಾಗಿವೆ. ಗ್ರಾಮೀಣ ಆರ್ಥಿಕತೆ ಮತ್ತು ಕೈಗಾರೀಕರಣದ ಧನಾತ್ಮಕ ಅಂಶಗಳ ಬಗೆಗಿನ ವಿವಾದಕ್ಕೆ ಹೋಗದೇ ಒಂದು ಅಂಶವನ್ನಂತೂ ನಾವಿಲ್ಲಿ ಸ್ಪಷ್ಟಪಡಿಸಲು ಬಯಸುತ್ತೇವೆ: ಈ ಮೂಲ ಶಿಕ್ಷಣಕ್ಕೂ ಮತ್ತು ಕೈಗಾರಿಕಾ ಅಥವಾ ಸಣ್ಣ ಪ್ರಮಾಣದ ಗ್ರಾಮೀಣ ಆರ್ಥಿಕತೆಯ ನಡುವೆ ಯಾವುದೇ ಅವಶ್ಯಕ ತರ್ಕಬದ್ಧ ಸಂಬಂಧವಿಲ್ಲ. ಕರಕೌಶಲ್ಯ ಮತ್ತು ಉತ್ಪಾದನಾಶೀಲ ಕೆಲಸವು

ಮನೋವೈಜ್ಞಾನಿಕವಾಗಿ ಉತ್ತಮವಾದ ಶಿಕ್ಷಣ ವಿಧಾನವಾದ್ದರಿಂದ ನಾವದನ್ನಿಲ್ಲಿ ಶಿಫಾರಸ್ಸು ಮಾಡಿದ್ದೇವೆ. ಕೈ ಮತ್ತು ಕಣ್ಣುಗಳನ್ನು ಬಳಸಲು ಸಮನ್ವಯಿಸಿದ ತರಬೇತಿಯು, ಪ್ರಾಯೋಗಿಕ ಕೌಶಲ್ಯ ಮತ್ತು ಗಮನಶಕ್ತಿ ಹಾಗೂ ದೈಹಿಕಶ್ರಮದಲ್ಲಿನ ತರಬೇತಿಯು ನಂತರದ ಕೈಗಾರಿಕಾ ತರಬೇತಿಗೆ ಪೂರಕವಾಗಿಲ್ಲವೆ? ಅದರ ಬದಲು ವಿದ್ಯಾರ್ಥಿಗಳಲ್ಲಿ ಎಲ್ಲಾ ರೀತಿಯ ಪ್ರಾಯೋಗಿಕ ಮತ್ತು ಕೈಗಾರಿಕಾ ಕೆಲಸಗಳ ಬಗ್ಗೆ ಪೂರ್ವಾಗ್ರಹವನ್ನು ಹುಟ್ಟುಹಾಕುವ ಪ್ರಸಕ್ತ ಪುಸ್ತಕ-ಕೇಂದ್ರಿತ ಶಿಕ್ಷಣವೇ ಹೆಚ್ಚು ಸೂಕ್ತವೆ?

ಈ ಹೊಸ ಯೋಜನೆಯು ಒಳಗೊಳ್ಳುವ ಅಪಾರವಾದ ಆಡಳಿತಾತ್ಮಕ ಜವಾಬ್ದಾರಿಯ ಬಗ್ಗೆ ನಮಗೆ ಅರಿವಿದೆ. ಪ್ರತಿಯೊಂದು ಪ್ರಾಂತ್ಯದ ಶಿಕ್ಷಣ ಇಲಾಖೆ ಅದನ್ನು ಅದರ ಎಲ್ಲಾ ಸೂಕ್ಷ್ಮವಾದ ವಿವರಗಳೊಂದಿಗೆ ಆ ಪ್ರಾಂತ್ಯಕ್ಕೆ ಅನುಗುಣವಾದ ರೀತಿಯಲ್ಲಿ ಕ್ರಮೇಣವಾಗಿ ಕಾರ್ಯಗತಗೊಳಿಸುವ ಜವಾಬ್ದಾರಿಯನ್ನು ಭರಿಸಬೇಕು ಎನ್ನುವುದೂ ನಮ್ಮ ಗಮನದಲ್ಲಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ನಾವು ನೇರ ಜವಾಬ್ದಾರಿ ವಹಿಸಲು ಪ್ರಯತ್ನಿಸದಿದ್ದರೂ ಸಹ, ಭಾರvದಲ್ಲಿ ಈ ಯೋಜನೆಯನ್ನು ವಿವರವಾದ ಘಟಕಗಳ ರೂಪದಲ್ಲಿ ಪರಿಚಯಿಸಲು ಬೇಕಾದ ಕೆಲವು ಉಪಯುಕ್ತ ಸಲಹೆಗಳನ್ನು ಸೂಚಿಸಲು ಇಚ್ಛಿಸುತ್ತೇವೆ.

ಮೊದಲ ಹೆಜ್ಜೆಯಾಗಿ, ಆಯ್ದ ಗ್ರಾಮೀಣ ಪ್ರದೇಶಗಳಲ್ಲಿ ಹಲವಾರು ಶಿಕ್ಷಕ ತರಬೇತಿ ಶಾಲೆಗಳನ್ನು ಮತ್ತು ಪ್ರತಿಯೊಂದು ಭಾಷಾಪ್ರಾಂತ್ಯದಲ್ಲಿ ಕನಿಷ್ಠ ಒಂದು ಅಥವಾ ಎರಡು ತರಬೇತಿ ಶಾಲೆಗಳನ್ನು ಸ್ಥಾಪಿಸಬೇಕು. ಇಲ್ಲಿ ಶಿಕ್ಷಕರು ಕರಕೌಶಲ್ಯಗಳ ಮತ್ತು ಉತ್ಪಾದನಾಶೀಲ ಕೆಲಸದ ಮೂಲಕ ಶಿಕ್ಷಣ ವಿಧಾನವನ್ನು ಕಲಿತು ಹೊಸ ಶಾಲೆಗಳಲ್ಲಿ ಮಕ್ಕಳಿಗೆ ಸಮರ್ಥವಾಗಿ ಶಿಕ್ಷಣ ನೀಡಲು ತರಬೇತಿ ಹೊಂದಿರಬೇಕು. ತರಬೇತಿ ಶಿಕ್ಷಕರ ಮತ್ತು ಮೂಲ ಶಿಕ್ಷಣ ಶಾಲೆಗಳ ಸಂಖ್ಯೆಯನ್ನು ಆಯಾ ಪ್ರದೇಶದ ಗಾತ್ರಕ್ಕೆ ತಕ್ಕಂತೆ ನಿರ್ಧರಿಸಲಾಗುವುದು. ಉದಾಹರಣೆಗೆ ಶಿಕ್ಷಣ ಇಲಾಖೆ ಒಂದು ಜಿಲ್ಲೆಯಂತಹ ದೊಡ್ಡ ಪ್ರದೇಶವನ್ನು ಆಯ್ದುಕೊಂಡು ಅದರ ಅಗತ್ಯಗಳ ಸಮೀಕ್ಷೆಯೊಂದನ್ನು ನಡೆಸಬೇಕು. ಹೊಸ ಯೋಜನೆಗೆ ಹೊರಳಿಕೊಳ್ಳಬೇಕಾದ ಪ್ರಸಕ್ತ ಶಾಲೆಗಳು, ಪ್ರಾರಂಭಿಸಬೇಕಾದ ಹೊಸ ಶಾಲೆಗಳು, ಮತ್ತು ಅದಕ್ಕೆ ಅಗತ್ಯವಿರುವ ಶಿಕ್ಷಕರು, ಇವೆಲ್ಲದರ ಸಂಖ್ಯೆಗಳನ್ನು ಅದು ಒಳಗೊಳ್ಳಬೇಕು. ಸಧ್ಯದಲ್ಲಿ ಅಸ್ತಿತ್ವದಲ್ಲಿರುವ ಮತ್ತು ಹೊಸದಾಗಿ ಪ್ರಾರಂಭಿಸುವ ತರಬೇತಿ ಶಾಲೆಗಳಲ್ಲಿ ಈ ಆಯ್ದ ಶಿಕ್ಷಕರಿಗೆ ತರಬೇತಿ ನೀಡುವುದು ತಕ್ಷಣವೇ ಪ್ರಾರಂಭವಾಗಬೇಕಾದ ಅತ್ಯಂತ ತುರ್ತಿನ ಕೆಲಸ. ನಮ್ಮ ಅಭಿಪ್ರಾಯದಲ್ಲಿ ಆಯಾ ಪ್ರದೇಶದಲ್ಲಿ ಎಲ್ಲಾ ಮಕ್ಕಳಿಗೆ ಈ ಕಡ್ಡಾಯ ಮೂಲ ಶಿಕ್ಷಣವನ್ನು ನೀಡುವ ಶಾಲೆಗಳನ್ನು ಸ್ಥಾಪಿಸುವ ಕೆಲಸ ಐದು ವರ್ಷಗಳೊಳಗೆ ಪೂರ್ಣವಾಗಬೇಕು. ಅಷ್ಟೊತ್ತಿಗೆ ಆಯಾ ಪ್ರಾಂತ್ಯದಲ್ಲಿರುವ ಎಲ್ಲಾ ತರಬೇತಿ

ಶಾಲೆಗಳು ಈ ಹೊಸ ಮಾದರಿಯ ತರಬೇತಿ ಶಾಲೆಗಳಾಗಿ ರೂಪಾಂತರಗೊಂಡಿರಬೇಕು. ಈ ಯೋಜನೆಯಲ್ಲಿ ತರಬೇತಿ ಹೊಂದಿದ ಶಿಕ್ಷಕರು ಲಭ್ಯವಾಗಲು ಪ್ರಾರಂಭಿಸಿದ ತಕ್ಷಣವೇ ಅಸ್ತಿತ್ವದಲ್ಲಿರುವ ಶಾಲೆಗಳು ಹೊಸದಕ್ಕೆ ಹೊರಳಿಕೊಳ್ಳುವ ಮತ್ತು ಹೊಸ ಶಾಲೆಗಳು ಪ್ರಾರಂಭವಾಗುವ ಪ್ರಕ್ರಿಯೆ ಭರದಿಂದ ಸಾಗಬೇಕು. ಮೊದಲ ಕೆಲವು ವರ್ಷಗಳಲ್ಲಿ ಒಂದು ವರ್ಷ ಮತ್ತು ಮೂರು ವರ್ಷ ಅವಧಿಯ ತರಬೇತಿ ಶಾಲೆಗಳು ಎರಡೂ ಅಸ್ತಿತ್ವದಲ್ಲಿರುವುದು ಅನಿವಾರ್ಯವಾಗುತ್ತದೆ. ಒಂದು ವರ್ಷದ ಶೀಘ್ರ ಅವಧಿಯಷ್ಟು ತರಬೇತಿಯನ್ನು ಪ್ರಸಕ್ತ ಶಾಲೆಗಳಲ್ಲಿ ಕೆಲಸ ಮಾಡುತ್ತಿರುವ ಅನುಭವಸ್ಥ ಮತ್ತು ವಿಶೇಷವಾಗಿ ಅರ್ಹರಾದ ಶಿಕ್ಷಕರಿಗೆ ನೀಡಿದರೆ ಒಂದು ವರ್ಷದ ನಂತರ ಅವರು ಹೊಸ ಯೋಜನೆಯ ಶಾಲೆಗಳಲ್ಲಿ ಕೆಲಸ ಮಾಡಲು ಸಿದ್ಧರಿರುತ್ತಾರೆ. ಅದೇ ಸಮಯಕ್ಕೆ ಮೂರು ವರ್ಷ ಅವಧಿಯ ತರಬೇತಿಯನ್ನೂ ಪ್ರಾರಂಭಿಸಿ ಆಯ್ದ ಬೇರೊಂದು ಗುಂಪಿನ ಶಿಕ್ಷಕ-ಅಭ್ಯರ್ಥಿಗಳಿಗೆ ತರಬೇತಿಯನ್ನು ನೀಡಬೇಕು. ಒಂದು ವರ್ಷದ ತರಬೇತಿಗೆ ಆಯ್ಕೆಯಾಗದೇ ಉಳಿದ ಎಲ್ಲಾ ಪ್ರಸಕ್ತ ಶಾಲೆಗಳ ಶಿಕ್ಷಕರು ವಿಶೇಷವಾಗಿ ಯೋಜಿಸಿದ ರಿಫ್ರೆಶರ್ ಕೋರ್ಸ್‌ಗಳಿಗೆ ಹಾಜರಾಗುವಂತೆ ಶಿಕ್ಷಣ ಇಲಾಖೆ ನೋಡಿಕೊಳ್ಳಬೇಕು. ಅಲ್ಲಿ ಅವರಿಗೆ ಮೂಲ ಶಿಕ್ಷಣದ ತತ್ವಗಳು ಮತ್ತು ಅದರ ಬೋಧನಾ ವಿಧಾನಗಳ ಪರಿಚಯ ಮಾಡಿಕೊಡಬೇಕು. ಇಲಾಖೆಯ ಸೇವೆಯಲ್ಲಿರುವ ಪ್ರತಿಯೊಬ್ಬ ಶಿಕ್ಷಕರೂ ಮುಂದಿನ ಐದು ವರ್ಷಗಳ ಒಳಗೆ ಅಂತಹ ಕೋರ್ಸ್‌ಗಳಲ್ಲಿ ಅಗತ್ಯವಾಗಿ ಭಾಗವಹಿಸಲು ಯೋಜನೆಯೊಂದು ರೂಪಿಸುವುದನ್ನು ಖಾತ್ರಿಪಡಿಸಬೇಕು.

ಈ ತರಬೇತಿ ಶಾಲೆಗಳು ಗ್ರಾಮೀಣ ಪ್ರದೇಶಗಳಲ್ಲಿ ಇರುವಂತೆ ನೋಡಿಕೊಳ್ಳುವುದು ಅವಶ್ಯಕ. ಏಕೆಂದರೆ ಆಗ ಮಾತ್ರ ಶಿಕ್ಷಕರು ತಾವು ಬೋಧಿಸಬೇಕಾಗಿ ಬರುವ ಪರಿಸ್ಥಿತಿಗಳಲ್ಲಿ ಕೆಲಸ ಮಾಡುವುದರ ಬಗ್ಗೆ ಅಗತ್ಯ ಅನುಭವವನ್ನು ಪಡೆಯಬಹುದು. ಗ್ರಾಮೀಣ ಸಂಪರ್ಕವಿಲ್ಲದ ನಗರ ಪ್ರದೇಶಗಳಲ್ಲಿ ಆ ತರಬೇತಿ ಶಾಲೆಗಳನ್ನು ಸ್ಥಾಪಿಸಿದರೆ ಶಿಕ್ಷಕ ಅಭ್ಯರ್ಥಿಗಳು ಈ ಯೋಜನೆಗೆ ಅಗತ್ಯವಾದ ಮನೋಭಾವವನ್ನು ಮತ್ತು ಅಭ್ಯಾಸಗಳನ್ನು ಬೆಳೆಸಿಕೊಳ್ಳುವುದು ಕಷ್ಟವಾಗುತ್ತದೆ.

ಹೊಸ ಯೋಜನೆಗೆ ಅನುಗುಣವಾಗಿ ತರಬೇತಿ ಹೊಂದಿದ ಶಿಕ್ಷಕರ ಮೊದಲ ತಂಡ ಹೊರಗೆ ಬರುವ ಹೊತ್ತಿಗೆ ಆಯ್ದ ಪ್ರದೇಶದಲ್ಲಿ ಆಲೋಚಿಸಿದಂತಹ ಹೊಸ ರೀತಿಯ ಮೂಲ ಶಿಕ್ಷಣದ ಶಾಲೆಗಳನ್ನು ಪ್ರಾರಂಭಿಸಬೇಕು. ಒಂದೇ ಪ್ರದೇಶದಲ್ಲಿ ಹಳೆಯ ಮತ್ತು ಹೊಸ ಮಾದರಿಯ ಶಾಲೆಗಳು ಅಕ್ಕಪಕ್ಕದಲ್ಲಿ ಇರುವುದು ಅಪೇಕ್ಷಣೀಯವಲ್ಲ. ಸಹಜವಾಗಿಯೇ, ಈ ಉದ್ದೇಶಕ್ಕಾಗಿ ಪ್ರಸ್ತುತದಲ್ಲಿ ಕೆಲವೇ ಶಾಲೆಗಳಿರುವ ಪ್ರದೇಶಗಳಲ್ಲಿ ಶೈಕ್ಷಣಿಕ ಸೌಲಭ್ಯಗಳನ್ನು ಒದಗಿಸುವ ತುರ್ತು ಅಗತ್ಯವಿರುವುದರಿಂದ ಅಂತಹ

ಪ್ರದೇಶಗಳನ್ನು ಆಯ್ಕೆ ಮಾಡಿಕೊಳ್ಳುವುದು ಸುಲಭವಾಗಿಯೂ ಮತ್ತು ಹೆಚ್ಚು ಉಪಯೋಗವಾಗಿಯೂ ಇರುತ್ತದೆ.

ಎರಡನೆಯದಾಗಿ, ನಮ್ಮ ವರದಿಯಲ್ಲಿ ವಿಶದೀಕರಿಸಿರುವ ಹೊಸ ಪಠ್ಯಕ್ರಮ ಮತ್ತು ಬೋಧನಾ ವಿಧಾನಗಳಿಗೆ ಅನುಗುಣವಾಗಿ ಪ್ರತಿಯೊಂದು ಶಿಕ್ಷಕ ತರಬೇತಿ ಶಾಲೆಗೆ ಒಂದು ಪ್ರಾತ್ಯಕ್ಷಿಕೆ ತರಬೇತಿ ಶಾಲೆಯನ್ನು ವಿಶೇಷವಾಗಿ ನಿಯೋಜಿಸಬೇಕು. ತರಬೇತಿ ಶಾಲೆಯಂತೆ ಈ ಶಾಲೆಯೂ ಸಹ ಹೊಸ ಯೋಜನೆಯನ್ನು ಬೌದ್ಧಿಕವಾಗಿ ಮತ್ತು ಸಹೃದಯಪೂರ್ವಕವಾಗಿ ಕಾರ್ಯರೂಪಕ್ಕಿಳಿಸಬಲ್ಲ ವಿಶೇಷವಾದ ಸಮರ್ಥ ಶಿಕ್ಷಕರನ್ನು ಹೊಂದಿರಬೇಕು. ಆ ನಿರ್ದಿಷ್ಟ ಪ್ರದೇಶದಲ್ಲಿ ಈ ಶಾಲೆ ಮಾದರಿ ಶಾಲೆಯಾಗಿ ಕೆಲಸ ನಿರ್ವಹಿಸಿದರೆ ನಂತರ ಸ್ಥಾಪಿತಲ್ಪಡುವ ಶಾಲೆಗಳು ಸ್ಫೂರ್ತಿ ಮತ್ತು ಮಾರ್ಗದರ್ಶನಕ್ಕೆ ಅದನ್ನು ಅವಲಂಬಿಸುತ್ತವೆ.

ನಮ್ಮ ಅಭಿಪ್ರಾಯದಲ್ಲಿ ಪ್ರತಿಯೊಂದು ಪ್ರಾಂತ್ಯವೂ ತನ್ನ ಶೈಕ್ಷಣಿಕ ಅಗತ್ಯಗಳ ಬಗ್ಗೆ ಸಮೀಕ್ಷೆಯೊಂದನ್ನು ನಡೆಸಿ ಅದನ್ನು ಹೇಗೆ ಸಾಧಿಸಬೇಕೆಂಬುದರ ವಿವರಪೂರ್ಣ ಕಾರ್ಯಯೋಜನೆಯೊಂದನ್ನು ತಯಾರಿಸಿಕೊಳ್ಳಬೇಕು. ಈ ಸಮೀಕ್ಷೆ ಶಾಲೆಗೆ ಹೋಗಬೇಕಿರುವ ಮಕ್ಕಳ ಸಂಖ್ಯೆ, ಅಷ್ಟೂ ಮಕ್ಕಳಿಗೆ ಶಿಕ್ಷಣ ನೀಡಲು ಅಗತ್ಯವಿರುವ ಶಾಲೆಗಳ ಮತ್ತು ಶಿಕ್ಷಕರ ಸಂಖ್ಯೆ, ಸ್ಥಾಪಿಸಬೇಕಿರುವ ತರಬೇತಿ ಶಾಲೆಗಳ ಸಂಖ್ಯೆ, ಮತ್ತು ಪ್ರತಿ ವರ್ಷ ಎಷ್ಟು ಮಂದಿ ತರಬೇತಿ ಪಡೆದ ಶಿಕ್ಷಕರು ಲಭ್ಯವಿರುತ್ತಾರೆ ಎಂಬುದರ ವಿವರಗಳನ್ನು ಕಲೆಹಾಕುವ ಪ್ರಯತ್ನವನ್ನು ಮಾಡಬೇಕು. ಆಡಳಿತದ ನೆಲೆಯಲ್ಲಿ ಈ ಸಮೀಕ್ಷೆ ಮರುಕಳಿಸುವ ಮತ್ತು ಅಲ್ಲದಿರುವ ಖರ್ಚುವೆಚ್ಚಗಳ ಹಾಗೂ ಶಾಲಾ ಉತ್ಪನ್ನಗಳ ಮಾರಾಟಕ್ಕೆ ಅಗತ್ಯವಿರುವ ವ್ಯವಸ್ಥೆಯ ಬಗೆಗಿನ ವಿವರಗಳನ್ನು ಒಳಗೊಳ್ಳಬೇಕು. ಇವು ಮೂರ್ತಸ್ವರೂಪದ ವಾಸ್ತವಿಕ ಸಮಸ್ಯೆಗಳಾಗಿದ್ದು ಅವುಗಳನ್ನು ಬಗೆಹರಿಸಲು ಪ್ರಯತ್ನಿಸುವುದು ಅತ್ಯಗತ್ಯ. ಅವುಗಳ ಭಾರಿ ಪ್ರಮಾಣ ಮತ್ತು ಸ್ವರೂಪ ನಮ್ಮನ್ನು ಕಂಗೆಡಿಸಬಾರದು. ಅಸಾಧ್ಯವೆಂದು ಹಿಂದೆ ಸರಿಯುವುದು ಸಮರ್ಥನೀಯವಲ್ಲ. ಈ ಭಾರೀ ಶೈಕ್ಷಣಿಕ ಪ್ರಯತ್ನದ ಹಣಕಾಸಿನ ಆಯಾಮದ ಬಗ್ಗೆ ನಮಗೆ ಸಂಪೂರ್ಣ ಎಚ್ಚರವಿದೆ. ಆದರೆ ಪ್ರಾಂತೀಯ ಸರ್ಕಾರಗಳು ಈ ಯೋಜನೆಯನ್ನು ಕಾರ್ಯಗತಗೊಳಿಸುವ ಬಗ್ಗೆ ನಮಗೆ ವಿಶ್ವಾಸವೂ ಇದೆ. ಇಡೀ ದೇಶದಲ್ಲಿ ಮತ್ತು ಇಪ್ಪತ್ತು ಅಥವಾ ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ಎಲ್ಲಾ ಮಕ್ಕಳಿಗೆ ಕಡ್ಡಾಯ ಹಾಗೂ ಉಚಿತ ಸಾರ್ವತ್ರಿಕ ಶಿಕ್ಷಣ ಸಂಪೂರ್ಣವಾಗಿ ಜಾರಿಯಾಗಿರಬೇಕು. ಅದಕ್ಕೆ ಮೂಲ ಶಿಕ್ಷಣ ನೀಡುವ ಇಪ್ಪತ್ತು ವರ್ಷಗಳ ಯೋಜನೆಯನ್ನು ರೂಪಿಸಿ ಅನಕ್ಷರತೆಯನ್ನು ಸಂಪೂರ್ಣವಾಗಿ ತೊಡೆದು ಹಾಕುವತ್ತ ಹೆಜ್ಜೆ ಹಾಕಬೇಕು. ಈ ಯೋಜನೆಯ ಜೊತೆಗೆ ಸ್ವಯಂಸೇವಾ ಸಂಸ್ಥೆಗಳ ಅಥವಾ ಶಾಲಾಕಾಲೇಜು ವಿದ್ಯಾರ್ಥಿಗಳ ಕಡ್ಡಾಯಸೇವೆಯ ಸಹಾಯದಿಂದ ವಯಸ್ಕರ ಶಿಕ್ಷಣದ ಯೋಜನೆಯನ್ನೂ ಕೈಗೆತ್ತಿಕೊಂಡರೆ ಈ

ಇಪ್ಪತ್ತು ವರ್ಷಗಳ ಅವಧಿಯಲ್ಲಿ ಭಾರತ ಸಂಪೂರ್ಣ ಸಾಕ್ಷರತೆಯತ್ತ ದಾಪುಗಾಲಿಟ್ಟು ಸಾಗುತ್ತದೆ ಎಂಬ ಭರವಸೆ ನಮಗಿದೆ.

ಈ ರಾಷ್ಟ್ರೀಯ ಶಿಕ್ಷಣದ ಯೋಜನೆಯನ್ನು ಜಾರಿಗೆ ತರುವಲ್ಲಿ ಪ್ರಾಂತೀಯ ಸರ್ಕಾರಗಳು ನಾವು ವರದಿಯಲ್ಲಿ ಸ್ಥಾಪನೆಗೆ ಶಿಫಾರಸ್ಸು ಮಾಡಿರುವ ಅಖಿಲ ಭಾರತ ಶಿಕ್ಷಣ ಮಂಡಳಿಯ ಸೇವೆಗಳನ್ನು ಬಳಸಿಕೊಳ್ಳಬೇಕು. ಉದಾಹರಣೆಗೆ, ಈ ಮಂಡಳಿ ಶಿಕ್ಷಕರ ತರಬೇತಿಗೆ ಬೇಕಾದ ಸಾಹಿತ್ಯವನ್ನು ಹಾಗೂ ಹೊಸ ಪ್ರಾಥಮಿಕ ಶಾಲೆಗಳಿಗೆ ಪುಸ್ತಕಗಳನ್ನು ರೂಪಿಸುವಲ್ಲಿ ಸಹಾಯಕ್ಕೆ ಒದಗಬಲ್ಲದು. ಶಾಲೆಗಳು ಎತ್ತಿರುವ ಕೆಲವು ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುವಲ್ಲಿ ಈ ಮಂಡಳಿ ಶೈಕ್ಷಣಿಕ ಮಾಹಿತಿಯ ಕೇಂದ್ರೀಯ ಕಛೇರಿಯಾಗಿ ಕೆಲಸ ಮಾಡಬೇಕು. ಅದು ತನ್ನ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸುವಲ್ಲಿ ಪ್ರಾಂತೀಯ ಸರ್ಕಾರಗಳು ಎಲ್ಲ ರೀತಿಯ ಸಹಾಯವನ್ನು ಮತ್ತು ಅನುಕೂಲಗಳನ್ನು ಒದಗಿಸಬೇಕು.

ದೇಶದಲ್ಲಿ ರಾಷ್ಟ್ರೀಯ ಶಿಕ್ಷಣ ಸಂಸ್ಥೆ, ಅಖಿಲ ಭಾರತ ನೂಲುಗಾರರ ಮತ್ತು ಗ್ರಾಮೀಣ ಕೈಗಾರಿಕಾ ಸಂಘಗಳಂತಹ ಹಲವಾರು ಅನಧಿಕೃತ ಸಂಸ್ಥೆಗಳು ಈ ಯೋಜನೆಯನ್ನು ಕಾರ್ಯಗತಗೊಳಿಸುವತ್ತ ಸಹಾಯಕ್ಕೆ ಒದಗಿ ಬರಬಲ್ಲವು. ಇಂಥಾ ಸಂಸ್ಥೆಗಳು ಮತ್ತು ಶಿಕ್ಷಣ ಇಲಾಖೆಯ ನಡುವೆ ನಿಕಟವಾದ ಸಹಕಾರ ಇರಬೇಕೆಂಬುದು ನಮ್ಮ ಆಶಯ. ಈ ಹೊಸ ರಾಷ್ಟ್ರೀಯ ಶಿಕ್ಷಣ ಯೋಜನೆ ಹುಟ್ಟುಹಾಕಿರುವ ಉತ್ಸಾಹದ ಫಲವಾಗಿ ಹಲವಾರು ಸ್ವಯಂ ಸೇವಾ ಸಂಸ್ಥೆಗಳು ಮತ್ತು ಕಾರ್ಯಕರ್ತರು ತರಬೇತಿ ಶಾಲೆಗಳನ್ನು ಮತ್ತು ಮೂಲ ಶಿಕ್ಷಣ ಶಾಲೆಗಳನ್ನು ಸ್ಥಾಪಿಸಲು ಮುಂದೆ ಬರುತ್ತಾರೆ ಎಂಬ ನಿರೀಕ್ಷೆ ನಮಗಿದೆ. ಪ್ರಾಂತೀಯ ಸರ್ಕಾರಗಳು ಶಿಕ್ಷಣದ ಅಂತಹ ಖಾಸಗಿ ಉದ್ಯಮಗಳಿಗೆ ಬೇಕಾದ ಧನಸಹಾಯ ಮತ್ತು ತಜ್ಞಸಲಹೆಯನ್ನು ನೀಡಿ ಪ್ರೋತ್ಸಾಹಿಸಬೇಕು.

ಈ ಮೂಲ ಶಿಕ್ಷಣ ಯೋಜನೆಯನ್ನು ರೂಪಿಸುವಲ್ಲಿ ಹಲವು ಸ್ನೇಹಿತರು ಸಲಹೆ, ವಿಮರ್ಶೆ, ಮತ್ತು ವಿವಿಧ ವಿಷಯಗಳ ಪಠ್ಯಕ್ರಮ ತಯಾರಿಕೆಯ ಮೂಲಕ ಹಲವಾರು ರೀತಿಯಲ್ಲಿ ಸಹಾಯ ಮಾಡಿದ್ದಾರೆ. ನಮಗೆ ಸಲಹೆಗಳನ್ನು ಕಳುಹಿಸಿದ ಕೆಲವು ವ್ಯಕ್ತಿ ಮತ್ತು ಸಂಸ್ಥೆಗಳು ಈಗಾಗಲೇ ವಾರ್ಧಾ ಯೋಜನೆ ನಕ್ಷೆಯ ರೂಪದಲ್ಲಿಯೇ ಕೆಲಸ ಮಾಡುತ್ತಿರುವ ಹಲವಾರು ಶಾಲೆಗಳು ಭಾರತದಲ್ಲಿ ಇವೆ ಎಂಬ ಸುದ್ದಿಯನ್ನು ಕಳುಹಿಸಿರುವುದು ನಮಗೆ ಸಂತೋಷವನ್ನು ಮತ್ತು ಭರವಸೆಯನ್ನು ನೀಡಿದೆ.

ವಿವಿಧ ವಿಷಯಗಳ ಪಠ್ಯಕ್ರಮ ತಯಾರಿಕೆಯಲ್ಲಿ ಅಪಾರ ನೆರವು ನೀಡಿದ ಈ ಕೆಳಗಿನವರಿಗೆ ವಿಶೇಷ ಕೃತಜ್ಞತೆಯನ್ನು ಸೂಚಿಸಲು ಬಯಸುತ್ತೇವೆ:

- ಶ್ರೀಯುತ ಡಿ. ಆರ್ ಮೊಹರೀಕರ್, ಉಪ ನಿರ್ದೇಶಕರು, ಕೃಷಿ, ಮಧ್ಯ ಪ್ರಾಂತ್ಯ ಮತ್ತು

- ಶ್ರೀಯುತ ಎಸ್. ಆರ್. ಭೀಸೆ, ಹಕೀಮ್ಜಿ ಪ್ರೌಢಶಾಲೆ, ಬೋರ್ದಿ (ಕೃಷಿಗೆ ಸಂಬಂಧಪಟ್ಟ ಪಠ್ಯಕ್ರಮ ತಯಾರಿಕೆಗೆ).
- ಶ್ರೀಯುತ ಲಕ್ಷ್ಮೀಶ್ವರ್ ಸಿನ್ಹಾ, ವಿಶ್ವಭಾರತಿ, ಶ್ರೀನಿಕೇತನ್ (ರಟ್ಟು, ಮರ, ಮತ್ತು ಲೋಹ ಕೆಲಸದ ಪಠ್ಯಕ್ರಮ ತಯಾರಿಕೆಗೆ).
- ಶ್ರೀಯುತ ರಾಮ್ ನಾರಾಯಣ್ ಮಿಶ್ರಾ, ಸಂಪಾದಕರು, ಭೂಗೋಲ್, ಅಲಹಾಬಾದ್ (ಭೂಗೋಳದ ಪಠ್ಯಕ್ರಮ ತಯಾರಿಕೆಗೆ).
- ಶ್ರೀ. ತಾಜಮ್ಮಲ್ ಹುಸೇನ್, ತರಬೇತಿ ಕಾಲೇಜು, ಅಲಿಗಢ (ಗಣಿತದ ಪಠ್ಯಕ್ರಮ ತಯಾರಿಕೆ ಮತ್ತು ಅಲಿಗಢದಲ್ಲಿ ನಡೆದ ಕೊನೆಯ ಸಭೆಯಲ್ಲಿ ನಮಗೆ ನೀಡಿದ ವಿಶೇಷ ಸಹಾಯ ಮತ್ತು ಸಹಕಾರಕ್ಕೆ).
- ಶ್ರೀ. ಡಬ್ಲ್ಯೂ. ಎಚ್. ಸಿದ್ದೀಖಿ ಮತ್ತು ಶ್ರೀ. ಬಿ. ಎಚ್. ಜುಬೈರಿ, ತರಬೇತಿ ಕಾಲೇಜು, ಅಲಿಗಢ (ಸಾಮಾನ್ಯ ವಿಜ್ಞಾನದ ಪಠ್ಯಕ್ರಮ ತಯಾರಿಕೆಗೆ).
- ಶ್ರೀ. ಅಬ್ದುಲ್ ಘಫೂರ್ ಮತ್ತು ಶ್ರೀ. ಎಚ್. ರಹಮಾನ್, ತರಬೇತಿ ಕಾಲೇಜು, ಅಲಿಗಢ (ಸಾಮಾಜಿಕ ಅಧ್ಯಯನದ ಪಠ್ಯಕ್ರಮ ತಯಾರಿಕೆಗೆ).
- ಶ್ರೀಯುತ ನಂದ ಲಾಲ್ ಬೋಸ್, ವಿಶ್ವಭಾರತಿ, ಶಾಂತಿನಿಕೇತನ (ಚಿತ್ರಬಿಡಿಸುವಿಕೆಯ ಪಠ್ಯಕ್ರಮ ತಯಾರಿಕೆಗೆ).

ನವಭಾರತ್ ವಿದ್ಯಾಲಯ, ವಾರ್ಧಾ, ಇಲ್ಲಿಯ ಮಿಸ್. ಕೆ. ಎಮ್. ಹೈಲಿಮಾನ್ ಮತ್ತು ಜಾಮಿಯಾ ಮಿಲ್ಲಿಯಾ ಇಸ್ಲಾಮಿಯಾ, ದೆಹಲಿ, ಇಲ್ಲಿಯ ಮಿಸ್ ಗೆರ್ಡಾ ಫಿಲಿಪ್ಸ್ ಬಾನ್ ಅವರು ಸ್ವ ಇಚ್ಛೆಯಿಂದ ಮಾಡಿದ ಸಮಿತಿಯ ಎಲ್ಲಾ ಟೈಪಿಂಗ್ ಕೆಲಸವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ.

ಈ ಪಠ್ಯಕ್ರಮವನ್ನು ನಿಮ್ಮ ಅವಗಾಹನೆಗೆ ಈ ಮೂಲಕ ಸಲ್ಲಿಸುತ್ತಿದ್ದೇವೆ. ಇದಕ್ಕೆ ನೀವು ಸಮ್ಮತಿ ನೀಡುವಿರೆಂದು ಹಾಗೂ ಈ ಮೂಲ ಶಿಕ್ಷಣದ ಯೋಜನೆ ಭಾರತೀಯ ಪ್ರತಿಭೆಗೆ ಮತ್ತು ದೇಶದ ಅಗತ್ಯಗಳಿಗೆ ಸುಸ್ಥಿರವಾದ ತಳಪಾಯವನ್ನು ಒದಗಿಸುತ್ತದೆಂದು ಆಶಿಸುತ್ತೇವೆ.

ಗೌರವಪೂರ್ವಕವಾಗಿ,

ಜಾಕೀರ್ ಹುಸೇನ್ (ಅಧ್ಯಕ್ಷರು)
ಕೆ. ಜಿ. ಸೈಯಿದೇನ್
ಕಾಕಾ ಕಾಲೇಲ್ಕರ್
ಕಿಶೋರಲಾಲ್ ಮಶ್ರೂವಾಲ
ಜೆ, ಸಿ. ಕುಮಾರಪ್ಪ
ಶ್ರೀಕೃಷ್ಣದಾಸ್ ಜಾಜು
ವಿನೋಬಾ ಭಾವೆ
ಆಶಾ ದೇವಿ
ಆರ್ಯನಾಯಕಂ (ಸಂಚಾಲಕರು)
(ಸಹಿಗಳನ್ನು ಒಳಗೊಂಡಿದೆ)

# ಮೂಲ ಕರಕುಶಲ ವ್ಯವಸಾಯ

ಈ ಪಠ್ಯಕ್ರಮದಲ್ಲಿ ಎರಡು ವಿಭಿನ್ನ ಭಾಗಗಳಿವೆ. ಮೊದಲನೆಯದು ಒಂದನೇ ತರಗತಿಯಿಂದ ಐದನೇ ತರಗತಿಗೆ ಸಂಬಂಧಪಟ್ಟಿದ್ದು. ಇದರಲ್ಲಿ ವ್ಯವಸಾಯವನ್ನು ಮೂಲ ಕೌಶಲ್ಯವಾಗಿ ಪರಿಗಣಿಸಿಲ್ಲ. ಈ ಅವಧಿಯಲ್ಲಿ ಮಣ್ಣು ನಿರ್ವಹಣೆ ಮತ್ತು ಸಸ್ಯ ಬೆಳವಣಿಗೆಯ ಮೂಲಭೂತ ತತ್ವಗಳನ್ನೊಳಗೊಂಡ ಸೂಕ್ತ ಪಠ್ಯಕ್ರಮವನ್ನು ರೂಪಿಸಿ ಅದರಲ್ಲಿ ವಿದ್ಯಾರ್ಥಿಗಳಿಗೆ ಆಸಕ್ತಿ ಮೂಡಿಸಿ ಬೋಧಿಸುವುದು ಇದರ ಉದ್ದೇಶವಾಗಿರುತ್ತದೆ. ಅದು ಸಾಮಾನ್ಯ ವಿಜ್ಞಾನದ ಒಂದು ಭಾಗವಾಗಿ ಒದಗಿಬರುತ್ತದೆ. ಮಕ್ಕಳು ಸುಮಾರು ಒಂದು ಎಕರೆಯಷ್ಟು ಭೂಮಿಯ ಮೇಲೆ ತರಕಾರಿಗಳನ್ನು ಮತ್ತು ಇತರ ತೋಟ ಬೆಳೆಗಳನ್ನು ಬೆಳೆಯುವ ಅಭ್ಯಾಸವನ್ನು ಮಾಡಬೇಕಾಗುತ್ತದೆ.

ಎರಡನೆಯ ಭಾಗ ಆರು ಮತ್ತು ಏಳನೇ ತರಗತಿಗಳಿಗೆ ಸಂಬಂಧಪಟ್ಟಿದ್ದು ಆ ಅವಧಿಯಲ್ಲಿ ಮಕ್ಕಳು ವ್ಯವಸಾಯವನ್ನು ಒಂದು ಮೂಲ ಕೌಶಲ್ಯವನ್ನಾಗಿ ಅಭ್ಯಾಸ ಮಾಡುತ್ತಾರೆ. ಪ್ರತಿ ವರ್ಷದ ಪ್ರಾಯೋಗಿಕ ಮತ್ತು ಸೈದ್ಧಾಂತಿಕ ಪಠ್ಯಕ್ರಮವು ಎಷ್ಟರ ಮಟ್ಟಿಗೆ ಸಹಸಂಬಂಧ ಹೊಂದಿದೆ ಎಂದರೆ ವಿದ್ಯಾರ್ಥಿಗಳು ಮೊದಲನೆಯದನ್ನು ಅಭ್ಯಾಸ ಮಾಡುತ್ತಿದ್ದಂತೆಯೇ ಎರಡನೆಯದನ್ನು ವಿವರಿಸಿದರೆ ಅದನ್ನು ಅರಗಿಸಿಕೊಳ್ಳಲು ಅವರಿಗೆ ಸುಲಭವಾಗುತ್ತದೆ.

ತರಗತಿ

**I**

## ವಿಶೇಷ ಸೂಚನೆ

ತರಗತಿಯಲ್ಲಿ ಕಲಿಯುವ ಮಕ್ಕಳು ಏಳು ವರ್ಷದವರಾಗಿರುತ್ತಾರೆ. ತೋಟದ ಕೆಲಸವನ್ನು ಒಂದು ಚಿಕ್ಕದಾದ ನಿರ್ದಿಷ್ಟ ಭೂಮಿಯ ಅಳತೆಯಲ್ಲಿ ಮಾತ್ರ ಮಾಡಲಾಗುತ್ತದೆ. ಸಣ್ಣ ಕುಡುಗೋಲು (khurpies) ಮತ್ತು ನೀರು ಹಾಯಿಸುವ ಕ್ಯಾನುಗಳನ್ನು ಉಪಯೋಗಿಸಲಾಗುತ್ತದೆ. ಈ ವರ್ಷದ ಮೊದಲರ್ಧ ಭಾಗವನ್ನು ಸಂಪೂರ್ಣವಾಗಿ ಗಮನವಿಟ್ಟು ನೋಡುವುದರಲ್ಲಿ ಕಳೆದು ಈ ಕೆಳಗಿನ ಸೂಚನೆಗಳನ್ನು ಮುಂದಿನ ಅರ್ಧ ಭಾಗದಲ್ಲಿ ಪ್ರಾಯೋಗಿಕವಾಗಿ ಮಾಡಲಾಗುತ್ತದೆ. ತಾತ್ವಿಕ ಅಂಶಗಳು ಮಕ್ಕಳಲ್ಲಿ ಆಸಕ್ತಿಯನ್ನು ಹುಟ್ಟಿಸುವಂತೆ ನೋಡಿಕೊಳ್ಳಬೇಕು. ಅವರಿಗೆ ಸ್ಥೂಲವಾದ ಅಂಶಗಳನ್ನು ಮಾತ್ರ ನೀಡಿ ವಿವರಗಳನ್ನು ನಂತರ ರೂಪಿಸಬೇಕಾಗಿದೆ.

## ಮಾಡಿ-ಕಲಿ

1. ನರ್ಸರಿಯಲ್ಲಿ ಬೀಜಗಳನ್ನು ಬಿತ್ತಬೇಕು.
2. ನೀರು ಹಾಯಿಸಬೇಕು.
3. ತಳಿಗಳನ್ನು ಮತ್ತು ತೋಟದ ಸಸ್ಯಗಳನ್ನು ಆರೈಕೆ ಮಾಡಬೇಕು:

   a) ನೀರು ಹಾಯಿಸುವುದು.
   b) ಕಳೆ ಕೀಳುವುದು.
   c) ಅರೆ ಕೊಳೆತ ಹುಲ್ಲು, ಮಣ್ಣು, ಎಲೆ ಇತ್ಯಾದಿಗಳ ಮಿಶ್ರಣ ಮಾಡಿಕೊಂಡು ಹಸಿಗೊಬ್ಬರ ತಯಾರಿಸುವುದು.
   d) ಕೀಟಗಳನ್ನು ಹೆಕ್ಕುವುದು.
   e) ಸಸಿತೋಟ ಮತ್ತು ತೋಟದ ಸಣ್ಣ ಸಸ್ಯಗಳಿಗೆ ಗೊಬ್ಬರವನ್ನು ಹಾಕುವುದು.

4. ತರಕಾರಿಗಳನ್ನು ಮತ್ತು ಹೂ ಗಿಡಗಳ ಬೀಜಗಳನ್ನು ತೋಟದಿಂದ ಆಯುವುದು.
5. ಪಶುಪಾಲನೆ: ಮನೆಯಲ್ಲಿ ಸಾಕುವ ಪ್ರಾಣಿಗಳು ಮತ್ತು ಹಕ್ಕಿಗಳಿಗೆ ಆಹಾರವನ್ನು ನೀಡುವುದು ಮತ್ತು ಸಣ್ಣ ಮರಿಗಳ ರಕ್ಷಣೆಯನ್ನು ಮಾಡುವುದು.

## ಓದಿ-ನೋಡಿ-ತಿಳಿ

1. ಸಸ್ಯಗಳನ್ನು ಮತ್ತು ಅವುಗಳ ಬೇರು, ಕಾಂಡ, ಎಲೆ, ಹೂವು ಮತ್ತು ಹಣ್ಣು ಇತ್ಯಾದಿ ಭಾಗಗಳನ್ನು ಗುರುತಿಸುವುದು.
2. ಬೀಜದಿಂದ ಸಸ್ಯವೊಂದು ಹೇಗೆ ಹಂತಹಂತವಾಗಿ - ಬೇರು, ಕಾಂಡ, ಎಲೆ, ಹೂವು ಮತ್ತು ಹಣ್ಣು - ಬೆಳೆಯುತ್ತದೆ ಎಂದು ನಿಕಟವಾಗಿ ಗಮನಿಸುವುದು.
3. ಮಣ್ಣು, ನೀರು, ಆಹಾರ, ಬೆಳಕು ಮತ್ತು ಗಾಳಿ ಹೇಗೆ ಸಸ್ಯಕ್ಕೆ ಸತ್ವವನ್ನು ನೀಡುತ್ತದೆ ಎಂದು ಗಮನಿಸುವುದು.
4. ಹಕ್ಕಿಗಳು ಮತ್ತು ಪ್ರಾಣಿಗಳಿಂದ ಆಗುವ ಪ್ರಯೋಜನಗಳನ್ನು ಗಮನಿಸುವುದು.

## ವಿಶೇಷ ಸೂಚನೆ

ಮೇಲೆ ಕಾಣಿಸಿರುವ ಅಂಶಗಳಲ್ಲದೆ ಮಕ್ಕಳ ಗಮನಶಕ್ತಿಯನ್ನು ಹೆಚ್ಚಿಸಲು ಹಳ್ಳಿಯಲ್ಲಿರುವ ಗದ್ದೆ ತೋಟಗಳಿಗೆ ಕರೆದುಕೊಂಡು ಹೋಗಲಾಗುತ್ತದೆ.

## ತರಗತಿ

## II

### ಮಾಡಿ-ಕಲಿ

1. ಬೀಜ ಬಿತ್ತನೆ.
2. ಸಣ್ಣ ಪೆಟ್ಟಿಗೆಗಳಲ್ಲಿ ಬೀಜದ ಹಾಸಿಗೆಗಳನ್ನು ತಯಾರಿಸುವುದು.
3. ತೋಟದಲ್ಲಿ ಸಣ್ಣ ಪ್ರಮಾಣದ ಮಣ್ಣಿನ ಹಾಸಿಗೆಗಳನ್ನು ತಯಾರಿಸಲು ಬೇಕಾದ ಅಗೆಯುವುದು, ಗೊಬ್ಬರ ಹಾಕುವುದು ಕುಡುಗೋಲನ್ನು ಬಳಸಿ ಕಳೆ ಮತ್ತು ಅನಗತ್ಯ ಸಸ್ಯಗಳನ್ನು ತೆಗೆದುಹಾಕುವುದು ಇತ್ಯಾದಿ ಕೆಲಸಗಳನ್ನು ಮಾಡಬೇಕು.
4. ತರಕಾರಿ ಮತ್ತು ಹೂವಿನ ಮೊಳಕೆ ಗಿಡಗಳನ್ನು ಮಣ್ಣಿನ ಹಾಸಿಗೆಗಳಿಗೆ ಸ್ಥಳಾಂತರಿಸಬೇಕು. ಅದಕ್ಕೆ ಬೇಕಾದ ಅಂತರದಲ್ಲಿ ಗುರುತನ್ನು ಮಾಡಿಕೊಳ್ಳುವುದು, ನಂತರ ಗಿಡ ನೆಡುವುದು, ಎಚ್ಚರಿಕೆಯಿಂದ ಹಿಡಿದುಕೊಳ್ಳುವುದು, ನೀರು ಹಾಯಿಸುವುದು, ರಕ್ಷಣೆ ನೀಡುವುದು ಇತ್ಯಾದಿ ಕೆಲಸಗಳನ್ನು ಮಾಡುವುದು.
5. ಹಸಿಗೊಬ್ಬರವನ್ನು ತಯಾರಿಸಿಕೊಳ್ಳುವುದು ಮತ್ತು ಸಣ್ಣ ಕುಡುಗೋಲಿನಿಂದ ಕಳೆಯನ್ನು ಕೀಳುವುದು.
6. ಗೊಬ್ಬರದ ಮಿಶ್ರಣ ಮಾಡಿಕೊಳ್ಳುವ ರೀತಿ ಮತ್ತು ಅದನ್ನು ಮಣ್ಣಿನ ಮೇಲ್ಮೈಯಲ್ಲಿ ಹೇಗೆ ಹರಡುವುದು ಎನ್ನುವುದನ್ನು ಕಲಿಯುವುದು.
7. ಗಿಡಗಳಿಗೆ ಅಂಟಿರುವ ಕೀಟಗಳನ್ನು ಹೆಕ್ಕಿ ತೆಗೆಯುವುದು ಮತ್ತು ಗಿಡಗಳ ರೋಗಪೀಡಿತ ಭಾಗಗಳಿಗೆ ಔಷಧಿಯನ್ನು ಸಿಂಪಡಿಸುವ ರೀತಿಯನ್ನು ಕಲಿಯುವುದು.
8. ಬೀಜಗಳಿಂದಷ್ಟೇ ಅಲ್ಲದೆ ಸಸ್ಯವನ್ನು ಪ್ರಸಾರ ಮಾಡುವ ಬಗೆ ಹೇಗೆ ಎನ್ನುವುದನ್ನು ಕಲಿಯುವುದು. ಉದಾಹರಣೆಗೆ ಕೊಂಬೆ ಕಸಿ ಮಾಡುವ ಬಗೆ - ಅದು ದಿನದಿಂದ ದಿನಕ್ಕೆ ಹೇಗೆ ಬೆಳೆಯುತ್ತಿದೆ ಎನ್ನುವುದನ್ನು ಗಮನಿಸುವುದು.
9. ಪಶುಪಾಲನೆ: ಮನೆಯಲ್ಲಿ ಸಾಕುಪ್ರಾಣಿಗಳನ್ನಿಟ್ಟುಕೊಂಡು ಅವುಗಳ ದಿನನಿತ್ಯದ ಅಭ್ಯಾಸಗಳನ್ನು ನಿಕಟವಾಗಿ ಗಮನಿಸುವುದು.
10. ಕಲೆ ಮತ್ತು ಕರಕೌಶಲ್ಯ: ಮಕ್ಕಳು ಕೆಲವು ನಿರ್ದಿಷ್ಟ ಜ್ಯಾಮಿತಿ ಆಕಾರಗಳನ್ನು ತೋಟದಲ್ಲಿ ಮೂಡಿಸಬೇಕು. ಹೂಗುಚ್ಛಗಳನ್ನು ಮತ್ತು ಮಾಲೆಗಳನ್ನು ಮಾಡಲು ಕಲಿಯಬೇಕು. ಬಿದಿರಿನ ಎಳೆಗಳಿಂದ ಹೂಗಿಡಗಳಿಗೆ ಮತ್ತು ಬಳ್ಳಿಗಳಿಗೆ ತೂಗುಮಡಕೆಗಳನ್ನು ಮಾಡಬೇಕು.

## ಓದಿ-ನೋಡಿ-ತಿಳಿ

1. ಸಸಿತೋಟಕ್ಕೆ ಸೂಕ್ತವಾದ ಜಾಗವನ್ನು ಹೇಗೆ ಆಯ್ದುಕೊಳ್ಳಬೇಕು ಮತ್ತು ಸಸಿತೋಟವನ್ನು ಹೇಗೆ ತಯಾರಿ ಮಾಡಬೇಕು.
2. ಯಾವ ರೀತಿಯ ಮಣ್ಣು ಮತ್ತು ಗೊಬ್ಬರ ಸೂಕ್ತವಾಗಿರಬಲ್ಲದು.
3. ಯಾವುದು ಉತ್ತಮ ಬೀಜ ಮತ್ತು ಯಾವುದು ಅಲ್ಲ ಎನ್ನುವುದನ್ನು ಗುರುತಿಸುವುದು.
4. ಬೀಜದ ಗುಣಮಟ್ಟ ಮೊಳಕೆಯೊಡೆಯುವ ಪ್ರಕ್ರಿಯೆಯ ಮೇಲೆ ಯಾವ ರೀತಿಯ ಪ್ರಭಾವವನ್ನು ಬೀರುತ್ತದೆ ಎಂದು ಗಮನಿಸುವುದು.
5. ಸಸ್ಯದ ವಿವಿಧ ಭಾಗಗಳು ಕಾರ್ಯ ನಿರ್ವಹಿಸುವ ರೀತಿಯನ್ನು ಅರಿಯುವುದು:

   (a) ಬೇರು - ಮಣ್ಣಿನಲ್ಲಿ ಸ್ಥಿರವಾಗಿ ನೆಲೆಯೂರಲು ಬಲ ನೀಡುತ್ತದೆ, ಮತ್ತು ಸಸ್ಯ ಬೆಳೆಯಲು ಬೇಕಾದ ಸತ್ವವನ್ನು ಹೀರಿಕೊಳ್ಳುತ್ತದೆ.
   (b) ಕಾಂಡ - ಸತ್ವವನ್ನು ಮೇಲ್ಮುಖವಾಗಿ ಹೀರಿಕೊಂಡು ಗಿಡ ಬೆಳೆಯಲು ಅನುವು ಮಾಡಿಕೊಡುತ್ತದೆ.

   **ವಿಶೇಷ ಸೂಚನೆ**

   ಹೀರಿಕೊಂಡ ಸತ್ವ ಹೇಗೆ ಮೇಲ್ಮುಖವಾಗಿ ಚಲಿಸುತ್ತದೆ ಎಂದು ತೋರಿಸಲು ತರಗತಿಯಲ್ಲಿ ಕೆಂಪುಶಾಯಿ ಪ್ರಯೋಗವನ್ನು ನಡೆಸಬಹುದು.

6. ಸಸಿ ನೆಡಲು ತಕ್ಕ ಕಾಲ - ಮಧ್ಯಾಹ್ನದ ಬಿಸಿಲು ಇಳಿದ ನಂತರ. ನೀರು ಹಾಯಿಸಲು ತಕ್ಕ ಕಾಲ - ಬೆಳಗಿನ ಹೊತ್ತು ಹಾಗೂ ಮಧ್ಯಾಹ್ನದ ಬಿಸಿಲು ಇಳಿದ ಮೇಲೆ.
7. ಬೀಜ ಸಂಗ್ರಹ - ಎಲ್ಲಿ ಮತ್ತು ಹೇಗೆ.

## ವಿಶೇಷ ಸೂಚನೆ

ತೋಟಗಾರಿಕೆಯಲ್ಲಿ ಮುಖ್ಯವಾದ ಪ್ರಕ್ರಿಯೆಗಳು ಚಾಲ್ತಿಯಲ್ಲಿರುವಾಗ ಮಕ್ಕಳು ಗಮನಿಸಲು ಸಾಧ್ಯವಾಗುವಂತೆ ಅವರನ್ನು ತೋಟದ ಸುತ್ತ ಕರೆದುಕೊಂಡು ಹೋಗಲಾಗುವುದು.

## ತರಗತಿ

**III**

ಮಾಡಿ-ಕಲಿ

ವಿಶೇಷ ಸೂಚನೆ

ಈ ಹಂತದಲ್ಲಿ ಹೂವಿನ ಮತ್ತು ತರಕಾರಿ ತೋಟದಲ್ಲಿನ ಎಲ್ಲಾ ಕೆಲಸಗಳನ್ನು ವಿದ್ಯಾರ್ಥಿಗಳೇ ಮಾಡಬೇಕು. ಚಿಕ್ಕದಾದ ಸನಿಕೆ, ಕವಲು, ಗುದ್ದಲಿ, ಇತ್ಯಾದಿ ಉಪಕರಣಗಳ ಬಳಕೆಯ ಪರಿಚಯವೂ ಸಹ ಆಗುತ್ತದೆ.

1. ಹಿಂದಿನ ಎರಡು ತರಗತಿಗಳಲ್ಲಿ ನಡೆದ ಎಲ್ಲಾ ಪ್ರಕ್ರಿಯೆಗಳ ಪುನರಾವರ್ತನೆ ಮಾಡಬೇಕು.
2. ಸಸಿಗಳನ್ನು ಕುಂಡದಲ್ಲಿ ನೆಡಬೇಕು.
3. ಕುಂಡಗಳಲ್ಲಿ ತುಂಬಲು ಎಲೆಗೊಬ್ಬರ ಮತ್ತು ಜೈವಿಕ ಮಿಶ್ರಗೊಬ್ಬರಗಳನ್ನು ತಯಾರಿಸಬೇಕು.
4. ಕಸಿ ಮಾಡಿದ ರೆಂಬೆಗಳನ್ನು ನೆಟ್ಟು ಸಸ್ಯಗಳನ್ನು ಬೆಳೆಸುವ ಪ್ರಕ್ರಿಯೆಯಲ್ಲಿ ಅವುಗಳ ಬೆಳವಣಿಗೆಯನ್ನು ಗಮನಿಸುತ್ತಾ ಇರಬೇಕು.
5. ಕಂಬಳಿಹುಳ ಚಿಟ್ಟೆಯಾಗಿ ಮಾರ್ಪಡುವ ನಾಲ್ಕು ಹಂತಗಳನ್ನು ಗಮನಿಸಲು ಕಂಬಳಿಹುಳಗಳನ್ನು ಸಾಕಬೇಕು.
6. ಮಧ್ಯಂತರಗಳಲ್ಲಿ ಹಳೆಯ ಹೂವು ಮತ್ತು ತರಕಾರಿ ಹಾಸುಗಳನ್ನು ಹಸಿಗೊಬ್ಬರವಾಗಿ ಪರಿವರ್ತಿಸಬೇಕು.
7. ಗೊಬ್ಬರ ಹಾಕಿದ ಮತ್ತು ಹಾಕಿಲ್ಲದ ಕುಂಡಗಳಲ್ಲಿ ಸಸಿಗಳು ಹೇಗೆ ಬೇರೆ ಬೇರೆ ರೀತಿಯಲ್ಲಿ ಬೆಳೆಯುತ್ತವೆ ಎನ್ನುವುದನ್ನು ಗಮನಿಸಬೇಕು.
8. ಪಶುಪಾಲನೆ. ಪ್ರಾಣಿಗಳನ್ನು ಸಾಕುವುದು.

## ಓದಿ-ನೋಡಿ ತಿಳಿ

1. ಮೊಳಕೆಯೊಡೆಯುತ್ತಿರುವ ಬೀಜಗಳ ಬಗೆಗಿನ ಅಧ್ಯಯ£:

(a) ಭ್ರೂಣ.

(b) ಮೊಳಕೆ ಎಲೆಗಳು.

ಸಸ್ಯಭ್ರೂಣ ಮುಂದೆ ಹೇಗೆ ಪ್ರಥಮಕಾಂಡವಾಗಿ ಮತ್ತು ಮೂಲಬೇರಾಗಿ ಬೆಳೆಯುತ್ತದೆ?

ಮೊಳಕೆ ಎಲೆಗಳಲ್ಲಿ ಏನಿದೆ? ಪ್ರಥಮಕಾಂಡ ಮೇಲ್ಮುಖವಾಗಿ ಮತ್ತು ಮೂಲ ಬೇರು ಕೆಳಮುಖವಾಗಿ ಹೇಗೆ ಬೆಳೆಯುತ್ತದೆ? ಸಸ್ಯ ಬೆಳೆಯುತ್ತಾ ಹೋದಂತೆಲ್ಲಾ ಈ ಮೊಳಕೆ ಎಲೆಗಳು ಏನಾಗುತ್ತವೆ?

2. ಬೇರುಗಳ ಬಗೆಗಿನ ಅರಿವು:

   (a) ತಾಯಿಬೇರು.

   (b) ಸಣ್ಣಬೇರು.

3. ಕಾಂಡ ಹೇಗೆ ತೊಗಟೆ ಮತ್ತು ಮರವಾಗಿ, ಗೆಣ್ಣು ಮತ್ತು ಉಪಗೆಣ್ಣುಗಳಾಗಿ, ಮೊಗ್ಗು, ರೆಂಬೆ ಮತ್ತು ಎಲೆಗಳಾಗಿ ವಿಭಾಗವಾಗುತ್ತಾ ಹೋಗುತ್ತದೆ? ಬೇರು ಮತ್ತು ಕಾಂಡದ ನಡುವಿನ ವ್ಯತ್ಯಾಸವೇನು?
4. ಚಿಟ್ಟೆ ಮತ್ತು ಮಿಡತೆಗಳ ಹುಟ್ಟು, ಬೆಳವಣಿಗೆ ಮತ್ತು ಸಾವು.
5. ಬೆಳೆನಾಶಕ ಕೀಟಗಳು

   ಕಾಂಡ ಮತ್ತು ಚಿಗುರುಗಳನ್ನು ಕೊರೆಯುವ ಕೀಟಗಳು. ಅವುಗಳನ್ನು ನಿಯಂತ್ರಿಸುವ ಬಗೆ.

6. ಕುಂಡಗಳನ್ನು ತುಂಬುವ ಮಿಶ್ರಣ:

   (a) ಮಿಶ್ರಣದಲ್ಲಿ ಏನೆಲ್ಲಾ ಇರಬೇಕು?

   (b) ಎಲೆ ಗೊಬ್ಬರದ ಗುಣಮಟ್ಟ ಮತ್ತು ಮಿಶ್ರಣದಲ್ಲಿ ಅದರ ಪ್ರಮಾಣ.

7. ಗೊಬ್ಬರದ ಅವಶ್ಯಕತೆ ಮತ್ತು ಅವುಗಳು ನಿರ್ವಹಿಸುವ ಕಾರ್ಯಗಳು.

   ಕೃತಕ ಗೊಬ್ಬರಗಳ ಬಳಕೆ.

8. ಮಲವಿಸರ್ಜನೆ ಮತ್ತು ಗೊಬ್ಬರವಾಗಿ ಅದರ ಮೌಲ್ಯ.
9. ಹಾಲಿನ ವಿಭಿನ್ನ ಉತ್ಪನ್ನಗಳ ಅರಿವು.

## ತರಗತಿ

## IV

ಮಾಡಿ-ಕಲಿ

1. ತರಕಾರಿ ತೋಟದಲ್ಲಿ ಸೋರೆಕಾಯಿ, ಅವರೆ, ಬದನೆಕಾಯಿ ಇತ್ಯಾದಿ ಆಯಾಯ ಪ್ರದೇಶಗಳ ಮಳೆಗಾಲದ ತರಕಾರಿಗಳನ್ನು ಬೆಳೆಯುವುದು.

2. ಸಸಿಗಳನ್ನು ತೋಟದ ನಿರ್ದಿಷ್ಟ ಜಾಗಕ್ಕೆ ಸ್ಥಳಾಂತರಿಸಲು ಸಿದ್ಧತೆಯನ್ನು ಮಾಡಿಕೊಳ್ಳುವುದು.
3. ನೆಲಕ್ಕೆ ಗೊಬ್ಬರ ಸೇರಿಸುವುದು.
4. ನೀರು ಹಾಯಿಸಬೇಕಾದ ಭಾಗವನ್ನು ಹಸನು ಮಾಡಿಕೊಂಡು ಸಸಿಗಳನ್ನು ಸ್ಥಳಾಂತರಿಸಿದ ತಕ್ಷಣ ಮತ್ತು ನಂತರದಲ್ಲಿ ನೀರು ಹಾಯಿಸುವುದು.
5. ತರಕಾರಿ ಗಿಡವನ್ನು ನೆಟ್ಟಿರುವ ಮಣ್ಣಿನ ಮೇಲ್ಮೈöÊಗೆ ಅಮೋನಿಯಮ್ ಸಲ್ಫೇಟ್, ನಿಸಿಫ್ರೋಸ್ ಮತ್ತು ಸೋಡಾದ ನೈಟ್ರೇಟ್ ಇತ್ಯಾದಿ ಗೊಬ್ಬರಗಳನ್ನು ಹಾಕಿ ಹಸನು ಮಾಡುವುದು.
6. ಗೊಬ್ಬರ, ಸುಣ್ಣ ಮತ್ತು ಮರಳಿನ ಮಿಶ್ರಣದ ಜೊತೆಗೆ ಮತ್ತು ಇಲ್ಲದೆಯೇ ಸಣ್ಣ ನಾಳದ ಮತ್ತು ಜಿನುಗಿಸುವಿಕೆಯ ಪ್ರಯೋಗಗಳನ್ನು ನಡೆಸುವುದು.
7. ವಿವಿಧ ಬಗೆಯ ನೇಗಿಲುಗಳ ಬಗೆಗಿನ ಅರಿವು:

   (a) ಮರದ ನೇಗಿಲು.
   (b) ಕಬ್ಬಿಣದ ನೇಗಿಲುಗಳು - ಮಳೆಗಾಲದ ನೇಗಿಲು, J.A.T., Kokan and Ridging. ಗದ್ದೆಗಳಲ್ಲಿ ಆ ನೇಗಿಲುಗಳನ್ನು ಬಳಸುತ್ತಿರುವಾಗ ನೋಡಿ ತಿಳಿಯಲು ವಿದ್ಯಾರ್ಥಿಗಳನ್ನು ಕರೆದುಕೊಂಡು ಹೋಗಬೇಕು.

8. ಮಣ್ಣು ರೂಪುಗೊಳ್ಳುವ ಬಗೆಯನ್ನು ನೋಡಿ ತಿಳಿಯಲು ವಿದ್ಯಾರ್ಥಿಗಳನ್ನು ಹತ್ತಿರದ ಬೆಟ್ಟಗಳಿಗೆ ಕರೆದುಕೊಂಡು ಹೋಗಬೇಕು.
9. ಕೋಳಿ ಸಾಕಾಣಿಕೆ:

   ಕೋಳಿಗಳಿಗೆ ಆಹಾರ ನೀಡುವುದು; ಮೊಟ್ಟೆ ಇಡುವ ಪ್ರಕ್ರಿಯೆಯನ್ನು ಗಮನಿಸುವುದು; ಮೊಟ್ಟೆಗಳನ್ನು ಸಂಗ್ರಹಿಸುವುದು; ಕೋಳಿ ಗೂಡುಗಳನ್ನು ಮತ್ತು ಅವುಗಳು ಓಡಾಡುವ ಭಾಗಗಳನ್ನು ಶುದ್ಧಗೊಳಿಸುವುದು; ಕೋಳಿ ಮರಿಗಳನ್ನು ಸಾಕುವುದು.

## ಓದಿ-ನೋಡಿ-ತಿಳಿ

1. ಗದ್ದೆ ಬೆಳೆಗಳನ್ನು ಗುರುತಿಸುವುದು. ಬಿತ್ತನೆ ಸಮಯದ ಆಧಾರದ ಮೇಲೆ ರಬಿ ಮತ್ತು ಖರೀಫ್ ಎಂಬ ಎರಡು ರೀತಿಯ ಬೆಳೆಗಳಾಗಿ ವಿಂಗಡಿಸಿಕೊಳ್ಳಬೇಕು.
2. ಮಣ್ಣಿನ ಬಗೆಗಿನ ಅರಿವನ್ನು ಬೆಳೆಸಿಕೊಳ್ಳುವುದು.

(a) ಮಣ್ಣು ರೂಪುಗೊಳ್ಳುವ ಪ್ರಕ್ರಿಯೆ - ನೀರು, ಗಾಳಿ, ಶಾಖ ಇತ್ಯಾದಿ ಪ್ರಕೃತಿಯ ಶಕ್ತಿಗಳ ಮೂಲಕ ಕಲ್ಲುಬಂಡೆಗಳು ಛಿದ್ರವಾಗುವ ಬಗೆ.

3. ಸುತ್ತಮುತ್ತ ಇರುವ ಮಣ್ಣಿನ ಬಗೆಗಳನ್ನು ಗುರುತಿಸುವುದು.
4. ಅವುಗಳನ್ನು ಮರಳುಮಣ್ಣು, ಕಳಿಮಣ್ಣು, ಜೇಡಿಮಣ್ಣು, ಇತ್ಯಾದಿಯಾಗಿ ವಿಂಗಡಿಸುವುದು.
5. ಅವುಗಳನ್ನು ಕೆಳಗಿನ ಅಂಶಗಳಿಗೆ ತಕ್ಕಂತೆ ಗುರುತಿಸುವುದು:

(a) ಸ್ಪರ್ಶ, ಕಣರಚನೆ, ಬಣ್ಣ ಮತ್ತು ತೂಕ.
(b) ಪ್ರತಿಯೊಂದರ ಯಾಂತ್ರಿಕ ವಿಶ್ಲೇಷಣೆ.
(c) ಪ್ರತಿಯೊಂದರ ಭೌತಗುಣಗಳು.
(d) ಮಣ್ಣಿನ ಸ್ಪರ್ಶ ಮತ್ತು ರಚನೆಗಳ ನಡುವಿನ ಸಹ ಸಂಬಂಧ. ಪ್ರತಿಯೊಂದು ಮಣ್ಣಿನ ಹೀರುವ, ಸೋಸುವ, ಮತ್ತು ಲೋಮನಾಳಕ್ರಿಯೆಯ ಮೇಲೆ ಗಾಳಿ ಯಾವ ರೀತಿಯ ಪರಿಣಾಮ ಬೀರುತ್ತದೆ.
(e) ಮೇಲಿನ ಎಲ್ಲಾ ಅಂಶಗಳ ಆಧಾರದ ಮೇಲೆ ಯಾವ ಮಣ್ಣು ಯಾವ ಬೆಳೆಗೆ (ರಬಿ ಮತ್ತು ಖರೀಫ್) ಮತ್ತು ತೋಟದ ಬೆಳೆಗೆ ಸೂಕ್ತ ಎಂದು ನಿರ್ಧರಿಸುವುದು.

6. ಮಣ್ಣಿನ ತೇವಾಂಶದ ರೂಪಗಳು.
7. ಮಣ್ಣಿನ ತೇವಾಂಶವನ್ನು ನಿಯಂತ್ರಿಸುವ ಬಗೆ.
8. ಗೊಬ್ಬರಗಳ ಅವಶ್ಯಕತೆ ಮತ್ತು ಅವುಗಳು ನಿರ್ವಹಿಸುವ ಕಾರ್ಯ. ಕೃತಕ ಗೊಬ್ಬರಗಳನ್ನು ಯಾವಾಗ, ಹೇಗೆ ಮತ್ತು ಎಷ್ಟು ಪ್ರಮಾಣದಲ್ಲಿ ಹಾಕಬೇಕು ಎನ್ನುವುದರ ಬಗ್ಗೆ ಅರಿವು.

## ತರಗತಿ

## V

## ಮಾಡಿ-ಕಲಿ

1. ಕಳೆ ಮತ್ತು ಅದನ್ನು ಕೀಳುವಿಕೆ.
2. ಮರದ ಮತ್ತು ಕಬ್ಬಿಣದ ನೇಗಿಲುಗಳು. ಅವುಗಳು ನಿರ್ವಹಿಸುವ ಕಾರ್ಯವನ್ನು ಗದ್ದೆಗಳಲ್ಲಿ ಬಳಸುವಾಗ ಗಮನಿಸಬೇಕು.

3. ಉತ್ತ ನೆಲದ ಹೆಂಟೆಗಳನ್ನು ಹೊಡೆಯುವಿಕೆ ಅಥವಾ ಕುಂಟೆ ಹೊಡೆಯುವಿಕೆ (bakharing). ಉಳುವ ಮತ್ತು ಕುಂಟೆ ಹೊಡೆಯುವ ನಡುವೆ ಇರುವ ವ್ಯತ್ಯಾಸಗಳನ್ನು ಗಮನಿಸಬೇಕು.
4. ತರಕಾರಿಗಳನ್ನು ಬೆಳೆಯುವುದು. ಮಳೆಗಾಲದ ತರಕಾರಿಗಳ ಜೊತೆಗೆ ಹೂಕೋಸು, ಲೆಟಿಸ್, ಎಲೆಕೋಸು, ನೋಲ್ಕೋಲ್, ಹುರುಳಿಕಾಯಿ, ಟೊಮೆಟೊ, ಬಟಾಣಿ ಇತ್ಯಾದಿ ಚಳಿಗಾಲದ ತರಕಾರಿಗಳನ್ನು ತೋಟದಲ್ಲಿ ಬೆಳೆಯುವುದು.
5. ಹತ್ತಿ, ಜೋಳ, ತೊಗರಿ, ಕಡಲೆ ಬೇರುಗಳ ಬಗ್ಗೆ ಅರಿವು.
6. ಮೂಲಂಗಿ, ಕ್ಯಾರೆಟ್ ಬೇರುಗಳ ಮತ್ತು ಆಲೂಗಡ್ಡೆ, ಶ್ಯಾಮಗಡ್ಡೆ, ಮತ್ತು ಶುಂಠಿ ಕಾಂಡಗಳ ತುಂಡುಗಳನ್ನು ನೆಟ್ಟು ಬೇರು ಮತ್ತು ಕಾಂಡುಗಳನ್ನು ಗುರುತಿಸುವುದು.
7. ವಿದ್ಯಾರ್ಥಿಗಳು ವಿವಿಧ ಬಗೆಯ ಎಲೆಗಳನ್ನು ಸಂಗ್ರಹಿಸಿ ಮೊದಲು ಆ ಎಲೆನಾಳಗಳ ಆಧಾರದ ಮೇಲೆ ನಂತರ ಸರಳ ಹಾಗೂ ಸಂಕೀರ್ಣ ಎಲೆಗಳು ಎಂಬ ಆಧಾರದ ಮೇಲೆ ವಿಂಗಡಿಸುವುದು.
8. ವಿದ್ಯಾರ್ಥಿಗಳು ತೋಟದಲ್ಲಿ ಹೂವುಗಳು ಅರಳುವ ಸಮಯವನ್ನು ಗಮನಿಸಿ ಬರೆದಿಟ್ಟುಕೊಳ್ಳುವುದು.
9. ತೋಟದಲ್ಲಿ ಸಿಗುವ ಕಳೆ ಮತ್ತು ತರಕಾರಿ ತ್ಯಜ್ಯಾಗಳನ್ನು ಸಂಗ್ರಹಿಸಿ ಗೊಬ್ಬರದ ಮಿಶ್ರಣವನ್ನು ಮಾಡಿಕೊಳ್ಳುವುದು.
10. ತೋಟದಲ್ಲಿ ಪ್ರಯೋಗಗಳಿಗೆಂದೇ ಸಣ್ಣ ಸಣ್ಣ ಭಾಗಗಳನ್ನು ಮೀಸಲಿಟ್ಟು, ಗೊಬ್ಬರ ಹಾಕುವುದು, ಕಳೆ ಕೀಳುವುದು ಮತ್ತು ಹಸಿಗೊಬ್ಬರವನ್ನು ಮಾಡುವ ಪ್ರಕ್ರಿಯೆಗಳ ಪರಿಣಾಮಗಳನ್ನು ವಿದ್ಯಾರ್ಥಿಗಳು ನಿಕಟವಾಗಿ ಗಮನಿಸುವುದು.

    (a) ಮಿಕ್ಕೆಲ್ಲ ವಸ್ತುಗಳನ್ನು ಏಕರೂಪವಾಗಿ ಒದಗಿಸಿ, ಒಂದು ಭಾಗದಲ್ಲಿ ಗೊಬ್ಬರ ಹಾಕಿ ಮತ್ತು ಇನ್ನೊಂದರಲ್ಲಿ ಗೊಬ್ಬರ ಹಾಕದೇ ಅದೇ ಬೆಳೆ ಹೇಗೆ ಬೇರೆ ಬೇರೆ ರೀತಿಯಲ್ಲಿ ಬೆಳೆಯುತ್ತದೆ ಎನ್ನುವುದನ್ನು ಗಮನಿಸುವುದು.
    (b) ಅದೇ ರೀತಿ ಒಂದರಲ್ಲಿ ಕಳೆ ಕಿತ್ತು ಮತ್ತು ಇನ್ನೊಂದರಲ್ಲಿ ಕಳೆ ಕೀಳದೇ ಪರಿಣಾಮಗಳನ್ನು ಗಮನಿಸುವುದು.
    (c) ಹಾಗೆಯೇ ಒಂದರಲ್ಲಿ ಕಳೆಕಿತ್ತು ಮತ್ತು ಮಣ್ಣನ್ನು ಸಡಲಿಸಿ ಇನ್ನೊಂದರಲ್ಲಿ ಬರೀ ಕಳೆ ಕಿತ್ತು ಪರಿಣಾಮಗಳನ್ನು ಗಮನಿಸುವುದು.

## ಓದಿ-ನೋಡಿ-ತಿಳಿ

1. ವಿವಿಧ ಬಗೆಯ ಕಳೆಗಳು.
2. ಕಳೆ ಕೀಳುವಿಕೆಯ ಅವಶ್ಯಕತೆ. ಯಾವಾಗ ಮತ್ತು ಹೇಗೆ ಕೀಳುವುದು ಎಂಬುದರ ಅರಿವು.

3. ಬೆಳೆಯ ಸಾಗುವಳಿಯಿಂದ ಕಳೆಯ ಮೇಲಾಗುವ ಪರಿಣಾಮ:

   (a) ಸಾರ್ವಕಾಲಿಕ ಕಳೆಗಳ ಮೇಲೆ ಆಳವಾದ ಪರಿಣಾಮ.
   (b) ವಾರ್ಷಿಕ ಕಳೆಗಳ ಮೇಲೆ ಮೇಲ್ಮಟ್ಟದ ಪರಿಣಾಮ.

4. ಮಳೆ ಬಿದ್ದ ಮೇಲೆ ಹಸಿಗೊಬ್ಬರ ಮಾಡುವುದರ ಉಪಯೋಗ.

   (a) ತೇವಾಂಶವನ್ನು ಮಣ್ಣು ಹೀರಿಕೊಂಡು ಉಳಿಸಿಕೊಳ್ಳುವುದರಿಂದ ರಬಿ ಬೆಳೆಗಳ ಮೇಲಾಗುವ ಅದರ ಪರಿಣಾಮ.
   (b) ಕಳೆಗಳ ಮೇಲಾಗುವ ಪರಿಣಾಮ.

5. ಹಳ್ಳಿಗಾಡಿನ ಮತ್ತು ಕಬ್ಬಿಣದ ನೇಗಿಲುಗಳ ನಡುವಿನ ಹೋಲಿಕೆ. ಈ ಕೆಳಗಿನ ವ್ಯತ್ಯಾಸಗಳನ್ನು ಗಮನಿಸಬೇಕು.

   (a) ಹೇಗೆ ಮಾಡಲ್ಪಟ್ಟಿವೆ.
   (b) ಹೇಗೆ ಕಾರ್ಯ ನಿರ್ವಹಿಸುತ್ತವೆ.
   (c) ಹಳ್ಳಿಗಾಡಿನ ನೇಗಿಲಿಗಿಂತ ಮಳೆಗಾಲದ ನೇಗಿಲು ಯಾವ ರೀತಿಯಲ್ಲಿ ಉತ್ತಮವಾಗಿದೆ.

6. ಉತ್ತ ಮೇಲೆ ಕುಂಟೆ ಹೊಡೆಯಲು ಬಳಸುವ ಸಾಧನ ಹಲುಬೆ (bakhar) ಹೇಗೆ ಕೆಲಸ ಮಾಡುತ್ತದೆ. ನೇಗಿಲು ಮತ್ತು ಹಲುಬೆಗಳ ನಡುವಿನ ವ್ಯತ್ಯಾಸವೇನು. ಮಳೆಯಿಂದ ವಿರಾಮ ಸಿಕ್ಕ ಕಾಲದಲ್ಲಿ ಕುಂಟೆ ಹೊಡೆಯುವುದರಿಂದ ರಬಿ ಬೆಳೆ ಬೆಳೆದ ಭೂಮಿಯ ಮೇಲೆ ಯಾವ ರೀತಿಯ ಪರಿಣಾಮಗಳಾಗುತ್ತವೆ.
7. ಬೇರುಗಳು ರೂಪುಗೊಳ್ಳುವ ಬಗೆ ಮತ್ತು ಅವುಗಳ ಎರಡು ವಿಧ: ತಾಯಿಬೇರು ಮತ್ತು ಸಣ್ಣ ಬೇರು.
8. ಬೇರುಗಳ ಮಾರ್ಪಾಡು ಮತ್ತು ಅವುಗಳ ಪರಿಭಾಷೆಯ ಅರಿವು.
9. ಮೂಲಂಗಿ, ಸಿಹಿ ಗೆಣಸು, ಕ್ಯಾರೆಟ್ ಮುಂತಾದವುಗಳ ಬೇರುಗಳನ್ನು ಮತ್ತು ಆಲೂಗಡ್ಡೆ, ಶ್ಯಾಮಗಡ್ಡೆ, ಕೆಂಪುಸೊಪ್ಪು, ಶುಂಠಿ ಮುಂತಾದುವುಗಳ ಕಾಂಡಗಳ ನಡುವಿನ ವ್ಯತ್ಯಾಸಗಳು.
10. ಆಲದ ಮರ, ಜೋಳ, ಗೋಧಿ ಮತ್ತು ಇತರ ಬಿಳಲುಗಳಲ್ಲಿರುವ ಅಪಸ್ಥಾನಿಕ ಬೇರುಗಳು.
11. ಹೂವಿನ ಭಾಗಗಳು, ಬಣ್ಣ, ವಾಸನೆ ಮತ್ತು ಹೂಬಿಡುವ ಸಮಯದ ಬಗೆಗಿನ ಅರಿವು.
12. ಗೊಬ್ಬರಗಳನ್ನು ತಯಾರಿಸಿಕೊಳ್ಳುವ ಬಗೆ. ಸಗಣಿ ಗೊಬ್ಬರ ಮತ್ತು ಗಂಜಲ ಗೊಬ್ಬರ.

## ವಿಶೇಷ ಸೂಚನೆ

ವಿದ್ಯಾರ್ಥಿಗಳು ಗದ್ದೆಗಳಲ್ಲಿ ಕೆಲಸ ಮಾಡುತ್ತಾ ಬೆಳೆ ಬೆಳೆಯುವ ಎಲ್ಲಾ ಪ್ರಕ್ರಿಯೆಗಳಲ್ಲಿ ಭಾಗವಹಿಸಬೇಕು.

## ಮಾಡಿ-ಕಲಿ

1. ಎತ್ತುಗಳನ್ನು ನೇಗಿಲಿಗೆ ಮತ್ತು ಕುಂಟೆ ಹೊಡೆಯುವ ನೊಗಕ್ಕೆ ಹೂಡುವುದು ಮತ್ತು ನೇರವಾಗಿ ಸಾಗುವಂತೆ ನಿಯಂತ್ರಿಸುವುದು.
2. ಆಯಾ ಪ್ರದೇಶಕ್ಕೆ ತಕ್ಕಂತೆ ಸೂಕ್ತ ಬೆಳೆಗಳನ್ನು ಆರಿಸಿಕೊಳ್ಳಬೇಕು. ಕೆಲವು ಸ್ಥಳೀಯ ರಬಿ ಮತ್ತು ಖರೀಫ್ ಬೆಳೆಗಳನ್ನು ಬೆಳೆಯಲು ಭೂಮಿಯನ್ನು ಹದ ಮಾಡಿಕೊಳ್ಳುವುದರಿಂದ ಹಿಡಿದು ಧಾನ್ಯದ ಒಕ್ಕಣೆ, ಶುಚಿ ಮಾಡುವ ತನಕ ನಿಕಟವಾಗಿ ಗಮನಿಸುತ್ತಾ ಭಾಗವಹಿಸಬೇಕು.
3. ಗದ್ದೆಯಲ್ಲಿ ಮತ್ತು ತೋಟದಲ್ಲಿ ಬಳಸುವ ಸಲಿಕೆ, ಬೀಜ ಕಸರತ್ತುಗಳು, ಉಳುಮೆ ನೇಗಿಲು ಮತ್ತು ಭೂಮಿಯನ್ನು ಸಡಿಲಗೊಳಿಸುವ ಯಂತ್ರ ಇತ್ಯಾದಿ ಎಲ್ಲಾ ಉಪಕರಣಗಳನ್ನು ಉಪಯೋಗಿಸುವ ರೀತಿಗಳನ್ನು ತಿಳಿದುಕೊಳ್ಳಬೇಕು.
4. ಮೆಣಸಿನಕಾಯಿ, ಕಬ್ಬು, ಆಲೂಗಡ್ಡೆ, ಶ್ಯಾಮಗಡ್ಡೆ, ಶುಂಠಿ, ಅರಿಶಿನ, ಬಟಾಣಿ ಇತ್ಯಾದಿ ತೋಟದ ಬೆಳೆಗಳನ್ನು ಬೆಳೆಯಬೇಕು.
5. ಸಗಣಿಯನ್ನು ಗುಂಡಿಗಳಲ್ಲಿ ಮತ್ತು ಗಂಜಲದ ಮಣ್ಣನ್ನು ಆಯಾ ವಿಧಾನದಲ್ಲಿ ಶೇಖರಿಸಿ ಇಡುವ ಬಗ್ಗೆ ಅರಿಯಬೇಕು.
6. ಹಸಿರು ಗೊಬ್ಬರದ ಸಲುವಾಗಿ ಸೆಣಬಿನ ನಾರನ್ನು (sann hemp) ಬೆಳೆಯುವುದು.
7. ಗದ್ದೆಗಳಿಗೆ ಸಗಣಿ ಮತ್ತು ಗಂಜಲದ ಮಣ್ಣಿನ ಗೊಬ್ಬರವನ್ನು ಹಾಕುವುದು.
8. ಸೆಣಬಿನ ನಾರಿನ ಹಸಿರು ಗೊಬ್ಬರವನ್ನು ತೋಟದ ಬೆಳೆಗಳಿಗೆ ಮತ್ತು ಸ್ಥಳೀಯವಾಗಿ ಬೆಳೆಯುವ ಭತ್ತದ ಗದ್ದೆಗಳಿಗೆ ಹಾಕುವುದು.
9. ದ್ರವರೂಪದ ಗೊಬ್ಬರಗಳ ಬಳಕೆ.
10. ಗದ್ದೆಗಳಲ್ಲಿ ಸರದಿಯ ಮೇಲೆ ಬೆಳೆ ಬೆಳೆಯುವ ರೀತಿಯನ್ನು ವಿದ್ಯಾರ್ಥಿಗಳಿಗೆ ತೋರಿಸುವುದು.
11. ಹೂವುಗಳ ಸಂಗ್ರಹ ಮತ್ತು ಅವುಗಳ ಭಾಗಗಳ ಆಧಾರದ ಮೇಲೆ ವಿಂಗಡನೆ. ಯಾವ ಕೀಟಗಳು ಹೂವುಗಳ ಬಳಿಸಾರಿ ಬರುತ್ತವೆ ಮತ್ತು ಏನು ಮಾಡುತ್ತವೆ?
12. ತೋಟಗಾರಿಕೆ.

### ಸಸ್ಯಗಳ ಸಂತಾನೋತ್ಪತ್ತಿ:

(a) ಸೀಬೆ - ‘ಘೂಟಿ (Ghootee)’ ವಿಧಾನದಿಂದ.
(b) ಕಿತ್ತಲೆ ಮತ್ತು ಗುಲಾಬಿ - ಮೊಗ್ಗನ್ನು ಕಸಿ ಮಾಡುವ ವಿಧಾನದಿಂದ.
(c) ಮಾವು - ಬೆಳೆಯುತ್ತಿರುವ ರೆಂಬೆಯನ್ನು ತಾಯಿಮರದಿಂದ ಕತ್ತರಿಸದೆ ಬೇರೊಂದು ಗಿಡಕ್ಕೆ ಕಸಿಕಟ್ಟುವ ಮತ್ತು ಹಾನಿಗೊಳಗಾದ ಮರದ ಬೇರನ್ನು ಬದಲಾಯಿಸುವ (enarching) ಇತರ ಕಸಿಮಾಡುವ ವಿಧಾನಗಳಿಂದ.

13. ಉತ್ಪತ್ತಿ ಮಾಡಿದ ಸಸ್ಯಗಳನ್ನು ನೆಡುವುದು:

(a) ಭೂಮಿಯನ್ನು ವಿನ್ಯಾಸಗೊಳಿಸಿ ತಯಾರು ಮಾಡಿಕೊಳ್ಳುವುದು.
(b) ಕುಳಿ ತೋಡುವುದು.
(c) ಕುಳಿಗೆ ಮಣ್ಣು ಮತ್ತು ಗೊಬ್ಬರ ಹಾಕಿ ತುಂಬುವುದು.
(d) ಸಸ್ಯಗಳನ್ನು ನೆಡುವುದು.
(e) ಗಿಡಗಳ ಉದ್ದಗಲಕ್ಕೆ ತಕ್ಕಂತೆ ಅಂತರವನ್ನು ಮಾಡುವುದು.
(f) ನೀರು ಹಾಯಿಸುವುದು.
(g) ಹಣ್ಣಿನ ಮರಗಳ ಮತ್ತು ಪೊದೆಗಳ ರೆಂಬೆಗಳನ್ನು ತಕ್ಕಂತೆ ಕತ್ತರಿಸುವುದು.

14. ಕೆಲವು ಸಣ್ಣ ಅಳತೆಯ ಜಾಗಗಳನ್ನು ಪ್ರಯೋಗಕ್ಕೋಸ್ಕರವೇ ಮೀಸಲಿಟ್ಟು ಅದರ ಪ್ರತಿಯೊಂದು ಹಂತವನ್ನು ಗಮನಿಸಿ ಟಿಪ್ಪಣಿ ಮಾಡಿಕೊಳ್ಳುವುದು.

(a) ಸರದಿ ಬೆಳೆ

i) ಒಂದೇ ಪಟ್ಟೆಯಲ್ಲಿ ಒಂದೇ ಬೆಳೆಯನ್ನು ಸತತವಾಗಿ ಬೆಳೆಯುವುದು.
ii) ಒಂದೇ ಬೆಳೆಯನ್ನು ಇತರ ಸೂಕ್ತ ಬೆಳೆಗಳ ಜೊತೆಯಲ್ಲಿ ಸರದಿಯ ಮೇಲೆ ಬೆಳೆಯುವುದು.

(b) ಉತ್ತು ಕುಂಟೆ ಹೊಡೆದ ಮತ್ತು ಉತ್ತು ತುಳಿದ ಕಪ್ಪು ಮಣ್ಣಿನ ಪಟ್ಟೆಗಳ ನಡುವಿನ ವ್ಯತ್ಯಾಸಗಳನ್ನು ಗಮನಿಸುವುದು. ಮಳೆ ಬಂದಾಗ ಅದರ ಪರಿಣಾಮಗಳೇನು? ಭೂಮಿ ನೀರನ್ನು ಹೀರಿಕೊಳ್ಳುವ ಪ್ರಕ್ರಿಯೆಯ, ಮಳೆಗಾಲದಲ್ಲಿ ಮಣ್ಣನ್ನು ಆಗಾಗ್ಗೆ ತಿರುವುವ ಮತ್ತು ರಬಿ ಬೆಳೆಗಳ ವಿಷಯದಲ್ಲಿ ಋತುಮಾನದ ಕೊನೆಯ ಹೊತ್ತಿಗೆ ಮಣ್ಣಿನ ತೇವಾಂಶವನ್ನು ಉಳಿಸಿಕೊಳ್ಳುವ ಮಹತ್ವವನ್ನು ವಿವರಿಸಿ ತಿಳಿಸುವುದು.

(c) ಕುಂಡದಲ್ಲಿ ಮೇಲ್ಮೈ ಮತ್ತು ಉಪಮೇಲ್ಮೈ ಮಣ್ಣುಗಳೆರಡನ್ನೂ ತುಂಬಿ ಸಸ್ಯವನ್ನು ನೆಟ್ಟು ಅದು ಎರಡೂ ಪದರಗಳಲ್ಲಿ ಹೇಗೆ ಬೆಳೆಯುತ್ತಿದೆ ಎನ್ನುವುದನ್ನು ಗಮನಿಸುವುದು.

## ಓದಿ-ನೋಡಿ-ತಿಳಿ

1. ಬೀಜ ಸಂಗ್ರಹಣೆ.
2. ಬೀಜ ಒಳ್ಳೆಯದೆ ಅಲ್ಲವೆ?

(a) ಅದರ ಗುರುತ್ವಾಕರ್ಷಣ ಶಕ್ತಿ.
(b) ಮೊಳಕೆಯೊಡೆಯುವ ಶಕ್ತಿಯ ಶತಾಂಶ.

3. ಬೀಜದ ಗಾತ್ರದ ಆಧಾರದ ಮೇಲೆ ಬೀಜದ ಪಾತಿಯನ್ನು ಮಾಡಬೇಕು.

(a) ಸಣ್ಣ ಬೀಜಗಳಿಗೆ ನಯವಾದ ಮಣ್ಣಿನ ಪಾತಿ.
(b) ದೊಡ್ಡ ಬೀಜಗಳಿಗೆ ಒರಟಾದ ಮಣ್ಣಿನ ಪಾತಿ.

4. ನೀರು ಹಾಯಿಸುವ ವಿಧಾನಗಳು:

(a) ಪಾತಿಗಳನ್ನು ತಯಾರು ಮಾಡಿಕೊಳ್ಳುವುದು.
(b) ಪಾತಿಯ ತುಂಬ ನೀರು ತುಂಬಿಸುವುದು.
(c) ಮಣ್ಣಿನ ಗುಣಲಕ್ಷಣ ಮತ್ತು ಸ್ಥಿತಿಯನ್ನು ಗಮನಿಸಿ ಸೂಕ್ತ ನಿಯಮಗಳನ್ನು ಅನುಸರಿಸುವುದು.

5. ವಿವಿಧ ಬಗೆಯ ಮಣ್ಣು.

ಭೂಮಿಯ ಮೇಲ್ಮೈ ಮತ್ತು ಉಪಮೇಲ್ಮೈ ಮಣ್ಣುಗಳ ನಡುವಿನ ಹೋಲಿಕೆ.

(a) ಎಷ್ಟು ಆಳದಲ್ಲಿ ಇವೆರಡು ಮಣ್ಣುಗಳು ಬೇರ್ಪಡೆಯಾಗಿವೆ?
(b) ಅವುಗಳ ಸ್ಪರ್ಶ, ಬಣ್ಣ ಮತ್ತು ಹರಳಾಗಿರುವಿಕೆ.
(c) ಅಂಟುತನ ಮತ್ತು ತೇವಾಂಶ.
(d) ಸಾವಯವತೆಯ ಪ್ರಮಾಣ.
(e) ಮೇಲ್ಮೈ ಮತ್ತು ಉಪಮೇಲ್ಮೈ ಮಣ್ಣುಗಳ ಫಲವತ್ತತೆಯಲ್ಲಿರುವ ವ್ಯತ್ಯಾಸ.
(f) ಉಳುವಾಗ ಉಪಮೇಲ್ಮೈ ಮಣ್ಣು ಮೇಲೆ ಬರದಂತೆ ಜಾಗ್ರತೆ ವಹಿಸುವುದು.

6. ಉಳುಮೆಯ ಅವಶ್ಯಕತೆ.

(a) ಕಳೆ ಮತ್ತು ಕೀಟಗಳ ನಾಶ.
(b) ಭೂಮಿಯನ್ನು ಹಸನು ಮಾಡುವುದು.
(c) ಮಣ್ಣನ್ನು ತಿರುವುವುದು.
(d) ಸಸ್ಯದ ಆಹಾರ ರೂಪುಗೊಳ್ಳುವುದು.
(e) ಉತ್ತ ಮತ್ತು ಉತ್ತಿಲ್ಲದ ಭೂಮಿಯ ನಡುವೆ ಇರಬಹುದಾದ ಧಾರಕ ಶಕ್ತಿಯಲ್ಲಿನ ವ್ಯತ್ಯಾಸ.
(f) ರಬಿ ಬೆಳೆಗಳ ಮೇಲೆ ಪರಿಣಾಮ.
(g) ಮಳೆಗಾಲದಲ್ಲಿ ಉಳುವ ಮತ್ತು ಮಧ್ಯಂತರದಲ್ಲಿ ಕುಂಟೆ ಹೊಡೆಯುವ ಅವಶ್ಯಕತೆ.

7. ಹೊಲದ ಬೆಳೆಗಳ ಬಗ್ಗೆ ತಿಳುವಳಿಕೆ.

(a) ಸ್ಥಳೀಯ ಬೆಳೆಗಳನ್ನು ಗುರುತಿಸುವುದು. ಈ ಕೆಳಗಿನ ಅಂಶಗಳತ್ತ ಗಮನ ಹರಿಸುವುದು:

i) ಬಿತ್ತನೆ ಮಾಡುವ ಕಾಲ ಮತ್ತು ವಿಧಾನ.
ii) ಪ್ರತಿಯೊಂದು ಎಕರೆಗೆ ಬಿತ್ತನೆ ಮಾಡುವ ಬೀಜದ ಪ್ರಮಾಣ.
iii) ಸಾಲುಗಳ ನಡುವಿನ ವ್ಯತ್ಯಾಸ.
iv) ಬೆಳೆಯುವಾಗ ಮಾಡಬೇಕಾದ ಕೆಲಸಗಳು. ಹೇಗೆ ಮತ್ತು ಯಾಕೆ?
v) ಕೊಯಿಲಿನ ಸಮಯ.
vi) ಪ್ರತಿಯೊಂದು ಎಕರೆಯ ಇಳುವರಿ.

8. ನೇಗಿಲು ಮತ್ತು ಹೆಂಟೆ ಹೊಡೆಯುವ ಉಕರಣಗಳ ಬಗ್ಗೆ ತಿಳುವಳಿಕೆ.

1. ವಿವಿಧ ಭಾಗಗಳು ಮತ್ತು ನಿರ್ವಹಿಸುವ ಕಾರ್ಯ.
2. ಕಳೆಗುದ್ದಲಿ ಮತ್ತು ಬಿಲ್ಲೆ ಹಲುಬೆಗಳ ನಡುವಿನ ಹೋಲಿಕೆ.
3. ಬಿಲ್ಲೆ ಹಲುಬೆಯ ಬಳಕೆ - ಹೆಂಟೆಗಳನ್ನು ಪುಡಿ ಮಾಡುವುದು. ಉತ್ತ ಆಳದ ಮಣ್ಣನಲ್ಲಿರುವ ಕಳೆಯನ್ನು ಕಳೆಗುದ್ದಲಿಯಿಂದ ತೆಗೆಯಲು ಅನುಕೂಲವಾಗಿಸುವುದು.

9. ಇತರ ಹಲುಬೆಗಳ ಬಳಕೆಯ ಉದ್ದೇಶ ಮತ್ತು ಅವು ಕೆಲಸ ಮಾಡುವ ರೀತಿಯ ಬಗ್ಗೆ ಓದುವುದು.
10. ಕಿತ್ತಲೆ, ಮಾವು ಮತ್ತು ಸೀಬೆಗಳ ಸಂತಾನೋತ್ಪತ್ತಿಯನ್ನು ಮಾಡುವ ಸೂಕ್ತವಾದ ಕಾಲ, ರೀತಿ ಮತ್ತು ವಿಧಾನಗಳಿಗೆ ಸಂಬಂಧಿಸಿದಂತೆ ಸಾಧಾರಣ ನಿಯಮಗಳನ್ನು ವಿದ್ಯಾರ್ಥಿಗಳಿಗೆ ತರಗತಿಯಲ್ಲಿ ತಿಳಿಸಿ ಹೇಳುವುದು.

11. ಈ ಕೆಳಗಿನ ಹಣ್ಣಿನ ಮರಗಳನ್ನು ಬೆಳೆಸುವ ವಿವರಗಳನ್ನು ನೀಡುವುದು.

(a) ಕಿತ್ತಲೆ
(b) ನಿಂಬೆ
(c) ಸೀಬೆ
(d) ಇತರ ಹಣ್ಣಿನ ಮರಗಳು

12. ಸರದಿಯ ಬೆಳೆ.

(a) ಅದರ ಅವಶ್ಯಕತೆ.
(b) ಉದ್ದೇಶ.
(c) ಫಲವತ್ತತೆಯ ಮೇಲೆ ಅದರ ಪರಿಣಾಮ.
(d) ಅದನ್ನು ನಿಯೋಜಿಸುವ ಬಗೆ.

13. ಕಬ್ಬು ಬೆಳೆಯ ಬಗ್ಗೆ ವಿವರವಾದ ತಿಳುವಳಿಕೆ.
14. ಗೊಬ್ಬರಗಳ ವಿಂಗಡನೆ ಬಗ್ಗೆ ವಿವರವಾದ ತಿಳುವಳಿಕೆ.

(a) ಸಸ್ಯ ಅನಿಲದಂತಹ ವಸ್ತು ಮತ್ತು ಬೂದಿಯಿಂದ ಕೂಡಿರುತ್ತದೆ. ಅವೆರಡೂ ಎಲ್ಲಿಂದ ಬಂದವು?
(b) ಗೊಬ್ಬರದಲ್ಲಿರುವ ಮುಖ್ಯ ಘಟಕಾಂಶಗಳು - ಸಾರಜನಕ (nitrogen), ಪೊಟಾಶ್(potash) ಮತ್ತು ರಂಜಕ (phosphorpus).
(c) ಈ ಪ್ರತಿಯೊಂದು ಘಟಕಾಂಶ ಸಸ್ಯದ ಬೆಳವಣಿಗೆಯ ಮೇಲೆ ಬೀರುವ ಪರಿಣಾಮ.
(d) ದಟ್ಟವಾದ ಮತ್ತು ಭಾರೀಗಾತ್ರದ ಗೊಬ್ಬರಗಳು.
(e) ಹಸಿರು ಗೊಬ್ಬರ ಮಾಡಲು ಯಾವ ಬೆಳೆಗಳನ್ನು ಉಪಯೋಗಿಸಿಕೊಳ್ಳಬಹುದು? ಮತ್ತು ಅದಕ್ಕೆ ಸೂಕ್ತವಾದ ಕಾಲ ಯಾವುದು?

15. ಮಣ್ಣಿನ ಫಲವತ್ತತೆಯನ್ನು ಕಾಪಾಡಿಕೊಳ್ಳಲು ಬಳಸುವ ಇನ್ನಿತರ ವಿಧಾನಗಳು: ಸರದಿ ಬೆಳೆ, ಔಚಿತ್ಯಪೂರ್ಣ ಸಾಗುವಳಿ.
16. ಗದ್ದೆಹೊಲಗಳಲ್ಲಿ ಮತ್ತು ಕೈತೋಟದಲ್ಲಿ ಬೆಳೆಯುವ ಬೆಳೆಗಳ ಬಗ್ಗೆ ವಿವರವಾದ ತಿಳುವಳಿಕೆಯನ್ನು ಮುಂದುವರಿಸುವುದು.
17. ಸರಳವಾದ ಶೆಡ್ಡುಗಳ ಮತ್ತು ಕೊಟ್ಟಿಗೆಗಳ ನಿರ್ಮಾಣದ ಯೋಜನೆಗಳನ್ನು ಮತ್ತು ಅಂದಾಜುಗಳನ್ನು ಮಾಡುವುದು. ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಪ್ರಾಯೋಗಿಕ ತರಬೇತಿಯನ್ನು ನೀಡುವುದು.
18. ವ್ಯವಸಾಯದ ಉಪಕರಣಗಳನ್ನು ರಿಪೇರಿ ಮಾಡುವಷ್ಟು ಸಾಲೆ ಮತ್ತು ಬಡಗಿ ಕೆಲಸಕ್ಕೆ ಸಂಬಂಧಪಟ್ಟಂತೆ ತರಬೇತಿ ನೀಡುವುದು.

# ತರಗತಿ

## VII

## ಮಾಡಿ-ಕಲಿ

1. ಬೆಳೆ ಕೊಯಿಲಿನ ನಂತರ ಒಕ್ಕುವುದು, ಕೇರುವುದು, ಸ್ವಚ್ಛ ಮಾಡುವುದು. ಬೇರೆ ಬೇರೆ ಧಾನ್ಯಗಳಿಗೆ ಸೂಕ್ತವಾಗುವಂತೆ ಕೇರುವ ಯಂತ್ರವನ್ನು ಅಳವಡಿಸುವುದು.
2. ತಾವು ಬೆಳೆದಿರುವ ಬೆಳೆಗಳನ್ನು ಪೀಡಿಸುವ ಕ್ರಿಮಿಕೀಟಗಳ ಬಗ್ಗೆ ವಿದ್ಯಾರ್ಥಿಗಳು ತಿಳುವಳಿಕೆಯನ್ನು ಹೊಂದುವುದು, ಮತ್ತು ಕ್ರಿಮಿನಾಶಕವನ್ನು ತಯಾರಿಸಿಕೊಂಡು ಸಿಂಪಡಿಸುವುದು.
3. ಹೂವುಗಳ ಬಗೆಗಿನ ತಿಳುವಳಿಕೆ ಮುಂದುವರೆಸುವುದು.
4. ಗದ್ದೆಹೊಲ ಮತ್ತು ಕೈತೋಟಗಳಲ್ಲಿ ಬೆಳೆಗಳನ್ನು ಮತ್ತು ಹಣ್ಣಿನ ಮರಗಳನ್ನು ಬೆಳೆಯುವುದನ್ನು ಮುಂದುವರೆಸುವುದು.
5. ಬೆಲ್ಲದ ತಯಾರಿಕೆ.
6. ಸಸ್ಯಗಳು ಉಸಿರಾಟದ ಪ್ರಕ್ರಿಯೆಯಲ್ಲಿ ಆಮ್ಲಜನಕವನ್ನು ವಾತಾವರಣಕ್ಕೆ ಬಿಡುತ್ತವೆ ಎನ್ನುವುದನ್ನು ಪ್ರಯೋಗಗಳ ಮೂಲಕ ತೋರಿಸುವುದು.
7. ಕಬ್ಬನ್ನು ಹಿಂಡುವ ಯಂತ್ರದ ಭಾಗಗಳನ್ನು ಬೇರ್ಪಡಿಸಿ ಮರು ಜೋಡಿಸುವುದು.
8. ಟರ್ನ್‌ರೆಸ್ಟ್ (Turnwrest) ಮತ್ತು ಸಾಬುಲ್ (Sabul) ನೇಗಿಲುಗಳ ಭಾಗಗಳನ್ನು ಬೇರ್ಪಡಿಸಿ ಮರು ಜೋಡಿಸುವುದು.
9. ಪಶುಪಾಲನೆ.

    - ಪ್ರಾಣಿಗಳ ಆರೈಕೆ - ಉತ್ತಮ ವಸತಿ, ಸ್ವಚ್ಛತೆ, ಹಗುರ ಅಥವಾ ಶ್ರಮದ ಕೆಲಸಕ್ಕೆ ಸರಿಯಾದ ಕಾಲಕ್ಕೆ ಸೂಕ್ತವಾದ ಆಹಾರ ಇತ್ಯಾದಿ.

10. ಹೈನುಗಾರಿಕೆ.

    - ಹಾಲು ಕರೆಯುವುದು, ಹಾಲಿನ ಉತ್ಪನ್ನಗಳನ್ನು ತಯಾರಿಸುವುದು.
    - ಯಾವ ಹಸು ಮತ್ತು ಎಮ್ಮೆ ಹಾಲಿನ ಉತ್ತಮ ಪ್ರಮಾಣ ಮತ್ತು ಗುಣಮಟ್ಟವನ್ನು ನೀಡುತ್ತದೆ ಎಂಬುದನ್ನು ನಿರ್ಧರಿಸುವುದು.
    - ಪ್ರಧಾನ ಅಂಶಗಳನ್ನು ನೆನಪಿನಲ್ಲಿಟ್ಟುಕೊಂಡು ಪ್ರಯೋಗಿಸಿ ತೋರಿಸುವುದು.

11. ಪಶುರೋಗಗಳು.

- ಗಾಯ, ಊತ, ಚರ್ಮದ ಖಾಯಿಲೆ ಇತ್ಯಾದಿ ಸಾಧಾರಣ ಖಾಯಿಲೆಗಳಿಗೆ ಚಿಕಿತ್ಸೆ ಮಾಡುವುದು.
- ಅಂಟುರೋಗಗಳು ಮತ್ತು ಅವುಗಳ ಚಿಕಿತ್ಸೆ.

  ಅಂತಹ ರೋಗಪೀಡಿತ ಪ್ರಾಣಿಗಳ ಮೇಲೆ ಗಮನ ಇರಿಸಿ ಚಿಕಿತ್ಸೆ ನೀಡುವುದು.

12. ಸಾಧ್ಯವಿದ್ದಲ್ಲಿ ವಿದ್ಯಾರ್ಥಿಗಳು ಸಹಕಾರ ಅಂಗಡಿಯೊAದನ್ನು ಶಾಲೆಯಲ್ಲಿಯೇ ನಡೆಸುವುದು.
13. ಹೊಲಗದ್ದೆ ಲೆಕ್ಕಾಚಾರ.

- ಹುಡುಗರು ಶಾಲೆಯ ಹೊಲಗದ್ದೆಯ ಸಂಪೂರ್ಣ ಲೆಕ್ಕವನ್ನು ಹಾಗೂ ಪ್ರತಿಯೊಂದು ಬೆಳೆಗೆ ಮತ್ತು ಇಡೀ ಹೊಲಗದ್ದೆಗೆ ಸಂಬಂಧಪಟ್ಟಂತೆ ಲಾಭ ನಷ್ಟಗಳನ್ನು ಲೆಕ್ಕ ಹಾಕಿ ಅವುಗಳನ್ನು ನಿಗದಿಪಡಿಸಿದ ರೂಪದಲ್ಲಿ ದಾಖಲಿಸಬೇಕು.

14. ಕೈತೋಟಕ್ಕೆ ನಿಯಮಿತವಾಗಿ ಭೇಟಿ ನೀಡಿ ಪ್ರಯೋಗಕ್ಕೆಂದು ಮೀಸಲಿಟ್ಟಿರುವ ಪಟ್ಟೆಗಳಲ್ಲಿ ಏನು, ಹೇಗೆ, ಯಾವಾಗ, ಯಾಕೆ, ಇತ್ಯಾದಿ ವಿವರಗಳನ್ನು ಬರೆದುಕೊಂಡು ಪ್ರಯೋಗದ ಅಂತ್ಯದಲ್ಲಿ ಸೂಕ್ತ ತೀರ್ಮಾನಗಳನ್ನು ತಲುಪುವುದು.

    (a) ಕಡಮೆ ಅಂತರದಲ್ಲಿ ಮತ್ತು ಸೂಕ್ತ ಅಂತರದಲ್ಲಿ ಗಿಡ ನೆಟ್ಟರೆ ಆಗುವ ಪರಿಣಾಮಗಳೇನು? ಎನ್ನುವುದರ ಹೋಲಿಕೆ.
    (b) ನೆರಳಿನಲ್ಲಿ ಮತ್ತು ಬಿಸಿಲಿನಲ್ಲಿ ಬೆಳೆಯುವ ಗಿಡಗಳು ಯಾವ ರೀತಿಯಲ್ಲಿ ಪರಸ್ಪರ ಭಿನ್ನವಾಗಿರುತ್ತವೆ?
    (c) ಮರಳುಮಣ್ಣು ಮತ್ತು ಮರಳುಮಣ್ಣಿನ ಜೊತೆಗೆ ಮಣ್ಣುಗೊಬ್ಬರವನ್ನು ಸೇರಿಸಿದಾಗ ಗಿಡದ ಬೆಳವಣಿಗೆ ಮತ್ತು ನೀರನ್ನು ಹಿಡಿದಿಟ್ಟುಕೊಳ್ಳುವ ಗುಣದಲ್ಲಿ ಕಂಡುಬರುವ ವ್ಯತ್ಯಾಸಗಳೇನು? ಹಾಗೆಯೇ ಭಾರವಾದ ಮಣ್ಣು ಮತ್ತು ಅದರ ಜೊತೆಗೆ ಮಣ್ಣು ಗೊಬ್ಬರವನ್ನು ಸೇರಿಸಿದಾಗ ಕಂಡು ಬರುವ ವ್ಯತ್ಯಾಸಗಳೇನು? ಎನ್ನುವುದನ್ನು ಗಮನಿಸುವುದು.
    (d) ಉತ್ತ ಹಸಿ ಮಣ್ಣು ಮತ್ತು ಒಣ ಮಣ್ಣು ಗಾಳಿಗೆ ತೆರೆದುಕೊಂಡಿದ್ದಾಗ ಅವುಗಳ ಮೇಲೆ ಯಾವ ರೀತಿಯ ಭಿನ್ನ ಪರಿಣಾಮಗಳಾಗುತ್ತವೆ? ಎನ್ನುವುದನ್ನು ಗಮನಿಸುವುದು.

## ಒದಿ-ನೋಡಿ-ತಿಳಿ

1. (a) ಬೀಜ ಕಸರತ್ತುಗಳು
   (b) ಒಕ್ಕುವ ಯಂತ್ರ ಓಲ್ಪಾಡ (Olpad)
   (c) ಕೇರುವ ಸಾಧನ.

2. ಕ್ರಿಮಿಕೀಟಗಳು:

   (a) ಕ್ರಿಮಿಕೀಟಗಳು ಎಂದರೇನು?
   (b) ಅವುಗಳನ್ನು ಸಹಜ ಮತ್ತು ಕೃತಕ ರೀತಿಗಳಲ್ಲಿ ತಡೆಗಟ್ಟುವ ವಿಧಾನ.
   (c) ಉಪಯೋಗಿ ಮತ್ತು ಹಾನಿಕಾರಕ ಕ್ರಿಮಿಕೀಟಗಳು.

3. ಹೂವು ಮತ್ತು ಹಣ್ಣುಗಳು:

   (a) ಹೂವುಗಳ ಅಂಡಾಣು ಮತ್ತು ರೇತಾಣುಗಳ ಅರಿವಿನೊಂದಿಗೆ ವಿವರವಾಗಿ ಓದುವುದು.
   (b) ಪರಾಗಸ್ಪರ್ಶದ ಮೂಲಕ ಫಲವಂತಿಕೆಯಾಗುವ ಪ್ರಕ್ರಿಯೆ ಮತ್ತು ಪರಾಗಸ್ಪರ್ಶದ ಮಾಧ್ಯಮಗಳು.
   (c) ಹಣ್ಣುಗಳ ವಿಂಗಡಣೆ - ಬಿರಿವ, ಬಿರಿಯದ, ಒಣಗಿದ ಮತ್ತು ತಿರುಳನ್ನು ಹೊಂದಿರುವ ಮೆತ್ತಗಿನ ಹಣ್ಣುಗಳು.
   (d) ಬೀಜ ಪ್ರಸಾರದ ಮಾಧ್ಯಮಗಳು.

4. ಎಲೆಗಳು ಆಮ್ಲಜನಕವನ್ನು ಹೊರಗೆ ಬಿಡುವುದು.

   (a) ಆಹಾರ ಪೋಷಣೆ.
   (b) ಹಸಿರು ಬಣ್ಣ (ವರ್ಣದ್ರವ್ಯ) ಮತ್ತು ಅದರ ಮೇಲೆ ಸೂರ್ಯನ ಬೆಳಕಿನ ಪರಿಣಾಮ.
   (c) ಉತ್ಸರ್ಜನೆ - ಸಸ್ಯಗಳು ಹೆಚ್ಚಿನ ನೀರಿನಾಂಶವನ್ನು ವಿಸರ್ಜಿಸುವ ಕ್ರಿಯೆ - ಅದನ್ನು ಹೆಚ್ಚಿಸುವ ಮತ್ತು ಕಡಮೆ ಮಾಡುವ ರೀತಿಗಳು.

5. ಉಪಕರಣಗಳು.

   (a) ಕಬ್ಬು ಹಿಂಡುವ ಸಾಧನ.
   (b) ಮೇವಿನ ಹುಲ್ಲನ್ನು ಕತ್ತರಿಸುವ ಸಾಧನ - ಅವುಗಳ ಬೆಲೆ, ಆದಾಯ, ಮತ್ತು ನಿರ್ವಹಣಾ ಖರ್ಚು.

6. ನಿರ್ಮೂಲನೆಯ ವಿಶೇಷ ವಿಧಾನ.

   (a) 'ಕಾನ್ಸ್ (Kans)' - ಗದ್ದೆಹೊಲಗಳಿಗೆ ಒಡ್ಡನ್ನು ನಿರ್ಮಿಸುವುದು, ಮಳೆಯಿಂದ ಬಿಡುವು ಸಿಕ್ಕ ಮಧ್ಯಂತರಗಳಲ್ಲಿ ಮತ್ತು ನಂತರ

ಆಳವಾಗಿ ಉತ್ತು ಮಣ್ಣನ್ನು ತಿರುವಿ ಹಾಕಿ ಮತ್ತು ಹಸನು ಮಾಡುವುದು.

(b) ‘ನಾಗರ್ಮೋಥ (Nagarmotha)’ - ಗದ್ದೆಹೊಲಗಳಲ್ಲಿ ಸೆಣಬಿನ ನಾರನ್ನು ಬೆಳೆಯುವುದು.

(c) ‘ಡಬ್ (Dub)’ - ಬಿಸಿಲುಗಾಲದಲ್ಲಿ ಆಳವಾಗಿ ಉತ್ತು ಮಳೆಯಿಂದ ಬಿಡುವು ಸಿಕ್ಕಾಗೆಲ್ಲಾ ಮತ್ತು ನಂತರದಲ್ಲಿಯೂ ಸಹ ಹಸನು ಮಾಡುತ್ತಿರುವುದು.

7. ಆಳದ ಮತ್ತು ಮೇಲ್ಮೈ ಉಳುಮೆಯಿಂದ ನಿರಂತರ ಕಳೆ ಮತ್ತು ಕೀಟಗಳ ಮೇಲಾಗುವ ಪರಿಣಾಮ. ಋತುಮಾನಕ್ಕೆ ಮತ್ತು ಮಣ್ಣಿನ ಗುಣಕ್ಕೆ ತಕ್ಕಂತೆ ಆಳದ ಮತ್ತು ಮೇಲ್ಮೈ ಉಳುಮೆ. ಬಲವಾದ ಹಲ್ಲುಳ್ಳ ಅಥವಾ ಸ್ಪ್ರಿಂಗ್ ಹಲುಬೆ ಸಲಿಕೆಗಳನ್ನು ಯಾವಾಗ ಮತ್ತು ಯಾಕೆ ಬಳಸಬೇಕು.

8. ಪಶು ಸಂತಾನೋತ್ಪತ್ತಿ.

ಸಂತಾನೋತ್ಪತ್ತಿಯ ನಿಯಮಗಳು ಮತ್ತು ಪಶು ಪಾಲನೆ. ಉತ್ತಮ ಎತ್ತು ಮತ್ತು ಹಸುಗಳ ಆಯ್ಕೆ; ಅಂತಸ್ಸಂಬಂಧ ಮತ್ತು ಅಡ್ಡ ಸಂಬAಧಕ್ಕೆ ಸರಿಯಾದ ಆಯ್ಕೆ.

9. ಪಶುಗಳಿಗೆ ಬರುವ ರೋಗರುಜಿನಗಳು.

(a) ಆರೋಗ್ಯವಾಗಿರುವ ಮತ್ತು ಅನಾರೋಗ್ಯದಿಂದ ಬಳಲುತ್ತಿರುವ ಪಶುಗಳನ್ನು ಗುರುತಿಸುವುದು.

(b) ಅನಾರೋಗ್ಯ ಪೀಡಿತ ಪಶುವನ್ನು ಬೇರ್ಪಡಿಸುವುದು.

(c) ಅನಾರೋಗ್ಯ ಪೀಡಿತ ಪಶುವಿನ ಪಾಲನೆ. ಸರಿಯಾದ ಸ್ಥಳದಲ್ಲಿ ಇರಿಸಿ ನಿಯಮಿತ ಕಾಲಕ್ಕೆ ಆಹಾರವನ್ನು ನೀಡುವುದು. ತಮ್ಮ ಪಶುಮಂದೆಯನ್ನು ಅಂಟುಜಾಡ್ಯಗಳಿಂದ ದೂರವಿರಿಸಲು ಸಾಮಾನ್ಯ ಆರೋಗ್ಯಕ್ಕೆ ಸಂಬಂಧಪಟ್ಟಂತೆ ಕೆಲವು ಮುನ್ನೆಚ್ಚರಿಕೆಯ ನಿಯಮಗಳನ್ನು ಪಾಲಿಸುವುದು.

10. ಹೊಲಗದ್ದೆಯ ಮತ್ತು ಕೈತೋಟದ ಬೆಳೆಗಳ ವಿಸ್ತಾರವಾದ ಅರಿವನ್ನು ಮುಂದುವರೆಸುವುದು.

11. ಸಹಕಾರ.

(a) ಹಳ್ಳಿಯ ಸಮುದಾಯದಲ್ಲಿ ಪರಸ್ಪರ ಸಹಕಾರದ ತತ್ವಗಳನ್ನು ಮನವರಿಕೆ ಮಾಡಿಕೊಡುವುದು.

(b) ಸಹಕಾರದ ಲಾಭಗಳು.

12. ಹೊಲಗದ್ದೆಗೆ ಸಂಬಂಧಪಟ್ಟ ಲೆಕ್ಕಪತ್ರ.

1. ದಾಸ್ತಾನು ಪುಸ್ತಕ.
2. ದಿನನಿತ್ಯದ ಖರ್ಚಿನ ದಾಖಲಾತಿ ಪುಸ್ತಕ.
3. ನಗದು ಪುಸ್ತಕ.
4. ದಿನಚರಿ ಪುಸ್ತಕ.
5. ವಾರದ ಮತ್ತು ತಿಂಗಳ ನೌಕರರ ಪಟ್ಟಿ.
6. ಖಾತೆ ಪುಸ್ತಕ.

13. ಲಾಭನಷ್ಟಗಳ ಲೆಕ್ಕವನ್ನು ಒಳಗೊಂಡಂತೆ ವಾರ್ಷಿಕ ಲೆಕ್ಕಪತ್ರವನ್ನು ತಯಾರಿಸುವ ರೀತಿ.

**ವಿಶೇಷ ಸೂಚನೆ**

ಮಣ್ಣು, ಉಳುಮೆ, ಗೊಬ್ಬರ, ಬೆಳೆ ಇತ್ಯಾದಿಗಳಿಗೆ ಸಂಬಂಧಪಟ್ಟಂತೆ ವಿದ್ಯಾರ್ಥಿಗಳು ಹಿಂದಿನ ತರಗತಿಗಳಲ್ಲಿ ಕಲಿತದ್ದನ್ನು ಪುನರಾವರ್ತಿಸುವುದು. ವಿದ್ಯಾರ್ಥಿಗಳು ವರ್ಷದುದ್ದಕ್ಕೂ ತಾವು ಬೆಳೆಯುತ್ತಿರುವ ಬೆಳೆಗಳಿಗೆ ಸಂಬಂಧಪಟ್ಟಂತೆ ಹೊಲಗದ್ದೆಗಳಲ್ಲಿ ಕೆಲಸ ಮಾಡುವುದನ್ನು ಮುಂದುವರೆಸುವುದು.

## ಏತ ನೀರಾವರಿ ಸೌಲಭ್ಯವನ್ನು ಉಪಯೋಗಿಸಿ ಹತ್ತಿ ಬೆಳೆಯುವುದು

(ಹತ್ತಿಯ ಬದಲು ಸ್ಥಳೀಯ ಹವಾಮಾನಕ್ಕೆ ಅನುಗುಣವಾಗಿ ಆಯ್ದುಕೊಳ್ಳುವ ಯಾವುದೇ ಬೇರೆ ಬೆಳೆ ಆದಾಯದ ಪ್ರಮಾಣದಲ್ಲಿ ಗಮನಾರ್ಹ ಬದಲಾವಣೆಯನ್ನು ಉಂಟು ಮಾಡುವುದಿಲ್ಲ)

| | |
|---|---|
| 1. ಜಮೀನು | 20 ಎಕರೆಗಳು. |
| 2. ಬೆಳೆಗಾರಿಕೆ: | |
| ಕಬ್ಬು | 2 ಎಕರೆಗಳು |
| ಹಣ್ಣು | 4 ಎಕರೆಗಳು |
| ತೋಟದ ಬೆಳೆಗಳು | 6 ಎಕರೆಗಳು |
| ಹತ್ತಿ, ಜೋಳ, ಕಡಲೆಕಾಯಿ | 8 ಎಕರೆಗಳು |
| | ಒಟ್ಟು 20 ಎಕರೆಗಳು |
| 3. ಪಡೆದಿರುವ ಒಟ್ಟು ಮೊತ್ತ | ರೂ. 1,910 |
| 4. ಸವಕಳಿಯೂ ಸೇರಿದಂತೆ ವಾರ್ಷಿಕ ಖರ್ಚು | ರೂ. 910 |
| 5. ನಿವ್ವಳಲಾಭ | ರೂ. 1,000 |
| 6. ಒಮ್ಮೆ ಮಾತ್ರದ ಖರ್ಚಿನ ಬಾಬತ್ತು | ರೂ.6,000 |
| 7. ಮೊದಲ ವರ್ಷದ ವಾರ್ಷಿಕ ಖರ್ಚು | ರೂ. 900 |
| 8. ಶುರುವಾತಿಗೆ ಬೇಕಾದ ಪ್ರಾರಂಭಿಕ ಮೊತ್ತ | ರೂ. 6,900 |

ಬೇಸಾಯವನ್ನು ವರ್ಷದಿಂದ ವರ್ಷಕ್ಕೆ ಚಾಲ್ತಿಯಲ್ಲಿಡಲು ಇದಕ್ಕಿಂತಲೂ ಹೆಚ್ಚುವರಿ ಮೊತ್ತ ಬೇಕಾಗುವುದಿಲ್ಲ. ಅನೂಹ್ಯ ಕಾರಣಗಳಿಗೆ ಬೆಳೆ ವೈಫಲ್ಯವಿದ್ದರೆ ಮಾತ್ರ ಪರಿಸ್ಥಿತಿ ಬೇರೆಯಾಗಬಹುದು.

ನೀರಿನ ಸರಬರಾಜಿಗೆ ಕಾಲುವೆ ಇದ್ದಲ್ಲಿ ಒಮ್ಮೆ ಮಾತ್ರದ ಖರ್ಚಿನ ಬಾಬತ್ತು ರೂ. 1450 ರಷ್ಟು ಕಡಮೆಯಾಗುವ ಸಾಧ್ಯತೆ ಇರುತ್ತದೆ. ಹೊಲಗೂಲಿಯನ್ನು ಉಳಿಸುವ ಪಕ್ಷದಲ್ಲಿ ನೀರು ಸರಬರಾಜಿನ ಖರ್ಚನ್ನು

ಭರಿಸಬಹುದು. ಮಧ್ಯ ಪ್ರಾಂತ್ಯದಲ್ಲಿ ಕಬ್ಬು ಹೊಲಗೂಲಿ ರೂ. 15 ಇದ್ದರೆ ತೋಟದ ಬೆಳೆಗಳಿಗೆ ರೂ. 10 ಇರುತ್ತದೆ.

## ಹತ್ತಿ ಬೆಳೆಗೆ ಹೊಂದಿಕೊಳ್ಳುವಂತೆ
## ಏತ ನೀರಾವರಿ ಸೌಲಭ್ಯ ಉಪಯೋಗಿಸಿ
## ಹತ್ತಿ ಬೆಳೆಯುವ ಯೋಜನೆ

### ಖರ್ಚಿನ ವಿವರಗಳು

| ಬೆಳೆ | ವಿಸ್ತೀರ್ಣ | ಕೂಲಿ | ಇತರೆ | ಭೂ ಕಂದಾಯ | ಒಟ್ಟು ಖರ್ಚು | ಸರಾಸರಿ ಆದಾಯ ಪ್ರತಿ ಎಕರೆಗೆ | ನಿರೀಕ್ಷಿತ ಒಟ್ಟು ಆದಾಯ | ನಿವ್ವಳ ಲಾಭ |
|---|---|---|---|---|---|---|---|---|
| ಕಬ್ಬು | 2 | 164 | 130 | 6 | 300 | 200 | 400 | 100 |
| ಹಣ್ಣು | 4 | 210 | 190 | 12 | 412 | 150 | 600 | 188 |
| ತೋಟದ ಬೆಳೆ | 6 | 210 | 250 | 18 | 478 | 125 | 750 | 272 |
| ಹತ್ತಿ, ಜೋಳ, ಶೇಂಗಾ ಸಮನಾದ ನೆಲ ವಿಸ್ತೀರ್ಣದಲ್ಲಿ | 8 | 52/6/8 | 45/9/4 | 22 | 120 | 20 | 160 | 40 |
| ಒಟ್ಟು | 20 | 636/6/8 | 615/9/4 | 58 | 1310 | | 1910 | 600 |
| ಹುಡುಗರ ಕೂಲಿಯಿಂದ ಉಳಿಸಿದ ಹಣ | | 400 | | | 400 | | | 400 |
| | 20 | 236/6/8 | 615/9/4 | 58 | 910 | | 1910 | 1000 |

ಭೂ ಕಂದಾಯವನ್ನು ಕಟ್ಟಬೇಕಿಲ್ಲದ ಪಕ್ಷದಲ್ಲಿ ಪ್ರತಿಕೂಲ ಸನ್ನಿವೇಶಗಳನ್ನು ನಿಭಾಯಿಸಲು ಆ ಮೊತ್ತವನ್ನು ಋಣ ಪರಿಹಾರ ನಿಧಿಯಾಗಿ ಬಳಸಿಕೊಳ್ಳಬಹುದು. ಹಣ್ಣು ಬೆಳೆಯುವ ಜಾಗ ಫಲ ಬಿಡಲು ಕೆಲವು ವರ್ಷಗಳು ಹಿಡಿಯಬಹುದು. ಆದರೆ ಆ ಕಾಲಾವಧಿಯಲ್ಲಿ ಹಣ್ಣಿನ ಗಿಡಗಳ ನಡುವೆ ತೋಟದ ಬೆಳೆಗಳನ್ನು ಬೆಳೆದು ಆದಾಯವನ್ನು ಮಾಡಿಕೊಳ್ಳಬಹುದು.

## ಜಮೀನಿಗೆ ಒಮ್ಮೆ ಮಾತ್ರದ ಖರ್ಚಿನ ಬಾಬತ್ತು

| ಕ್ರ.ಸಂ. | ಅವಶ್ಯ ಸಂಖ್ಯೆ | ವಸ್ತು | ಬೆಲೆ ರೂ. |
|---|---|---|---|
| 1 | 20 | ಎಕರೆ ಭೂಮಿ | 2000 |
| 2 | | ಎರಡು ರಹಾತುಗಳ ಮಟ್ಟಿಗೆ ನೀರನ್ನು ಒದಗಿಸಬಲ್ಲ ಒಳ್ಳೆಯ ಬಾವಿ | 750 |
| 3 | | ಬೇಲಿ | 500 |
| 4 | 2 | ರಹಾತುಗಳು | 700 |
| 5 | 3 | ಜೋಡಿ ಎತ್ತು | 350 |
| 6 | 1 | ಟರ್ನ್ರೆಸ್ಟ್ ನೇಗಿಲು | 35 |
| 7 | 2 | ಜಾಟ್ ನೇಗಿಲು | 24 |
| 8 | 2 | ಬಖಾರ್ (Bakhar) | 10 |
| 9 | 1 | ಪ್ಲಾನೆಟ್ ಜೂನಿಯರ್ ಗುದ್ದಲಿ | 40 |
| 10 | 4 | ಸಾಮಾನ್ಯ ಗುದ್ದಲಿ | 10 |
| 11 | 1 | ಉಳುಮೆ ನೇಗಿಲು | 45 |
| 12 | 1 | ಮರದ ಹಲಗೆ | 5 |
| 13 | 2 | ಸಾಂಪ್ರದಾಯಿಕ ನೇಗಿಲು | 4 |
| 14 | 1 | ಅರ್ಗಾರ (Argara) | 4 |
| 15 | 1 | ನಾರಿ (Nari) | 3 |
| 16 | 3 | ನೊಗ | 4 |
| 17 | 4 | ಶಿವ್ಲಾಸ್ (Shivlas) | 2 |
| 18 | 2 | ಗಾಡಿ | 80 |
| 19 | 4 | ಸರಪಳಿ | 8 |
| 20 | | ಹಗ್ಗ ಇತ್ಯಾದಿ | 10 |
| 21 | 1 | ಎತ್ತು, ಹಸುಗಳಿಗೆ ಕೊಟ್ಟಿಗ ಮತ್ತು ಉಪಕರಣಗಳನ್ನು ಇಡಲು ಗುಡಿಸಲು | 300 |
| 22 | 1 | ಸ್ಪ್ರೇ ಮಾಡುವ ಸಾಧನ | 50 |
| 23 | 12 | ಫವಾರಗಳು (Phawaras) | 12 |
| 24 | 6 | ಪಿಕಾಸಿ | 9 |
| 25 | 12 | ಕುಡುಗೋಲು | 6 |
| 26 | 12 | ಚೂಪಾದ ಅಗೆಯುವ ಸಾಧನ | 6 |
| 27 | 12 | ಖುರ್ಪಾಗಳು (Khurpas) | 6 |
| 28 | 12 | ಕಳೆ ತೆಗೆಯುವ ಕವಲುಗೋಲು | 18 |
| 29 | 2 | ತೂಕಗಳ ಜೊತೆ ತಕ್ಕಡಿ | 10 |
| 30 | 1 | ಕೋಡೋ ಅಳತೆ | 4 |

| | | | |
|---|---|---|---|
| 31 | 1 | ಅಗರ್ (Augur) | 2 |
| 32 | 1 | ಬಸೂಲ (Basula) | 2 |
| 33 | 1 | ಭಿಂದ್ನಾ (Bindhna) | 1 |
| 34 | 1 | ಕೊಡಲಿ | 1 |
| 35 | 2 | ಹಾರೆ | 5 |
| 36 | 6 | ಅಗೆಯುವ ಕವಲುಗೋಲು | 30 |
| 37 | 2 | ಕಸಿಗತ್ತರಿ | 10 |
| 38 | 6 | ಮೊಳಕೆ ಕಸಿ ಮಾಡುವ ಚಾಕು | 18 |
| 39 | 6 | ಸಮರುಗತ್ತರಿ | 12 |
| 40 | 6 | ಘಮ್ಕ್ಲಾಸ್ (Ghamclas) | 6 |
| 41 | 1 | ಕೇರುವ ಮೊರ | 160 |
| 42 | 1 | ಕಬ್ಬನ್ನು ಹಿಂಡುವ ಸಾಧನ | 150 |
| 43 | 1 | ಬಾಣಲೆ ಅಥವಾ ಹರಿವಾಣ | 30 |
| 44 | 1 | ಒಲ್ಬಾಡ್ ತೆನೆಬಡಿಯುವ ಸಾಧನ (ಗೋಧಿ ಬೆಳೆಗೆ) | 45 |
| 45 | 2 | ಹಸುಗಳು | 80 |
| 46 | | ಎತ್ತಿನ ಮೇವು ಮತ್ತು ಗಿಡಗಳು ಮೊದಲ ವರ್ಷಕ್ಕೆ | 300 |
| 47 | | ಇತರೆ | 50 |
| | | ಒಟ್ಟು ಮೊತ್ತ ರೂ. | 5,910 |

ಒಮ್ಮೆ ಮಾತ್ರದ ಖರ್ಚು ರೂ. 5,910 ಅಥವಾ ಸಮೀಪದ ಸಂಖ್ಯೆ ರೂ. 6000 ಎಂದಾಗುತ್ತದೆ. ಜಮೀನಿನ ಬೆಲೆಯನ್ನು ಎಕರೆಗೆ ನೂರು ರೂಪಾಯಿನಂತೆ ಲೆಕ್ಕ ಹಾಕಲಾಗಿದೆ. ಹತ್ತಿರದ ಪಟ್ಟಣಗಳಲ್ಲಿ ಇನ್ನೂ ಕಡಮೆ ಬೆಲೆಗೆ ಸಿಗಬಹುದು.

ಸಾಮಾನ್ಯ ವಾರ್ಷಿಕ ಖರ್ಚು ಹೆಚ್ಚುವರಿ ರೂ. 900 ಎಂದು ಅಂದಾಜಿಸಲಾಗಿದೆ. ಹೆಚ್ಚುವರಿ ಈ ಮೊತ್ತದಲ್ಲಿ ಜಮೀನನ್ನು ಉತ್ತಿ ಬಿತ್ತಿ ಬೆಳೆ ತೆಗೆಯಲು ಪ್ರಾರಂಭಿಸುವುದು ಸಾಧ್ಯ.

# ಮೂಲಕರಕೌಶಲ್ಯವಾಗಿ ನೂಲುವ ಮತ್ತು ನೇಯುವುದರ

# ಏಳು ವರ್ಷದ ಪಠ್ಯಕ್ರಮ

1. ಈ ಪಠ್ಯಕ್ರಮವನ್ನು ಎರಡು ಭಾಗಗಳಾಗಿ ವಿಭಾಗಿಸಲಾಗಿದೆ:

   (a) ನೂಲುವುದು
   (b) ನೇಯುವುದು

2. ಮೊದಲ ಐದು ವರ್ಷಗಳನ್ನು ನೂಲುವಿಕೆಗೆ ಮತ್ತು ಕೊನೆಯ ಎರಡು ವರ್ಷಗಳನ್ನು ನೇಯ್ಗೆಗೆ ಮೀಸಲಿಡುವುದು. ಈ ಕರಕೌಶಲ್ಯಕ್ಕೆ ಸಹಸಂಬಂಧಿಸಿದಂತೆ ಮರಗೆಲಸ ಮತ್ತು ಕಮ್ಮಾರಿಕೆಯ ಮೂಲ ಅರಿವನ್ನೂ ಬೆಳೆಸುವುದು.
3. ಪ್ರತಿಯೊಂದು ವರ್ಷವನ್ನೂ ಎರಡು ಅವಧಿಗಳಾಗಿ ವಿಭಾಗಿಸಲಾಗಿದೆ. ಅದರಿಂದ ವಿದ್ಯಾರ್ಥಿಯ ಪ್ರಗತಿಯನ್ನು ಅಳೆಯುವುದು ಸುಲಭವಾಗುತ್ತದೆ.
4. ಹತ್ತಿಯನ್ನು ಬಿಡಿಸುವ ಮತ್ತು ಶುದ್ಧ ಮಾಡುವ ಪ್ರಕ್ರಿಯೆಗಳನ್ನು ವಿದ್ಯಾರ್ಥಿಗಳಿಗೆ ಪರಿಚಯಿಸುವುದು ಅಭ್ಯಾಸವಾಗಲಿ ಎನ್ನುವ ಕಾರಣಕ್ಕೆ ಮಾತ್ರ. ಈ ಎರಡು ಪ್ರಕ್ರಿಯೆಯಲ್ಲಿ ಅಭ್ಯಾಸಕ್ಕೆಂದು ಬೇಕಿರುವ ಅಗತ್ಯ ಪ್ರಮಾಣದ ಹತ್ತಿಯ ಹೊರತಾಗಿ, ಉಳಿದಂತೆ ಶಾಲೆಯಲ್ಲಿ ಬಳಸುವ ಹತ್ತಿಯನ್ನು ಕೈಚರಕದ ಮೂಲಕವೇ ಬಿಡಿಸಬೇಕು. ಅಭ್ಯಾಸಕ್ಕೆ ಎಂದು ಉಪಯೋಗಿಸುವ ಎಲೆ ಮತ್ತು ಕೀಟರಹಿತ ಹತ್ತಿಯನ್ನು ಹೊಲದಿಂದ ಬಿಡಿಸಿ ತರುವುದು ಅಗತ್ಯವಾಗುತ್ತದೆ.
5. ಕಿರಿಯ ವಿದ್ಯಾರ್ಥಿಗಳಿಗೆ ಹತ್ತಿಯನ್ನು ಹಿಂಜಿ ಎಳೆ ಬಿಡಿಸಲು (carding) ಕಷ್ಟವಾದಲ್ಲಿ ಹಿರಿಯ ವಿದ್ಯಾರ್ಥಿಗಳು ಹಿಂಜಿದ ಹತ್ತಿ ಎಳೆಗಳ ಪಟ್ಟಿಗಳನ್ನು ತಯಾರು ಮಾಡಿ ಇಡಬೇಕು.
6. ಬೋಧಕರು ವಿಶೇಷವಾಗಿ ಗಮನ ಕೊಡಬೇಕಾದ ಅಂಶವೆಂದರೆ ಮೊದಲಿನಿಂದಲೂ ವಿದ್ಯಾರ್ಥಿಗಳು ಚರಕದ ಅಥವಾ ತಕಲಿಯ ಮೇಲೆ ನೂಲುವಾಗ ನೂಲುಹುರಿ ಕತ್ತರಿಸಿ ಪೋಲಾಗದಂತೆ ಜಾಗ್ರತೆ ವಹಿಸಬೇಕು. ಸಾಮಾನ್ಯವಾಗಿ ಹಿಂಜಿ ಎಳೆಗಳನ್ನು ಬಿಡಿಸುವಾಗ ಶೇಕಡಾ ಐದರ ವ್ಯರ್ಥವೂ ಸೇರಿದಂತೆ ಒಟ್ಟು ಪ್ರತಿಶತ ಹತ್ತು ಭಾಗ ವ್ಯರ್ಥಕ್ಕೆ ಅನುವು ಮಾಡಿಕೊಡಲಾಗಿದೆ. ಯಾವುದೇ ಸಂದರ್ಭದಲ್ಲಿ ಆ ಗರಿಷ್ಟ ಮಿತಿಯನ್ನು ಮೀರದಂತೆ ಎಚ್ಚರ ವಹಿಸಬೇಕು.
7. ಉತ್ಪಾದಿಸಿದ ನೂಲುಹುರಿಯ ಎಣಿಕೆ ಎಂಟರಿಂದ ಹನ್ನೆರಡು ಅಥವಾ ಅದಕ್ಕಿಂತಲೂ ಕಡಮೆ ಇದ್ದಲ್ಲಿ ಬಳಸಿದ ಹತ್ತಿಯ ಗುಣಮಟ್ಟ

ರೋಜಿಯಮ್ (rozium) ಗಿಂತಲೂ ಕೆಳಗಿನದಾಗಿರಬಾರದು. ಹದಿಮೂರು ಅಥವಾ ಜಾಸ್ತಿ ಇದ್ದಲ್ಲಿ ಮಾತ್ರ ಉದ್ದ ಎಳೆಯ ವೇರಮ್ (Veram), ಸುರತಿ (Surati), ಕಾಂಬೋಡಿಯ (Cambodia), ಜಯ್ವಂತ್ (Jayvant) ಅಥವಾ ಪಂಜಾಬ್-ಅಮೆರಿಕನ್ (Punjab-American) ಹತ್ತಿಯನ್ನು ಬಳಸುವುದು.

8. ಆಯಾ ಸಹಸಂಬಂಧಿತ ಕರಕೌಶಲ್ಯದ ಅಭ್ಯಾಸಕ್ಕೆ ಪ್ರತಿದಿನ ಮೂರು ಗಂಟೆ ಮತ್ತು ಇಪ್ಪತ್ತು ನಿಮಿಷಗಳ ಕಾಲದ ಅವಧಿಯನ್ನು ವಿದ್ಯಾರ್ಥಿಗಳಿಗೆ ಕೊಡಬೇಕು. ತಿಂಗಳಿಗೆ ಇಪ್ಪತ್ನಾಲ್ಕು ದಿನಗಳ ಲೆಕ್ಕದಂತೆ ವರ್ಷಕ್ಕೆ 288 ದಿನಗಳು ಶಾಲೆ ಕೆಲಸ ಮಾಡಬೇಕು.
9. ವರ್ಷದ ಮಧ್ಯದಲ್ಲಿ ವಿದ್ಯಾರ್ಥಿಗಳ ನೂಲುವ ವೇಗವನ್ನು ಪರೀಕ್ಷಿಸುವಾಗ ಆ ನಿರ್ದಿಷ್ಟ ಅವಧಿಯ ಮಟ್ಟಿಗೆ ಮಾತ್ರ ಅನ್ವಯವಾಗುತ್ತದೆ. ಪ್ರತಿದಿನದ ನೂಲುವ ವೇಗದ ಸರಾಸರಿಯನ್ನು ತೆಗೆದುಕೊಳ್ಳುವಾಗ ಅದು ಮೂರು ಗಂಟೆ ಇಪ್ಪತ್ತು ನಿಮಿಷಗಳ ಅವಧಿಗೆ ಅನ್ವಯಿಸುತ್ತದೆ.
10. ಅನಾರೋಗ್ಯ ಮತ್ತು ಇತರ ಕಾರಣದಿಂದ ಉಂಟಾಗುವ ಗೈರುಹಾಜರಿಯನ್ನು ಪರಿಗಣಿಸಿ ಪ್ರತಿಯೊಬ್ಬ ವಿದ್ಯಾರ್ಥಿ ನೂಲಬೇಕಾದ ಒಟ್ಟು ಪ್ರಮಾಣದಲ್ಲಿ ಶೇಕಡಾ ಇಪ್ಪತ್ತೆöÊದಕ್ಕೆ ವಿನಾಯಿತಿ ನೀಡಬೇಕು.

## ತರಗತಿ

## I

## ಮೊದಲ ಅರ್ಧವಾರ್ಷಿಕ ಅವಧಿ

## ನೂಲುವುದು

1. ಈ ಅವಧಿಯಲ್ಲಿ ಕೆಳಗಿನ ಪ್ರಕ್ರಿಯೆಗಳನ್ನು ಬೋಧಿಸುವುದು:

   (a) ಹತ್ತಿಯನ್ನು ಶುದ್ಧ ಮಾಡುವುದು.
   (b) ಹಿಂಜಿ ಎಳೆ ಬಿಡಿಸಿದ ಹತ್ತಿಯಿಂದ ಪಟ್ಟಿಗಳನ್ನು ತಯಾರಿಸಿಕೊಳ್ಳುವುದು.
   (c) ಚೂರುಗಳನ್ನು ಮಾಡಿಕೊಳ್ಳುವುದು.
   (d) ತಕಲಿಯಲ್ಲಿ ಬಲಗೈಯಿಂದ; ಬೆರಳುಗಳಿಂದ; ಮೊಣಕಾಲಿನಿಂದ ಮೇಲೆ; ಮತ್ತು ಮೊಣಕಾಲಿನಿಂದ ಕೆಳಗೆ ನೂಲುವುದು.
   (e) ತಕಲಿಯಲ್ಲಿ ಎಡಗೈಯಿಂದ ನೂಲುವುದು, ಆದರೆ ತಿರುವುವ ರೀತಿ ಬಲಗೈಯಂತೆಯೇ ಇರಬೇಕು. ಮೇಲೆ ಹೇಳಿದ ಮೂರೂ ವಿಧಾನಗಳನ್ನು ಪುನರಾವರ್ತಿಸುವುದು.

(f) ಸುರುಳಿ ಸುತ್ತುವ ಗಾಲಿಯ ಮೇಲೆ ನೂಲುಹುರಿಯನ್ನು ಸುತ್ತಬೇಕು.

2. ತಕಲಿಯಲ್ಲಿ ಒಮ್ಮೆ ಬಲಗೈಯಲ್ಲಿ ನಂತರ ಎಡಗೈಯಲ್ಲಿ, ಹಾಗೆಯೇ ಎಡಗೈಯಲ್ಲಿ ನಂತರ ಬಲಗೈಯಲ್ಲಿ ನೂಲುವುದನ್ನು ಕಲಿಸುವುದು.
3. ಆರು ತಿಂಗಳ ಕೊನೆಯಲ್ಲಿ ನೂಲುವ ವೇಗ ಸುರುಳಿ ಸುತ್ತುವುದೂ ಸೇರಿದಂತೆ ಮೂರು ಗಂಟೆಗಳಲ್ಲಿ ಹತ್ತರ ಎಣಿಕೆಯ ಒಂದೂವರೆ ಲಡಿಗಳಷ್ಟು (ಅಂದರೆ, 160 ಸುತ್ತುಗಳು) ಇರಬೇಕು.
4. ಆರು ತಿಂಗಳಿಗೆ ಪ್ರತಿದಿನದ ಸರಾಸರಿ ನೂಲುವ ವೇಗ ಮೂರು ಗಂಟೆಗಳಲ್ಲಿ ಹತ್ತರ ಎಣಿಕೆ ನೂಲುಹುರಿಯ ಮುಕ್ಕಾಲು ಲಡಿಯಷ್ಟು ನೂತಿರಬೇಕು. ಅಂದರೆ 144 ದಿನಗಳಿಗೆ 27 ಗೂಂದಿ (640 ಸುತ್ತುಗಳ ಲಡಿಳು). ತೂಕ ಒಂದು ಸೇರು ಮತ್ತು ಆರು ಚಟಾಕುಗಳಷ್ಟು ಇರಬೇಕು. ಕೂಲಿ (ಹಿಂಜಿ ಎಳೆ ಬಿಡಿಸುವುದರ ರೂ. 1/-/6 ನ್ನು ಹೊರತುಪಡಿಸಿ) ಸೇರಿಗೆ ರೂ. -/12/- ರಂತೆ ಇರಬೇಕು.

## ತರಗತಿ

## I

## ದ್ವಿತೀಯ ಅರ್ಧವಾರ್ಷಿಕ ಅವಧಿ

1. ಈ ಹಂತದಲ್ಲಿ ಹತ್ತಿಯನ್ನು ಹಿಂಜಿ ಎಳೆ ಬಿಡಿಸುವುದನ್ನು ಕಲಿಸಲಾಗುತ್ತದೆ.
2. ಆರು ತಿಂಗಳ ಕೊನೆಯ ಹೊತ್ತಿಗೆ ಎಳೆ ಬಿಡಿಸುವ ವೇಗ (ಪಟ್ಟಿಗಳನ್ನು ಮಾಡುವುದೂ ಸೇರಿದಂತೆ) ಗಂಟೆಗೆ ಎರಡೂವರೆ ತೊಲವನ್ನು ತಲುಪಬೇಕು.
3. ಆರು ತಿಂಗಳ ಕೊನೆಯ ಹೊತ್ತಿಗೆ ಸುರಳಿ ಸುತ್ತುವುದೂ ಸೇರಿದಂತೆ, ತಕಲಿಯಲ್ಲಿ ನೂಲುವ ವೇಗ, ಮೂರು ಗಂಟೆಗಳಲ್ಲಿ ಹತ್ತು ಎಣಿಕೆಯ ನೂಲುಹುರಿ ಎರಡು ಲಡಿಗಳಷ್ಟು ಇರಬೇಕು.
4. ಈ ಅವಧಿಯಲ್ಲಿ ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ ತಕಲಿಯಲ್ಲಿ ನೂಲುವ ಸರಾಸರಿ ವೇಗ ಮೂರು ಗಂಟೆಗಳಲ್ಲಿ ಹತ್ತರ ಎಣಿಕೆಯ ನೂಲುಹುರಿ ಒಂದೂಕಾಲು ಲಡಿಯನ್ನು ತಲುಪಬೇಕು. ಒಟ್ಟು ಉತ್ಪಾದನೆ ಎರಡೂ ಕಾಲು ಸೇರು ಅಳೆಯುವ 45 ಗೂಂದಿಗಳಷ್ಟು ಇರಬೇಕು. ಕೂಲಿ ಸೇರಿಗೆ ರೂ. 1-6-0 ರಂತೆ (ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ) ರೂ. 2-8-6 ಆಗಿರಬೇಕು.

## ತಕಲಿ ನೂಲುವ ಯಂತ್ರವಿಜ್ಞಾನಕ್ಕೆ ಸಂಬಂಧಪಟ್ಟಂತೆ

## ಕೆಲವು ಪ್ರಶ್ನೆಗಳು

1. ಹೆಚ್ಚಿನ ಪ್ರಮಾಣದ ನೂಲುಹುರಿಯನ್ನು ತಕಲಿಗೆ ಸುತ್ತಿದರೆ ತಕಲಿ ತಿರುಗುವ ಸುತ್ತುಗಳ ಸಂಖ್ಯೆ ಯಾಕೆ ಕಡಮೆಯಾಗುತ್ತದೆ?
2. ನೂಲುಹುರಿಯನ್ನು ಸಡಿಲವಾಗಿ ತಕಲಿಗೆ ಸುತ್ತಿದರೆ ಯಾಕೆ ಸುತ್ತುಗಳ ಸಂಖ್ಯೆ ಕಡಿಮೆಯಾಗುತ್ತದೆ?
3. ತಕಲಿ ತಿರುಗುವ ಸುತ್ತುಗಳ ಸಂಖ್ಯೆ ಹೆಚ್ಚಲೆಂದು ಏಕೆ ಬೂದಿಯನ್ನು ಹಚ್ಚುತ್ತೇವೆ?

## ತರಗತಿ

## II

## ಮೊದಲ ಅರ್ಧವಾರ್ಷಿಕ ಅವಧಿ

## ನೂಲುವಿಕೆ

1. ಈ ಅವಧಿಯಲ್ಲಿ ವಿದ್ಯಾರ್ಥಿಗಳಿಗೆ ಹತ್ತಿಯಿಂದ ಬೀಜವನ್ನು ಬಿಡಿಸುವುದನ್ನು (ginning) ಹೇಳಿಕೊಡಬೇಕು.
2. ಮೊದಲು ಮರದ ಹಲಗೆ ಮತ್ತು ಕಬ್ಬಿಣದ ಸಲಾಕಿಯನ್ನು ಉಪಯೋಗಿಸಿ ಹತ್ತಿಯಿಂದ ಬೀಜ ಬಿಡಿಸುವುದನ್ನು ಕಲಿಸಬೇಕು. ಹಾಗೆ ಬಿಡಿಸುವ ವೇಗ ಅರ್ಧ ಗಂಟೆಗೆ ಒಂದು ಚಟಾಕನ್ನು ತಲುಪಿದಾಗ ಹಳ್ಳಿಯ ಕೈರಾಟೆಯನ್ನು ಪರಿಚಯಿಸಬೇಕು.
3. ಆರು ತಿಂಗಳ ಕೊನೆಯ ಹೊತ್ತಿಗೆ ಹಿಂಜುವ ವೇಗ ಅರ್ಧ ಗಂಟೆಗೆ ಇಪ್ಪತ್ತು ತೊಲ ಹತ್ತಿಯನ್ನು ತಲುಪಿರಬೇಕು.
4. ಅವಧಿಯ ಕೊನೆಯ ಹೊತ್ತಿಗೆ ಹತ್ತಿಯನ್ನು ಹಿಂಜಿ ಎಳೆಗಳನ್ನು ಬಿಡಿಸುವ ವೇಗ (ಪಟ್ಟಿಗಳನ್ನು ಮಾಡುವುದೂ ಸೇರಿದಂತೆ) ಗಂಟೆಗೆ ಮೂರು ತೊಲವನ್ನು ತಲುಪಿರಬೇಕು.
5. ಅವಧಿಯ ಕೊನೆಯ ಹೊತ್ತಿಗೆ ತಕಲಿಯಲ್ಲಿ ನೂಲುವ ವೇಗ (ಸುರುಳಿ ಸುತ್ತುವುದೂ ಸೇರಿದಂತೆ) ಮೂರು ಗಂಟೆಯಲ್ಲಿ ಹತ್ತು ಎಣಿಕೆಯ ನೂಲುಹುರಿಯನ್ನು ಎರಡೂ ಕಾಲು ಲಡಿಗಳಷ್ಟು ತಲುಪಿರಬೇಕು.

6. ಹಿಂಜಿ ಎಳೆ ಬಿಡಿಸುವುದೂ ಸೇರಿದಂತೆ ತಕಲಿಯಲ್ಲಿ ನೂಲುವ ಪ್ರತಿದಿನದ ಸರಾಸರಿ ವೇಗ ಅವಧಿಯ ಕೊನೆಯ ಹೊತ್ತಿಗೆ ಮೂರು ಗಂಟೆಯಲ್ಲಿ ಹನ್ನೆರಡು ಎಣಿಕೆಯ ನೂಲುಹುರಿ ಒಂದೂ ಮುಕ್ಕಾಲು ಲಡಿಯಷ್ಟನ್ನು ತಲುಪಿರಬೇಕು. ಒಟ್ಟು ಉತ್ಪಾದನೆ 2 ಸೇರು 10 ಚಟಾಕಿನ ತೂಕದಂತೆ 63 ಗೂಂದಿಯಷ್ಟು ಇರಬೇಕು. ಹಿಂಜಿ ಎಳೆಗಳನ್ನು ಬಿಡಿಸುವುದಕ್ಕೂ ಸೇರಿದಂತೆ ಕೂಲಿ ಒಂದು ಸೇರಿಗೆ ರೂ. 1-6 ರಂತೆ ರೂ. 3-9-9. ಹತ್ತಿ ಹಿಂಜುವುದಕ್ಕೆ ರೂ. -/4/- ಸೇರಿಸಿದರೆ ಒಟ್ಟು ಕೂಲಿ ರೂ. 3-13-9.

## ತರಗತಿ

## II

## ದ್ವಿತೀಯ ಅರ್ಧವಾರ್ಷಿಕ ಅವಧಿ

1. ಈ ಅವಧಿಯಲ್ಲಿ ವಿದ್ಯಾರ್ಥಿಗಳಿಗೆ ಎರಡು ತೋಡುಗಳ ತಿರುಗಚ್ಚುಗಂಬಿಯುಳ್ಳ (Modies (ಮೋಡಿಗಳು)) ಎರವಾಡ ಚರಕದಲ್ಲಿ ನೂಲುವುದನ್ನು ಹೇಳಿಕೊಡಬೇಕು.
2. ಈ ಚರಕದಲ್ಲಿ ಒಮ್ಮೆ ಬಲಗೈ ನಂತರ ಎಡಗೈ, ಹಾಗೆಯೇ ಎಡಗೈ ನಂತರ ಬಲಗೈಯಿಂದ ನೂಲುವುದನ್ನು ಹೇಳಿಕೊಡಬೇಕು.
3. ಈ ಅವಧಿಯ ಕೊನೆಯ ಹೊತ್ತಿಗೆ ಪಟ್ಟಿಗಳನ್ನು ಮಾಡುವುದೂ ಸೇರಿದಂತೆ ಹಿಂಜಿ ಎಳೆಗಳನ್ನು ಬಿಡಿಸುವ ವೇಗ ಗಂಟೆಗೆ ಮೂರೂವರೆ ತೊಲಗಳಷ್ಟನ್ನು ತಲುಪಬೇಕು.
4. ಈ ಅವಧಿಯ ಕೊನೆಯ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ತಕಲಿಯಲ್ಲಿ ನೂಲುವ ವೇಗ ಮೂರು ಗಂಟೆಗೆ ಹನ್ನೆರಡು ಎಣಿಕೆಯ ನೂಲುಹುರಿ ಎರಡೂ ಕಾಲು ಲಡಿಗಳಷ್ಟನ್ನು ತಲುಪಬೇಕು.
5. ಈ ಅವಧಿಯ ಕೊನೆಯ ಹೊತ್ತಿಗೆ ಚರಕದಲ್ಲಿ ನೂಲುವ ವೇಗ (ಸುರುಳಿ ಸುತ್ತುವುದೂ ಸೇರಿದಂತೆ) ಮೂರು ಗಂಟೆಗೆ ಹದಿನಾರು ಎಣಿಕೆಯ ನೂಲುಹುರಿ ಮೂರೂ ಮುಕ್ಕಾಲು ಲಡಿಗಳಷ್ಟು ಇರಬೇಕು.
6. ಈ ಅವಧಿಯಲ್ಲಿ ಉತ್ಪಾದಿಸಿದ ನೂಲುಹುರಿಯ ಎಣಿಕೆಯನ್ನು ಲೆಕ್ಕ ಹಾಕುವ ವಿಧಾನವನ್ನು ಹೇಳಿಕೊಡಬೇಕು. ವಿದ್ಯಾರ್ಥಿ ಕೈಯಾರೆ ಮಾಡಿ ಕಲಿಯುವ ವಿಧಾನವನ್ನು ಅದರ ಎಲ್ಲಾ ಸಹಸಂಬಂಧಿತ ಸೈದ್ಧಾಂತಿಕ ಅಂಶಗಳನ್ನು ನೆನಪಿನಲ್ಲಿಟ್ಟುಕೊಂಡು ಅಭ್ಯಾಸ ಮಾಡಬೇಕು.
7. ಈ ಅವಧಿಯಲ್ಲಿ ಹತ್ತಿಯನ್ನು ಹಿಂಜಿ ಎಳೆಗಳನ್ನು ಬಿಡಿಸುವುದನ್ನೂ ಸೇರಿದಂತೆ ಚರಕದಲ್ಲಿ ನೂಲುವ ದಿನನಿತ್ಯದ ಸರಾಸರಿ ವೇಗ ಮೂರು ಗಂಟೆಗೆ ಹದಿನಾಲ್ಕು ಎಣಿಕೆಯ ನೂಲುಹುರಿಯ ಎರಡೂ ಕಾಲು

ಲಡಿಗಳಷ್ಟನ್ನು ತಲುಪಬೇಕು. ಒಟ್ಟು ಉತ್ಪಾದನೆ ಮೂರು ಸೇರು ಮತ್ತು ಮೂರೂವರೆ ಚಟಾಕುಗಳಷ್ಟು ತೂಕದ 90 ಗೂಂದಿಗಳಷ್ಟು ಇರಬೇಕು. ಹಿಂಜಿ ಎಳೆಗಳನ್ನು ಬಿಡಿಸುವುದಕ್ಕೂ ಸೇರಿ ಕೂಲಿ ಸೇರಿಗೆ ರೂ. 1-10 ರಂತೆ ಒಟ್ಟು ರೂ. 5-3-6 ಆಗಿರುತ್ತದೆ. ಹತ್ತಿ ಹಿಂಜುವುದಕ್ಕೆ ರೂ. -/4/- ರಂತೆ ಒಟ್ಟು ಆದಾಯ ರೂ. 5-7-6 ಆಗಿರುತ್ತದೆ.

## ಚರಕದಲ್ಲಿ ನೂಲುವ ಯಂತ್ರವಿಜ್ಞಾನಕ್ಕೆ ಸಂಬಂಧಪಟ್ಟಂತೆ

## ಕೆಲವು ಪ್ರಶ್ನೆಗಳು

1. ಚರಕದ ತಿರುಗಚ್ಚುಗಂಬಿಯನ್ನು ನೆಲಕ್ಕೆ ಸಮನಾಂತರದಲ್ಲಿ ಅಥವಾ ಒಂದು ನಿರ್ದಿಷ್ಟ ಕೋನದಲ್ಲಿ ಇಟ್ಟು ನೂಲುವುದರಿಂದ ಆಗುವ ಅನುಕೂಲ ಮತ್ತು ಅನಾನುಕೂಲಗಳೇನು?
2. ರಾಟೆಯನ್ನು ತಿರುಗಚ್ಚುಗಂಬಿಯ ಮೇಲೆ ಸರಿಯಾಗಿ ಮಧ್ಯಭಾಗದಲ್ಲಿಟ್ಟು ತಿರುಗಿಸಲು ಏನು ಮಾಡಬೇಕು?
3. ಚರಕದ ಯಾವ ಭಾಗಗಳಿಗೆ ಎಣ್ಣೆ ಹಾಕಬೇಕು?
4. ಚರಕಕ್ಕೆ ಯಾಕೆ ಎಣ್ಣೆ ಹಾಕಬೇಕು?
5. ಎಣ್ಣೆ ಹಾಕಿದ ಮೇಲೆ ಚರಕ ಯಾಕೆ ಸರಾಗವಾಗಿ ಚಲಿಸುತ್ತದೆ?

ಇಲ್ಲಿ ಮಕ್ಕಳಿಗೆ ಘರ್ಷಣೆಯ ಪರಿಕಲ್ಪನೆಯನ್ನು ಮನವರಿಕೆ ಮಾಡಿಕೊಡಬೇಕು. ಬಾಗಿಲಿನ ಮತ್ತು ಉಯ್ಯಾಲೆಯ ಕೀಲುಗಳಿಗೆ ಹಾಗೂ ಬಾವಿಯಿಂದ ನೀರು ಸೇದುವ ರಾಟೆಯ ಸಂದುಗಳಿಗೆ ಎಣ್ಣೆ ಹಾಕುವುದರ ಪರಿಣಾಮಗಳನ್ನು ಸಹ ಮಕ್ಕಳು ಗಮನಿಸಬೇಕು.

## ತರಗತಿ

## III

## ಮೊದಲ ಅರ್ಧವಾರ್ಷಿಕ ಅವಧಿ

## ನೂಲುವುದು

1. ಈ ಮೊದಲ ಅರ್ಧವಾರ್ಷಿಕ ಅಧಿಯಲ್ಲಿ ವಿದ್ಯಾರ್ಥಿಗಳು ವಿವಿಧ ರೀತಿಯ ಹತ್ತಿಗಳನ್ನು ಗುರುತಿಸುವುದನ್ನು ಕಲಿಯಬೇಕು. ಅವರು ನೂಲಿನ ಎಳೆಯ ಉದ್ದವನ್ನು ಅಳೆಯುವುದು ಮತ್ತು ಯಾವ ಹತ್ತಿಯಿಂದ ಎಷ್ಟು ಎಣಿಕೆಯ

ನೂಲುಹುರಿಯನ್ನು ಉತ್ಪಾದಿಸಬಹುದು ಎನ್ನುವುದನ್ನು ಸಹ ಕಲಿಯಬೇಕು.

2. ಅವಧಿಯ ಕೊನೆಯ ಹೊತ್ತಿಗೆ ಹತ್ತಿ ಪಟ್ಟಿಗಳನ್ನು ಮಾಡುವುದೂ ಸೇರಿದಂತೆ ಹಿಂಜಿ ಎಳೆಗಳನ್ನು ಬಿಡಿಸುವ ವೇಗ ಗಂಟೆಗೆ ನಾಲ್ಕು ತೊಲಗಳ ಪ್ರಮಾಣವನ್ನು ತಲುಪಿರಬೇಕು.
3. ಅವಧಿಯ ಕೊನೆಯ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ತಕಲಿಯಲ್ಲಿ ನೂಲುವ ವೇಗ ಮೂರು ಗಂಟೆಗೆ ಹನ್ನೆರಡು ಎಣಿಕೆಯ ನೂಲುಹುರಿ ಎರಡೂವರೆ ಲಡಿಗಳಷ್ಟನ್ನು ತಲುಪಿರಬೇಕು.
4. ಹಾಗೆಯೇ ಈ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ಚರಕದಲ್ಲಿ ನೂಲುವ ವೇಗ ಮೂರು ಗಂಟೆಗೆ ಇಪ್ಪತ್ತು ಎಣಿಕೆಯ ನೂಲುಹುರಿ ಮೂರೂ ಮುಕ್ಕಾಲು ಲಡಿಗಳಷ್ಟನ್ನು ತಲುಪಿರಬೇಕು.
5. ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ ಈ ಅವಧಿಯಲ್ಲಿ ಪ್ರತಿನಿತ್ಯ ನೂಲುವ ವೇಗದ ಸರಾಸರಿ ಮೂರು ಗಂಟೆಯಲ್ಲಿ ಇಪ್ಪತ್ತು ಎಣಿಕೆಯ ನೂಲುಹುರಿ ಎರಡೂವರೆ ಲಡಿಗಳಷ್ಟು ಇರಬೇಕು. ಒಟ್ಟು ಉತ್ಪಾದನೆ ಎರಡೂಕಾಲು ಸೇರಿನ ತೂಕದ ತೊಂಬತ್ತು ಗೂಂದಿಗಳಿರಬೇಕು. ಹಿಂಜಿ ಎಳೆಗಳನ್ನು ಬಿಡಿಸುವುದರ ಕೂಲಿಯೂ ಸೇರಿದಂತೆ ಸೇರಿಗೆ ರೂ. 2-4-0 ರಂತೆ ಒಟ್ಟು ರೂ. 5-1-0 ಆಗಿರುತ್ತದೆ.

## ತರಗತಿ

## III

## ದ್ವಿತೀಯ ಅರ್ಧವಾರ್ಷಿಕ ಅವಧಿ

1. ಅವಧಿಯ ಕೊನೆಯ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ತಕಲಿಯಲ್ಲಿ ನೂಲುವ ವೇಗ ಮೂರು ಗಂಟೆಗೆ ಹನ್ನೆರಡು ಎಣಿಕೆಯ ನೂಲುಹುರಿ ಎರಡೂ ಮುಕ್ಕಾಲು ಲಡಿಗಳಷ್ಟು ತಲುಪಿರಬೇಕು.
2. ಅವಧಿಯ ಕೊನೆಯ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ಚರಕದಲ್ಲಿ ನೂಲುವ ವೇಗ ಮೂರು ಗಂಟೆಗೆ ಇಪ್ಪತ್ತು ಎಣಿಕೆಯ ನೂಲುಹುರಿ ನಾಲ್ಕೂವರೆ ಲಡಿಗಳಷ್ಟನ್ನು ತಲುಪಿರಬೇಕು.
3. ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ ಈ ಅವಧಿಯಲ್ಲಿ ಪ್ರತಿನಿತ್ಯ ನೂಲುವ ವೇಗದ ಸರಾಸರಿ ಮೂರು ಗಂಟೆಯಲ್ಲಿ ಇಪ್ಪತ್ತು ಎಣಿಕೆಯ ನೂಲುಹುರಿ ಮೂರೂ ಮುಕ್ಕಾಲು ಲಡಿಗಳಷ್ಟು ಇರಬೇಕು. ಒಟ್ಟು ಉತ್ಪಾದನೆ ಎರಡು ಸೇರು ಮತ್ತು ಹದಿನಾಲ್ಕೂವರೆ ಚಟಾಕುಗಳ ತೂಕದ 117 ಗೂಂದಿಗಳಿರಬೇಕು. ಹಿಂಜಿ ಎಳೆ ಬಿಡಿಸುವುದರ ಕೂಲಿಯೂ ಸೇರಿದಂತೆ ಸೇರಿಗೆ 4/- ರಂತೆ ಒಟ್ಟು ರೂ. 6-8-9 ಆಗಿರುತ್ತದೆ.

## ಹಿಂಜಿ ಎಳೆಗಳನ್ನು ಬಿಡಿಸುವ ಮತ್ತು ನೂಲುವ ಯಂತ್ರವಿಜ್ಞಾನಕ್ಕೆ ಸಂಬಂಧಪಟ್ಟಂತೆ ಕೆಲವು ಪ್ರಶ್ನೆಗಳು

1. ತಿರುಗಚ್ಚುಗಂಬಿಯ ಅನುಕೂಲಗಳೇನು?
2. ಆಗಬೇಕಾಗಿರುವುದಕ್ಕಿಂತ ಕಡಮೆ ಪ್ರಮಾಣದಲ್ಲಿ ಆಗುವ ಕೆಲಸಕ್ಕೆ (‘ಪೋಲು’) ಕಾರಣವೇನಿರಬಹುದು? ಆಗದಂತೆ ತಡೆಯುವುದು ಹೇಗೆ?
3. ಹಿಂಜಿ ಎಳೆಗಳನ್ನು ಬಿಡಿಸುವ ಕಮಾನಿನ ತಂತಿಯ ಮೇಲೆ ಬಲವಾಗಿ ಅಥವಾ ಸಡಿಲವಾಗಿ ಸುತ್ತಿದ ಹತ್ತಿಯಿಂದ ಹಿಂಜಿ ಎಳೆಗಳನ್ನು ಬಿಡಿಸುವುದರ ಮೇಲೆ ಆಗುವ ಪರಿಣಾಮವೇನು?
4. ಎರವಾಡ ಚರಕದಲ್ಲಿ ಇರುವ ಸ್ಪ್ರಿಂಗುಗಳಿಂದ ಆಗುವ ಉಪಯೋಗಗಳೇನು?

## ತರಗತಿ

## IV

## ಮೊದಲ ಅರ್ಧವಾರ್ಷಿಕ ಅವಧಿ

## ನೂಲುವುದು

1. ಈ ಮೊದಲ ಅರ್ಧವಾರ್ಷಿಕ ಅವಧಿಯಲ್ಲಿ ಕೆಳಗಿನ ಅಂಶಗಳ ಜೊತೆಗೆ ಅದಕ್ಕೆ ಸಹಸಂಬಂಧಿಸಿದ ಸೈದ್ಧಾಂತಿಕ ತಿಳುವಳಿಕೆಯನ್ನೂ ವಿದ್ಯಾರ್ಥಿಗಳಿಗೆ ನೀಡಬೇಕು:

   (a) ನೂಲುಹುರಿಯ ಬಲ ಮತ್ತು ಸಮತೆಗಳನ್ನು ಹೇಗೆ ಕಂಡು ಹಿಡಿಯುವುದು.
   (b) S/C ಸೂತ್ರವನ್ನು ಉಪಯೋಗಿಸಿಕೊಂಡು ವೇಗದ ಮೌಲ್ಯವನ್ನು ಹೇಗೆ ಕಂಡುಹಿಡಿಯುವುದು; S ಅಂದರೆ ವೇಗ (speed) ಮತ್ತು ಅ ಎಂದರೆ ಎಣಿಕೆ (count).

2. ವಿದ್ಯಾರ್ಥಿಗಳು ಹತ್ತಿ ಹಿಂಜುವ ಕೈಯಂತ್ರವನ್ನು ಮತ್ತು ಹಿಂಜಿ ಎಳೆಗಳನ್ನು ಬಿಡಿಸಲು ಬಳಸುವ ಕಮಾನನ್ನು ರಿಪೇರಿ ಮಾಡುವುದನ್ನು ಕಲಿಯಬೇಕು.
3. ಅವಧಿಯ ಕೊನೆಯ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ಚರಕದಲ್ಲಿ ನೂಲುವ ವೇಗ ಮೂರು ಗಂಟೆಗೆ ಇಪ್ಪತ್ನಾಲ್ಕು ಎಣಿಕೆಯ ನೂಲುಹುರಿ ನಾಲ್ಕೂವರೆ ಲಡಿಗಳಷ್ಟನ್ನು ತಲುಪಿರಬೇಕು.
4. ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ ಈ ಅವಧಿಯಲ್ಲಿ ಪ್ರತಿನಿತ್ಯ ನೂಲುವ ವೇಗದ ಸರಾಸರಿ ಮೂರು ಗಂಟೆಯಲ್ಲಿ ಇಪ್ಪತ್ನಾಲ್ಕು ಎಣಿಕೆಯ ನೂಲುಹುರಿ ಮೂರೂವರೆ ಲಡಿಗಳಷ್ಟು ಇರಬೇಕು. ಒಟ್ಟು ಉತ್ಪಾದನೆ ಎರಡು ಸೇರು ಮತ್ತು ಹತ್ತು ಚಟಾಕುಗಳ ತೂಕದ 126 ಗೂಂದಿಗಳಿರಬೇಕು. ಹಿಂಜಿ ಎಳೆಗಳನ್ನು ಬಿಡಿಸುವುದರ ಕೂಲಿಯೂ ಸೇರಿದಂತೆ ಸೇರಿಗೆ ರೂ. 2/14/- ರಂತೆ ಒಟ್ಟು ಕೂಲಿ ರೂ. 7-8-9 ಆಗಿರುತ್ತದೆ.

## ತರಗತಿ

## IV

## ದ್ವಿತೀಯ ಅರ್ಧವಾರ್ಷಿಕ ಅವಧಿ

1. ಈ ಅವಧಿಯಲ್ಲಿ ವಿದ್ಯಾರ್ಥಿಗಳಿಗೆ ಈ ಕೆಳಗಿನ ವಿಷಯಗಳನ್ನು ಹೇಳಿಕೊಡಬೇಕು:

   (a) ಎರವಾಡ ಚರಕದ ವಿವಿಧ ಭಾಗಗಳು ಮತ್ತು ರಿಪೇರಿ ಮಾಡುವ ರೀತಿ.
   (b) ಬಿದಿರಿನ ತಕಲಿಗಳನ್ನು ತಯಾರಿಸುವುದನ್ನು ಕಲಿಯಬೇಕು.

2. ಅವಧಿಯ ಕೊನೆಯ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ತಕಲಿಯಲ್ಲಿ ನೂಲುವ ವೇಗ ಮೂರು ಗಂಟೆಗೆ ಹದಿನಾಲ್ಕು ಎಣಿಕೆಯ ನೂಲುಹುರಿ ಮೂರು ಲಡಿಗಳಷ್ಟನ್ನು ತಲುಪಿರಬೇಕು.
3. ಅವಧಿಯ ಕೊನೆಯ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ಚರಕದಲ್ಲಿ ನೂಲುವ ವೇಗ ಮೂರು ಗಂಟೆಗೆ 28 ಎಣಿಕೆಯ ನೂಲುಹುರಿ ಐದು ಲಡಿಗಳಷ್ಟನ್ನು ತಲುಪಿರಬೇಕು.
4. ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ ಈ ಅವಧಿಯಲ್ಲಿ ಪ್ರತಿನಿತ್ಯ ನೂಲುವ ವೇಗದ ಸರಾಸರಿ ಮೂರು ಗಂಟೆಯಲ್ಲಿ 28 ಎಣಿಕೆಯ ನೂಲುಹುರಿ ಮೂರೂವರೆ ಲಡಿಗಳಷ್ಟು ಇರಬೇಕು. ಒಟ್ಟು ಉತ್ಪಾದನೆ

ಎರಡೂಕಾಲು ಸೇರು ತೂಕದ 126 ಗೂಂದಿಗಳಿರಬೇಕು. ಕೂಲಿ ಸೇರಿಗೆ ರೂ. 3/10/- ರಂತೆ ಒಟ್ಟು ಕೂಲಿ ರೂ. 8-2-6 ಆಗಿರುತ್ತದೆ.

## ನೂಲುವ ಯಂತ್ರಜ್ಞಾನಕ್ಕೆ

## ಸಂಬಂಧಪಟ್ಟಂತೆ ಕೆಲವು ಪ್ರಶ್ನೆಗಳು

1. ನೂಲುವ ವೇಗವನ್ನು ಹೆಚ್ಚಿಸುವುದಕ್ಕೋಸ್ಕರ ಸಣ್ಣ ವ್ಯಾಸವುಳ್ಳ ರಾಟೆಯೊಂದನ್ನು ಚರಕಕ್ಕೆ ಅಳವಡಿಸಲಾಗಿದೆ. ಆದರೆ ನೂಲುಹುರಿಯನ್ನು ಸುರುಳಿ ಸುತ್ತುವುದು ಯಾಕೆ ಕಷ್ಟವೆನ್ನಿಸುತ್ತ್ತದೆ?
2. ಎರವಾಡ ಚರಕದ ಎರಡು ಚಕ್ರಗಳ ಕೇಂದ್ರಗಳ ನಡುವೆ ಇರಬೇಕಾದ ಅಂತರವೆಷ್ಟು?
3. ಆಗಬೇಕಾಗಿದ್ದ ಸುತ್ತುಗಳಿಗಿಂತ ನಿಜವಾಗಿ ಆಗುವ ಸುತ್ತುಗಳ ಸಂಖ್ಯೆ ಯಾಕೆ ಕಡಮೆ (‘ಪೋಲು’) ಇರುತ್ತದೆ?

## ತರಗತಿ

## V

## ಮೊದಲ ಅರ್ಧವಾರ್ಷಿಕ ಅವಧಿ

## ನೂಲುವುದು

1. ಈ ಅವಧಿಯಲ್ಲಿ ವಿದ್ಯಾರ್ಥಿಗಳು ನಲವತ್ತು ಎಣಿಕೆಯ ನೂಲುಹುರಿಯನ್ನು ಆಂಧ್ರದ ಶೈಲಿಯಲ್ಲಿ ಹತ್ತಿ ಹಿಂಜುವುದು ಮತ್ತು ಹಿಂಜಿ ಎಳೆಗಳನ್ನು ಬಿಡಿಸುವುದನ್ನು ಮತ್ತು ನೂಲುವುದನ್ನು ಕಲಿಯಬೇಕು. ಆದರೆ ಎರವಾಡ ಚರಕದಲ್ಲಿ ನೂಲುವುದನ್ನು ಮುಂದುವರಿಸಬೇಕು.
2. ಅವಧಿಯ ಕೊನೆಯ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ನೂಲುವ ವೇಗ ಎರಡು ಗಂಟೆಗೆ 40 ರ ಎಣಿಕೆಯ ನೂಲುಹುರಿ ಎರಡು ಲಡಿಗಳಷ್ಟನ್ನು ತಲುಪಿರಬೇಕು.
3. ಈ ಅವಧಿಯಲ್ಲಿ ವಿದ್ಯಾರ್ಥಿಗಳು ಮಗಾನ್ (Magan) ಚರಕದಲ್ಲಿ ನೂಲುವುದನ್ನು ಕಲಿಯಬೇಕು.

4. ಅವಧಿಯ ಕೊನೆಯ ಹೊತ್ತಿಗೆ ಮಗಾನ್ ಚರಕದಲ್ಲಿ ಸುರುಳಿ ಸುತ್ತುವುದೂ ಸೇರಿದಂತೆ ಚರಕದಲ್ಲಿ ನೂಲುವ ವೇಗ ಒಂದು ಗಂಟೆಗೆ 24 ಎಣಿಕೆಯ ನೂಲುಹುರಿ ಎರಡೂವರೆ ಲಡಿಗಳಷ್ಟನ್ನು ತಲುಪಿರಬೇಕು.
5. ಹತ್ತಿ ಹಿಂಜುವುದು ಮತ್ತು ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ ಎರವಾಡ ಚರಕದಲ್ಲಿ ಪ್ರತಿನಿತ್ಯ ನೂಲುವ ವೇಗದ ಸರಾಸರಿ 2 ಗಂಟೆಯಲ್ಲಿ 40 ಎಣಿಕೆಯ ನೂಲುಹುರಿ ಒಂದೂಕಾಲು ಲಡಿಗಳಷ್ಟು ಮತ್ತು ಮಗಾನ್ ಚರಕದಲ್ಲಿ ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ ಒಂದು ಗಂಟೆಯಲ್ಲಿ 24 ಎಣಿಕೆಯ ನೂಲುಹುರಿ ಒಂದೂವರೆ ಲಡಿಗಳಷ್ಟನ್ನು ತಲುಪಿರಬೇಕು.
6. ಆರು ತಿಂಗಳಿಗೆ ಒಟ್ಟು ಉತ್ಪಾದನೆ 40 ರ ಎಣಿಕೆಯ 9 ಚಟಾಕುಗಳ ತೂಕದ 45 ಗೂಂದಿಗಳು ಹಾಗೂ ಒಂದು ಸೇರು, 2 ಚಟಾಕುಗಳ ತೂಕದ 24 ಎಣಿಕೆಯ 54 ಗೂಂದಿಗಳಷ್ಟು ಇರಬೇಕು.
7. ಕೂಲಿ 40 ಎಣಿಕೆಯ ನೂಲುಹುರಿಗೆ ಸೇರಿಗೆ ರೂ. 6/4/- ರಂತೆ 3-8-3 ಮತ್ತು ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ 20 ಎಣಿಕೆಯ ನೂಲುಹುರಿಗೆ ಸೇರಿಗೆ ರೂ. 2/14/- ರಂತೆ ರೂ. 3-3-9 ಆಗಿರುತ್ತದೆ. ಈ ಅವಧಿಯ ಒಟ್ಟು ಕೂಲಿ ರೂ. 6/12/- ಆಗಿರುತ್ತದೆ.

## ತರಗತಿ

## V

## ದ್ವಿತೀಯ ಅರ್ಧವಾರ್ಷಿಕ ಅವಧಿ

1. ಈ ಅವಧಿಯಲ್ಲಿ ವಿದ್ಯಾರ್ಥಿ ಅರವತ್ತು ಎಣಿಕೆಯ ನೂಲು ಹುರಿಯನ್ನು ನೂಲುವುದನ್ನು ಕಲಿಯಬೇಕು.
2. ಈ ಅರ್ಧವಾರ್ಷಿಕ ಅವಧಿಯಲ್ಲಿ ಕೆಳಗಿನ ಅಂಶಗಳ ಜೊತೆಗೆ ಅದಕ್ಕೆ ಸಹಸಂಬಂಧಿಸಿದ ಸೈದ್ಧಾಂತಿಕ ತಿಳುವಳಿಕೆಯನ್ನೂ ವಿದ್ಯಾರ್ಥಿಗಳಿಗೆ ನೀಡಬೇಕು :

    (a) ಒಂದು ಗಜ ಬಟ್ಟೆಗೆ ಬೇಕಾಗುವಷ್ಟು ನೂಲನ್ನು ಉತ್ಪಾದಿಸಬೇಕು.
    (b) ನಿರ್ದಿಷ್ಟ ಎಣಿಕೆಯ ಒಂದು ಇಂಚು ನೂಲುಹುರಿಯನ್ನು ಉತ್ಪಾದಿಸಲು ಅಗತ್ಯವಾದ ನಿರ್ದಿಷ್ಟ ಗಟ್ಟಿದಾರದ ಬಗೆಗಿನ ಅರಿವು.
    (c) ತಿರುಗಚ್ಚಿನ ಸುತ್ತುಗಳು ಮತ್ತು ಚಕ್ರದ ಸುತ್ತುಗಳ ನಡುವೆ ಇರಬೇಕಾದ ಅನುಪಾತ.

3. ಈ ಅವಧಿಯಲ್ಲಿ ವಿದ್ಯಾರ್ಥಿಗಳು ತಿರುಗಚ್ಚನ್ನು ಸರಿಪಡಿಸುವ ವಿಧಾನವನ್ನು ಕಲಿಯಬೇಕು.
4. ವಿದ್ಯಾರ್ಥಿಗಳು ಎರವಾಡ, ಮಗಾನ್, ಸಾವಳಿ ಇತ್ಯಾದಿ ವಿಭಿನ್ನ ಚರಕಗಳ ನಡುವಿನ ಹೋಲಿಕಾತ್ಮಕ ಅಂಶಗಳ ಬಗ್ಗೆ ತಿಳಿಯಬೇಕು.
5. ಅವಧಿಯ ಕೊನೆಯ ಹೊತ್ತಿಗೆ ಸುರುಳಿ ಸುತ್ತುವುದೂ ಸೇರಿದಂತೆ ತಕಲಿಯಲ್ಲಿ ನೂಲುವ ವೇಗ ಮೂರು ಗಂಟೆಗೆ 16 ಎಣಿಕೆಯ ನೂಲುಹುರಿ ಮೂರು ಲಡಿಗಳಷ್ಟನ್ನು ತಲುಪಿರಬೇಕು.
6. ಹತ್ತಿ ಹಿಂಜುವುದು ಮತ್ತು ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ ನೂಲುವ ವೇಗ 2 ಗಂಟೆಯಲ್ಲಿ 60 ಎಣಿಕೆಯ ನೂಲುಹುರಿ ಎರಡು ಲಡಿಗಳಷ್ಟು ಮತ್ತು ಮಗಾನ್ ಚರಕದಲ್ಲಿ ಹಿಂಜಿ ಎಳೆಗಳನ್ನು ಬಿಡಿಸುವುದೂ ಸೇರಿದಂತೆ ಒಂದು ಗಂಟೆಯಲ್ಲಿ 28 ಎಣಿಕೆಯ ನೂಲುಹುರಿ ಮೂರು ಲಡಿಗಳಷ್ಟನ್ನು ತಲುಪಿರಬೇಕು.
7. ಈ ಅವಧಿಯಲ್ಲಿ ಪ್ರತಿನಿತ್ಯ ನೂಲುವ ವೇಗದ ಸರಾಸರಿ 60 ಎಣಿಕೆಯ ನೂಲುಹುರಿ ಒಂದೂಕಾಲು ಲಡಿಗಳಷ್ಟು ಮತ್ತು 28 ಎಣಿಕೆಯ ನೂಲುಹುರಿ ಎರಡು ಲಡಿಗಳಷ್ಟನ್ನು ತಲುಪಿರಬೇಕು. ಆರು ತಿಂಗಳಿಗೆ ಒಟ್ಟು ಉತ್ಪಾದನೆ 60 ರ ಎಣಿಕೆಯ 6 ಚಟಾಕುಗಳ ತೂಕದ 45 ಗೂಂದಿಗಳು ಹಾಗೂ ಒಂದು ಸೇರು, ನಾಲ್ಕೂವರೆ ಚಟಾಕುಗಳ ತೂಕದ ಮತ್ತು 28 ಎಣಿಕೆಯ 72 ಗೂಂದಿಗಳಷ್ಟ್ಟು ಇರಬೇಕು.
8. ಕೂಲಿ 60 ಎಣಿಕೆಯ ನೂಲುಹುರಿಗೆ ಸೇರಿಗೆ ರೂ. 11/4/0 ರಂತೆ ರೂ. 4-3-6 ಆಗಿರುತ್ತದೆ. ಹಾಗೂ 28 ಎಣಿಕೆಯ ನೂಲುಹುರಿಗೆ ಸೇರಿಗೆ ರೂ. 3-10-0 ರಂತೆ ರೂ. 4-10-3 ಆಗಿರುತ್ತದೆ. ಒಟ್ಟು ಕೂಲಿ ರೂ. 8-13-9 ಆಗಿರುತ್ತದೆ.

## ನೂಲುವ ಯಂತ್ರವಿಜ್ಞಾನಕ್ಕೆ ಸಂಬಂಧಪಟ್ಟಂತೆ ಕೆಲವು ಪ್ರಶ್ನೆಗಳು

1. ರಾಟೆ ತಿರುಗಚ್ಚುಗಂಬಿಯ ಓರೆಯಾಗಿರುವ ಭಾಗದ ಕಡೆಗೆ ವಾಲಿದಂತೆ ಏಕೆ ಇರುತ್ತದೆ?
2. ತಿರುಗಚ್ಚು ಮಾಡುವ ಸುತ್ತುಗಳನ್ನು ಹೆಚ್ಚಿಸಬೇಕೆಂದರೆ ಈ ಕೆಳಗಿನ ಯಾವುದನ್ನು ಹೆಚ್ಚಿಸಬೇಕು?

   ಚರಕ ಚಲಿಸುವಂತೆ ಮಾಡುವ ಚಕ್ರದ ವ್ಯಾಸ ಅಥವಾ ಮಧ್ಯದಲ್ಲಿರುವ ಚಕ್ರದ ವ್ಯಾಸ.

3. ವಿಭಿನ್ನ ರೀತಿಯ ಸಾಮಗ್ರಿಗಳ (ಹತ್ತಿ, ಅಂತ್ರ, ತೊಗಲು) ಉಪಯೋಗಗಳು. ಪಟ್ಟಿಗಳನ್ನು ಮಾಡಲು ಬಳಸುವ ಸಾಮನ್ಯ ನಿಯಮಗಳು.
4. ಜ್ಯೋತಾರ್ (Jyotar) ನ ಉಪಯೋಗಗಳು.
5. ಹಿಂಜಿ ಎಳೆಗಳನ್ನು ಬಿಡಿಸುವ ಕಮಾನಿನ ಹಿಡಿಯನ್ನು ಎಲ್ಲಿ ಇರಿಸಬೇಕು? ಸಮತೋಲನದ ನಿಯಮ.
6. ಸಾವಳಿ ಚರಕದ ಎರಡು ಸಾಮಗ್ರಿಗಳನ್ನು ಸಮನಾಂತರದಲ್ಲಿ ಇರಿಸುವುದರಿಂದ ಆಗುವ ಲಾಭಗಳು.
7. ಮರದ ಗುಣವನ್ನು ಆಧರಿಸಿ ಎರವಾಡ ಚರಕದ ಚಕ್ರದ ಯಾವ ಭಾಗದಲ್ಲಿ ಹಿಡಿಯನ್ನು ಇರಿಸಬೇಕು?
8. ಮರ ಮತ್ತು ಕಬ್ಬಿಣದ ನಡುವಿನ ಹಾಗೂ ಮರ ಮತ್ತು ಮರದ ನಡುವಿನ ಘರ್ಷಣೆಗಳ ಪ್ರಭಾವ ಮತ್ತು ವ್ಯತ್ಯಾಸಗಳೇನು?
9. ತಿರುಗಚ್ಚುಗಂಬಿಯಲ್ಲಿ ರಾಟೆಯನ್ನು ಎಲ್ಲಿ ಇರಿಸಬೇಕು?
10. ಘರ್ಷಣೆಯ ದೃಷ್ಟಿಯಿಂದ ಮರದ ಮತ್ತು ಕಬ್ಬಿಣದ ಚಕ್ರಗಳ ಅಚ್ಚುಗಂಬಿಯ ಮೇಲೆ ಹಿತ್ತಾಳೆ, ಚೆಂಡುಕಬ್ಬಿಣ ಮತ್ತು ಮರದ ಬೇರಿಂಗುಗಳು ಬೀರುವ ಬೇರೆ ಬೇರೆ ರೀತಿಯ ಪರಿಣಾಮಗಳು ಯಾವುವು?

## ಪ್ರತಿ ವಿದ್ಯಾರ್ಥಿ ಐದು ವರ್ಷಗಳಿಗೆ ಉತ್ಪಾದಿಸುವ ಆದಾಯ

| | **ರೂ –** | **ಅನ -** | **ಪೈಸೆ** |
|---|---|---|---|
| ಮೊದಲನೇ ವರ್ಷ | 3 | 9 | 0 |
| ಎರಡನೇ ವರ್ಷ | 9 | 5 | 3 |
| ಮೂರನೇ ವರ್ಷ | 11 | 9 | 9 |
| ನಾಲ್ಕನೇ ವರ್ಷ | 15 | 11 | 3 |
| ಐದನೇ ವರ್ಷ | 15 | 9 | 9 |
| ಐದು ವರ್ಷಗಳಿಗೆ | | | |
| **ಒಟ್ಟು ಆದಾಯ** | **55** | **13** | **0** |

ಬರುವ ಒಟ್ಟು ಆದಾಯದಲ್ಲಿ 25% ಅನ್ನು ಕಳೆದರೆ ಒಟ್ಟು ಆದಾಯ ರೂ. 41-13-9 ಆಗಿರುತ್ತದೆ.

# ನೇಯುವ ವಿಭಾಗ

## ತರಗತಿ

## VI ಮತ್ತು VII

1. ನೇಯುವ ಕೌಶಲ್ಯದ ವ್ಯಾಪ್ತಿ ಎಷ್ಟು ಹರವಾಗಿದೆಯೆಂದರೆ ಕೇವಲ ಎರಡು ವರ್ಷಗಳ ಅವಧಿಯಲ್ಲಿ ವಿದ್ಯಾರ್ಥಿಗಳಿಗೆ ಸಂಪೂರ್ಣ ತರಬೇತಿಯನ್ನು ಕೊಡುವುದು ಅಸಾಧ್ಯವೇ. ಆದ್ದರಿಂದ ಈ ಕರಕೌಶಲ್ಯಕ್ಕೆ ಸಂಬಂಧಪಟ್ಟ ಹಾಗೆ ಎರಡು ಪರಸ್ಪರ ಪರ್ಯಾಯ ಪಠ್ಯಕ್ರಮಗಳನ್ನು ಸೂಚಿಸಲಾಗಿದೆ. ಶಾಲೆಗಳು ಎರಡನ್ನೂ ನೀಡಿ ಆಯ್ಕೆಯನ್ನು ವಿದ್ಯಾರ್ಥಿಗೇ ಬಿಡಬಹುದು. ಆದಾಗ್ಯೂ, ಎರಡೂ ಸಂದರ್ಭಗಳಲ್ಲಿ, ಈ ಎರಡು ವರ್ಷಗಳ ಪಠ್ಯಕ್ರಮವು ಪೀಠಿಕೆಯ ರೂಪದಲ್ಲಿ ಒದಗಿ ಬರಬಹುದು ಅಷ್ಟೇ. ವಿದ್ಯಾರ್ಥಿ ಇದರಲ್ಲಿ ಸಂಪೂರ್ಣ ಜ್ಞಾನವನ್ನು ಪಡೆಯಲು ಇಚ್ಛಿಸಿದರೆ ಈ ಅವಧಿಯ ನಂತರದಲ್ಲಿ ತರಬೇತಿಯನ್ನು ಮುಂದುವರೆಸಬಹುದು.
2. ಈ ಹಂತದಲ್ಲಿ ವಿದ್ಯಾರ್ಥಿ 13-14 ರ ವಯಸ್ಸಿನವನಾಗಿರುತ್ತಾನೆ/ಳೆ. ಆದ್ದರಿಂದ ಈ ತರಬೇತಿ ಕೇವಲ ಪ್ರಾಥಮಿಕ ಮಟ್ಟದ್ದಾಗಿರುತ್ತದೆ.
3. ಐದು ವರ್ಷದ ಕೊನೆಯ ಹೊತ್ತಿಗೆ ವಿದ್ಯಾರ್ಥಿ ನೂಲುವುದರಲ್ಲಿ ಸಾಕಷ್ಟು ಅರಿವನ್ನು ಹೊಂದಿರುತ್ತಾನೆ/ಳೆ. ಹಾಗಾಗಿ ಈ ಹಂತದಲ್ಲಿ ಅದನ್ನು ಶಾಲಾ ವೇಳಾಪಟ್ಟಿಯಲ್ಲಿ ಸೇರಿಸಿಲ್ಲ. ಆದರೆ ವಿದ್ಯಾರ್ಥಿ ನೂಲುವುದನ್ನು ಮನೆಯಲ್ಲಿ ಮುಂದುವರೆಸಬೇಕು. ಹಾಗೆ ಉತ್ಪಾದಿಸಿದ ನೂಲುಹುರಿಗೆ, ಹಣದ ಅಥವಾ ಬಟ್ಟೆಯ ರೂಪದಲ್ಲಿ ಸೂಕ್ತ ಬೆಲೆಯನ್ನು ನೀಡಲು ಶಾಲೆ ವ್ಯವಸ್ಥೆಯನ್ನು ಮಾಡುವುದು.

## ತರಗತಿ

## VI

## ನೇಯುವುದು

## ಮೊದಲ ವರ್ಷ

1. ಈ ಪಠ್ಯಕ್ರಮವನ್ನು ಅರ್ಧವಾರ್ಷಿಕ ಅವಧಿಗಳಾಗಿ ವಿಭಾಗಿಸಿಲ್ಲ. ನೇಯುವಿಕೆಯ ವಿಶೇಷ ಗುಣವನ್ನು ಪರಿಗಣಿಸಿ ಎರಡು ವಾರ್ಷಿಕ ಅವಧಿಗಳನ್ನಾಗಿ ವಿಭಾಗಿಸಲಾಗಿದೆ.
2. ಮೊದಲ ವರ್ಷದಲ್ಲಿ ಈ ಕೆಳಗಿನ ಪ್ರಕ್ರಿಯೆಗಳನ್ನು ಕಲಿಸುವುದು:

(a) ಸುರುಳಿ ಸುತ್ತುವುದು.
(b) ರಾಟೆಗೆ ಸುತ್ತುವುದು.
(c) ಎಳೆಗೂಡಿಸುವುದು.
(d) ಮಗ್ಗದಲ್ಲಿ ಹಾಸು ಎಳೆಯುವುದು.
(e) (i) ಹರಡುವುದು ಮತ್ತು ಹಂಚುವುದು
(ii) ಗಾತ್ರವನ್ನು ಅಳೆಯುವುದು
(f) ಕೈಮಗ್ಗದಲ್ಲಿ ಎರಡೆಳೆಯಾಗಿ ನೇಯುವುದು.

3. ವರ್ಷದ ಕೊನೆಯ ಹೊತ್ತಿಗೆ ಮೇಲೆ ಹೇಳಿದ ಪ್ರಕ್ರಿಯೆಗಳಲ್ಲಿ ಈ ಕೆಳಗೆ ಹೇಳಲಾಗಿರುವ ವೇಗದ ಮಿತಿಯನ್ನು ತಲುಪಿರಬೇಕು:

(a) ಸುರುಳಿ ಸುತ್ತುವುದು - ಗಂಟೆಗೆ 5 ಗೂಂದಿಗಳು.
(b) ರಾಟೆಗೆ ಸುತ್ತುವುದು - ಗಂಟೆಗೆ 3 ಗೂಂದಿಗಳು.
(c) ಎಳೆಗೂಡಿಸುವುದು - ಗಂಟೆಗೆ ಎರಡೂವರೆ ಪಂಜಮ್ಗಳು (ಗಂಟೆಗೆ ಒಂದು ಲಾಳದಲ್ಲಿ 60 ಕಣ್ಣುಗಳಂತೆ).
(d) ಮಗ್ಗದಲ್ಲಿ ಹಾಸು ಎಳೆಯುವುದು - ಗಂಟೆಗೆ ಎರಡೂವರೆ ಪಂಜಮ್ಗಳು (ಗಂಟೆಗೆ ಒಂದು ಲಾಳದಲ್ಲಿ 60 ಕಣ್ಣುಗಳಂತೆ).
(e) (i) ಹರಡುವುದು ಮತ್ತು ಹಂಚುವುದು
(ii) ಗಾತ್ರವನ್ನು ಅಳೆಯುವುದು - ಇವೆರಡೂ ಪ್ರಕ್ರಿಯೆಗಳು ಮೂರು ಗಂಟೆಗಳಲ್ಲಿ.
(f) ತುಂಬಿದ ಬಾಬಿನ್ನಿನೊಂದಿಗೆ ನೇಯುವುದು - 3 ಗಂಟೆಗಳಲ್ಲಿ 2 ಗಜಗಳಂತೆ.

4. ಈ ಎಲ್ಲ ಪ್ರಕ್ರಿಯೆಗಳನ್ನು ಒಳಗೊಂಡAತೆ ಒಂದು ವರ್ಷದಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯೂ 108 ಗಜಗಳಷ್ಟು ಬಟ್ಟೆಯನ್ನು ನೇಯ್ದಿರಬೇಕು.
5. ಕೂಲಿ ಪ್ರತಿಯೊಂದು ತುಂಡಿಗೆ ರೂ. 0-12-6 ರ ದರದಂತೆ 10 ಗಜಗಳಿಗೆ ರೂ. 8-7-0 ಆಗಿರುತ್ತದೆ.

## ಎರಡನೇ ವರ್ಷ

1. ಈ ವರ್ಷದಲ್ಲಿ ಸಹ ವಿದ್ಯಾರ್ಥಿ ಎರಡೆಳೆಯಾಗಿ ನೇಯುವುದರ ತರಬೇತಿಯನ್ನು ಮುಂದುವರಿಸಬೇಕು. ಜೊತೆಗೆ ವಿನ್ಯಾಸದ ನೇಯ್ಗೆಯನ್ನೂ ಕಲಿಯಬೇಕು. ಉದಾಹರಣೆಯಾಗಿ ಜೇನುಗೂಡಿನ ವಿನ್ಯಾಸವುಳ್ಳ ಟವೆಲ್ಲುಗಳು, ಬಣ್ಣದ ಮೇಲುವಿನ್ಯಾಸವುಳ್ಳವು ಇತ್ಯಾದಿ.
2. ಈ ವರ್ಷದಲ್ಲಿ ವಿದ್ಯಾರ್ಥಿ ಸಹಸಂಬAಧಿತ ಸೈದ್ಧಾಂತಿಕ ಅರಿವಿನ ಜೊತೆಗೆ ಯಾವ ರೀತಿಯ ಪಂಜಮ್ಗೆ ಎಷ್ಟು ಎಣಿಕೆಯ ನೂಲುಹುರಿಯ ಅಗತ್ಯವಿದೆ ಎನ್ನುವುದನ್ನು ಲೆಕ್ಕ ಹಾಕಲು ಕಲಿಯಬೇಕು.

3. ವರ್ಷದ ಕೊನೆಯ ಹೊತ್ತಿಗೆ ಫ್ಲ್ಯೈ ಶಟಲ್ ಮಗ್ಗದ ಮೇಲೆ ತುಂಬಿದ ಬಾಬಿನ್ನುಗಳೊಂದಿಗೆ ನೇಯುವ ವೇಗ ಮೂರು ಗಂಟೆಗೆ ಮೂರೂವರೆ ಗಜಗಳಷ್ಟನ್ನು ತಲುಪಿರಬೇಕು.
4. ವರ್ಷದ ಕೊನೆಯ ಹೊತ್ತಿಗೆ ಪ್ರತಿಯೊಬ್ಬ ವಿದ್ಯಾರ್ಥಿಯೂ 216 ಗಜಗಳಷ್ಟು ಬಟ್ಟೆಯನ್ನು ನೇಯ್ದಿರಬೇಕು. ಕೂಲಿ ಪ್ರತಿ ಗಜಕ್ಕೆ ರೂ. 0/1/3 ರಂತೆ ಒಟ್ಟು ರೂ. 16/14/- ಆಗಿರುತ್ತದೆ.

**ಪ್ರತಿಯೊಬ್ಬ ವಿದ್ಯಾರ್ಥಿಯಿಂದ ಎರಡು ವರ್ಷಕ್ಕೆ ಬರುವ ಒಟ್ಟು ಆದಾಯ**

| | ರೂ | ಅನ | ಪೈಸೆ |
|---|---|---|---|
| ಮೊದಲ ವರ್ಷ | 8 | 7 | 0 |
| ಎರಡನೇ ವರ್ಷ | 16 | 14 | 0 |
| ಒಟ್ಟು ರೂ. | 25 | 5 | 0 |

ಪ್ರತಿಶತ 25% ರಷ್ಟನ್ನು ಕಳೆದರೆ ಎರಡು ವರ್ಷಕ್ಕೆ ಉಳಿಯುವ ಒಟ್ಟು ಆದಾಯ, ರೂ. 18-15-9.

## ಪಟ್ಟಿ ಮತ್ತು ದರಿ ನೇಯ್ಗೆ

## ಮೊದಲ ವರ್ಷ

1. ಈ ವಿಭಾಗದಲ್ಲಿ ವಿದ್ಯಾರ್ಥಿಗಳು ಈ ಕೆಳಗಿನ ಪ್ರಕ್ರಿಯೆಗಳ ಬಗೆಗಿನ ಅರಿವನ್ನು ಬೆಳೆಸಿಕೊಳ್ಳುವುದು:

- ನೂಲುಹುರಿಯನ್ನು ಹೊಸೆಯುವುದು.
- ಹಗ್ಗವನ್ನು ತಯಾರಿಸುವುದು.
- ಮಗ್ಗದ ಹಾಸನ್ನು ತಯಾರು ಮಾಡಿಕೊಳ್ಳುವುದು.
- ಹಾಸನ್ನು ವಿಂಗಡಿಸಿಕೊಳ್ಳುವುದು.

- ವಿವಿಧ ವಿನ್ಯಾಸಗಳ ಪಟ್ಟಿ, ದರಿ, ಆಸನಗಳು ಮತ್ತು ಜಮಖಾನಗಳನ್ನು ನೇಯುವುದು.

2. ಮೊದಲ ವರ್ಷದಲ್ಲಿ ವಿದ್ಯಾರ್ಥಿಗಳು ಬಿಳಿಯ ಮತ್ತು ಬಣ್ಣದ ಪಟ್ಟಿ, ಲೇಸು, ಬಿಳಿಯ ಮತ್ತು ಬಣ್ಣದ ಆಸನಗಳನ್ನು ಹಾಗೂ ಬಿಳಿಯ ದರಿಗಳನ್ನು ನೇಯುವುದನ್ನು ಕಲಿಯಬೇಕು.
3. ಪಟ್ಟಿ, ಲೇಸು ಮತ್ತು ದರಿಗಳನ್ನು ನೇಯಲು ಬೇರೆ ಬೇರೆ ಕೂಲಿದರಗಳಿವೆ. ಈ ದರಗಳು ಸಾಧಾರಣ ಬಟ್ಟೆಯನ್ನು ನೇಯುವುದರ ದರಗಳಿಗಿಂತಲೂ ಹೆಚ್ಚಿರುತ್ತವೆ. ಆದರೂ ಲೆಕ್ಕದ ಸಲುವಾಗಿ ಈ ವರ್ಷದ ನೇಯುವ ದರವನ್ನು ರೂ. 8/7/- ಕ್ಕೆ ನಿಗದಿಪಡಿಸಲಾಗಿದೆ.

## ಎರಡನೇ ವರ್ಷ

1. ಈ ವರ್ಷದ ಅವಧಿಯಲ್ಲಿ ವಿದ್ಯಾರ್ಥಿಗಳು ಬಣ್ಣದ ದರಿಗಳನ್ನು ಮತ್ತು ಜಮಖಾನಗಳನ್ನು ನೇಯುವುದನ್ನು ಕಲಿಯಬೇಕು. ವಿಭಿನ್ನ ವಿನ್ಯಾಸಗಳ ದರಿ ಮತ್ತು ಜಮಖಾನಗಳನ್ನು ನೇಯಬೇಕಿರುವುದರಿಂದ ಇಡೀ ವರ್ಷ ಅದನ್ನು ಮಾಡುವುದರಲ್ಲಿ ಕಳೆದು ಹೋಗುತ್ತದೆ.
2. ಪ್ರತಿ ವಿದ್ಯಾರ್ಥಿಯ ಒಂದು ವರ್ಷದ ಕೂಲಿಯನ್ನು ಲೆಕ್ಕ ಹಾಕಲು ಸಾಧಾರಣ ನೇಯ್ಗೆಗೆ ಕೊಡುವ ರೂ. 16/14/- ಅನ್ವಯಿಸುತ್ತದೆ.

## ನೂಲುವ ಮತ್ತು ನೇಯುವ ಯಂತ್ರವಿಜ್ಞಾನಕ್ಕೆ ಸಂಬಂಧಪಟ್ಟಂತೆ ಕೆಲವು ಸಮಸ್ಯೆಗಳು

1. ಚಾಲಕದಂಡದ (lever (ಸನ್ನೆ)) ತತ್ವಗಳು.

   - ಕೈಮಗ್ಗಕ್ಕೆ ಸಂಬಂಧಿಸಿದಂತೆ ‘ಮಾಡಿ-ಕಲಿ’ ವಿಧಾನದಲ್ಲಿ ಹಲವು ರೀತಿಯ ಸನ್ನೆಗಳ ಉಪಯೋಗವನ್ನು ವಿದ್ಯಾರ್ಥಿಗಳಿಗೆ ಹೇಳಿಕೊಡುವುದು.
   - ಮಗ್ಗದ ಚಲನೆಯನ್ನು ನಿಯಂತ್ರಿಸುವಲ್ಲಿ ಚಾಲಕದಂಡದ ಉಪಯೋಗ.

2. ‘ಮಾಡಿ-ಕಲಿ’ ಮೂಲಕ ಹತ್ತಿ ಹಿಂಜುವ ಯಂತ್ರದಲ್ಲಿರುವ ಹೆಲಿಕಲ್ ಹಲ್ಲುಳ್ಳ ಗೇರಿನ ಉಪಯೋಗಗಳು ಮತ್ತು ಗೂಟದ ತತ್ವಗಳ ಬಗ್ಗೆ ಹೇಳಿಕೊಡುವುದು.

3. ತಕಲಿಯ ತಿರುಗಚ್ಚುಗಂಬಿ ಕಬ್ಬಿಣದ ಬದಲು ಮgದಿಂದ ಮಾಡಿದ್ದಾದಾಗ ನೂಲುವ ವೇಗದ ಮೇಲೆ ಮತ್ತು ನೂಲುಹುರಿಯ ಎಣಿಕೆಯ ಮೇಲಾಗುವ ಪರಿಣಾಮಗಳು.
4. ತಕಲಿಯ ಬಿಲ್ಲೆ ಹಗುರ ಅಥವಾ ಭಾರವಾದಾಗ ನೂಲುವುದರ ಮೇಲಾಗುವ ಪರಿಣಾಮಗಳು.
5. ತಿರುಗಚ್ಚುಗಂಬಿ ಮತ್ತು ಬಿಲ್ಲೆಗಳ ಉದ್ದ ಮತ್ತು ಗಾತ್ರಗಳ ನಡುವಿನ ಸಂಬಂಧ ಮತ್ತು ಅನುಪಾತ ಯಾವುದಾಗಿರಬೇಕು?
6. ತಕಲಿಯಲ್ಲಿ ಬಿಲ್ಲೆ ಎಲ್ಲಿರಬೇಕು?
7. U ಮತ್ತು V ಆಕಾರದ ರಾಟೆಗಳ ಅನುಕೂಲ ಮತ್ತು ಅನಾನುಕೂಲಗಳೇನು?
8. ಮರದ ತೊಲೆಗಳ ವಿಚಲನದ ಬಗ್ಗೆ ಅಗತ್ಯವಾದ ಮಾಹಿತಿ. ಮರದ ಮೇಲ್ಮೈಯನ್ನು ತರಕಲಾಗಿ ಮಾಡುವುದರಿಂದ ಅದರ ಶಕ್ತಿಯ ಮೇಲೆ ಯಾವ ಪರಿಣಾಮವಾಗಬಲ್ಲದು?
9. ಮಗಾನ್ ಚರಕಕ್ಕೆ ಸಂಬಂಧಪಟ್ಟಂತೆ 'ವಂಕ' (ಹಿಂದಕ್ಕೂ ಮುಂದಕ್ಕೂ ಆಗುವ ಚಲನೆಯನ್ನು ಸುತ್ತುಚಲನೆಯಾಗಿಯೂ, ಸುತ್ತುಚಲನೆಯನ್ನು ಹಿಂದಕ್ಕೂ ಮುಂದಕ್ಕೂ ಆಗುವ ಚಲನೆಯನ್ನಾಗಿ ಪರಿವರ್ತಿಸಲು ಚಾಲಕದಂಡದಲ್ಲಿ ಮಾಡಿರುವ ಕೊಂಕು) ದ ತತ್ವವೇನು?

## ಸಾಮಾನ್ಯ ಯಂತ್ರವಿಜ್ಞಾನ

1. ಗಿರಣಿಯ ಮೇಲಿನ ಚಕ್ರಕ್ಕೆ ಮುಖ್ಯವಾದ ಆಣಿಯ ಆಧಾರವನ್ನು ಒದಗಿಸಿದರೆ ಆಗುವ ಅನುಕೂಲ. ಕೆಳಗಿನ ಚಕ್ರದ ಮೇಲೆ ಬೀಳುವ ಒತ್ತಡವನ್ನು ಹೆಚ್ಚಿಸಲು ಅಥವಾ ಕಡಮೆ ಮಾಡಲು ಒಂದು ಚಾಲಕದಂಡವನ್ನು (ಸನ್ನೆ) ಬಳಸಬಹುದು.
2. ಬಾವಿಯಿಂದ ನೀರನ್ನು ಎಳೆಯಲು ಬಳಸುವ ರಾಟೆ ಸಹ ಒಂದು ಸನ್ನೆಯೇ.
3. ಚಾಚುತೊಲೆ, ನೇರವಾದ, ಮತ್ತು ಜಾರುಗಂಬದ ಬಲಗಳಲ್ಲಿರುವ ವ್ಯತ್ಯಾಸ.
4. ಗಡಿಯಾರದ ಲೋಲಕ.
5. ವಿಭಿನ್ನ ಬಲಗಳ ನಡುವೆ ಮೂಡುವ ಪರಿಣಾಮ ಬಲವನ್ನು ಪ್ರಯೋಗದ ಮೂಲಕ ತೋರಿಸುವುದು.

ಪ್ರತಿಯೊಂದು ತರಗತಿಯು ನೂಲುವುದನ್ನು ಮತ್ತು ನೇಯುವುದನ್ನು ಮೂಲ ಕರಕೌಶಲ್ಯವನ್ನಾಗಿ ಹೊಂದಿರುವ ಒಟ್ಟು ಏಳು ತರಗತಿಗಳ ಒಂದು ಸಂಪೂರ್ಣ ಶಾಲೆಯನ್ನು ಕಟ್ಟಲು ಬೇಕಾದ ನೆಲದ ಅಂದಾಜು:

| | |
|---|---|
| 1. ಒಂದನೇ ತರಗತಿಯಿಂದ ಐದನೇ ತರಗತಿಯವರೆಗೆ | |
| ಅಗತ್ಯವಿರುವ ಐದು ನೂಲುವ ಕೊಠಡಿಗಳು | 600 ಚದರಡಿ x 5 = |
| | 3000 ಚದರಡಿಗಳು. |
| 2. ಹತ್ತಿಯನ್ನು ಹಿಂಜಿ ಎಳೆಗಳನ್ನು ಬಿಡಿಸುವ | |
| 150 ವಿದ್ಯಾರ್ಥಿಗಳಿಗೆ ಬೇಕಾದ ಜಾಗ: | |
| ಒಂದು ಸಲಕ್ಕೆ 20 ವಿದ್ಯಾರ್ಥಿಗಳು | 40 ಚದರಡಿ x 20 = |
| | 800 ಚದರಡಿಗಳು. |
| 3. ಆರು ಮತ್ತು ಏಳರ ತರಗತಿಗಳಿಗೆ ನೇಯ್ಗೆಯ | |
| ಕೊಠಡಿಗಳು | |
| 60 ವಿದ್ಯಾರ್ಥಿಗಳು - 20 ಮಗ್ಗಗಳು | 1800 ಚದರಡಿಗಳು. |
| 4. ಸ್ಟೋರ್ ರೂಮುಗಳು: | |
| ನೇಯ್ಗೆ | 600 ಚದರಡಿಗಳು. |
| ಪಟ್ಟಿಗಳು | 150 ಚದರಡಿಗಳು. |
| 5. ಎರಡು ಪಾಠದ ಕೊಠಡಿಗಳು | 600 ಚದರಡಿಗಳು. |
| 6. ಲೈಬ್ರರಿ, ಆಫೀಸು ಮತ್ತು ಶಾಲೆಯ ಸ್ಟೋರು | 600 ಚದರಡಿಗಳು. |
| 7. ವೆರಾಂಡ | 1150 ಚದರಡಿಗಳು. |
| 8. ಗೋಡೆಗಳು | 1500 ಚದರಡಿಗಳು . |
| | 11,000 ಚದರಡಿಗಳು. |

ಒಟ್ಟು ಏಳು ವರ್ಷದ ಆದಾಯ

| | ರೂ | ಅನ | ಪೈಸೆ |
|---|---|---|---|
| ನೂಲುವುದು | 41 | 13 | 9 |
| ನೇಯುವುದು | 18 | 15 | 9 |
| ಒಟ್ಟು ರೂ | 60 | 13 | 6 |

ಶಿಕ್ಷಕರ ಸಂಬಳವನ್ನು ತಿಂಗಳಿಗೆ ರೂ. 25 ರಂತೆ ಲೆಕ್ಕ ಹಾಕಲಾಗಿದೆ.

| | |
|---|---|
| ಏಳು ವರ್ಷಗಳಿಗೆ ಶಿಕ್ಷಕರ ಒಟ್ಟು ಸಂಬಳ | ರೂ. 2,100. |
| ತಲಾ ಶಿಕ್ಷಕರಿಗೆ 30 ವಿದ್ಯಾರ್ಥಿಗಳಂತೆ | |
| ಏಳು ವರ್ಷದ ಒಟ್ಟು ಆದಾಯ | ರೂ. 1,825. |

## ಸಾಮಾನ್ಯ ಸಲಹೆಗಳು

ಈ ಯೋಜನೆಯನ್ನು ಎಲ್ಲಾ ಅಗತ್ಯವಾದ ವಿವರಗಳೊಂದಿಗೆ ಇಲ್ಲಿ ನೀಡಲಾಗಿದ್ದರೂ ಸಹ ಇದನ್ನು ಅಂತಿಮ ಯೋಜನೆ ಎಂದು ಪರಿಗಣಿಸಲಾಗುವುದಿಲ್ಲ. ಸುಧಾರಣೆಗೆ ಅವಕಾಶವನ್ನೂ ನೀಡಲಾಗಿದೆ. ಆ ನಿಟ್ಟಿನಲ್ಲಿ ಈ ಕೆಳಗಿನ ಮುಖ್ಯ ಅಂಶಗಳನ್ನು ಪರಿಗಣಿಸುವುದು:

1. ತಿಂಗಳಿಗೆ ರೂ. 25 ರಂತೆ ಲೆಕ್ಕ ಹಾಕಲಾದ ಶಿಕ್ಷಕರ ಸಂಬಳಕ್ಕೆ ಸಂಬಂಧಿಸಿದ ಸಮಸ್ಯೆಯನ್ನು ಈ ಯೋಜನೆಯು ಹೆಚ್ಚಿನ ಮಟ್ಟಿಗೆ ಬಗೆಹರಿಸುತ್ತದೆ.
2. ವರ್ಷಕ್ಕೆ ಕೆಲಸ ಮಾಡಬೇಕಾದ ಒಟ್ಟು ದಿನಗಳಲ್ಲಿ ಪ್ರತಿಶತ 25% ಕಳೆಯುವುದನ್ನು ಅಂದಾಜಿಸಲಾಗಿದೆ.
3. ಕರಕೌಶಲ್ಯವನ್ನು ಇಲ್ಲಿ ಕೇವಲ ಒಂದು ಉದ್ಯಮವಾಗಿ ನೋಡದೇ ವಿದ್ಯೆಯನ್ನಾಗಿ ಪರಿಗಣಿಸಬೇಕಾಗುವುದರಿಂದ ಕೆಲಸದ ವೇಗವನ್ನು ಸಾಮಾನ್ಯವಾಗಿ ಸಾಧಿಸಬಹುದಾದ್ದಕ್ಕಿಂತಲೂ ಕಡಮೆ ಅಂದಾಜಿಸಲಾಗಿದೆ.

4. ಶ್ರಮಕ್ಕೆ ಸಂಭಾವನೆಯನ್ನು 1937 ರಲ್ಲಿ ಅಖಿಲ ಭಾರತ ನೂಲುಕಾರರ ಸಂಘದ ಮಹಾರಾಷ್ಟ್ರ ಶಾಖೆ ನೀಡುವ ದರದ ಆಧಾರದ ಮೇಲೆ ನಿಗದಿಪಡಿಸಲಾಗಿದೆ.
5. ಈ ಮೇಲೆ ನೀಡಿರುವ ಅಂಕಿಅಂಶಗಳಿಂತಲೂ ಆದಾಯ ಹೆಚ್ಚು ಇದ್ದೇ ಇರುತ್ತದೆ ಎಂದು ಭಾವಿಸಬಹುದು. ಕಡಮೆಯಾಗುವ ಸಂಭವವಂತೂ ಇರುವುದಿಲ್ಲ. ಹಾಗೇನಾದರೂ ಕಡಮೆಯಾದಲ್ಲಿ ಸಿಬ್ಬಂದಿ ಅಥವಾ ಉಪಕರಣಗಳ ಅಸಾಮರ್ಥ್ಯವೇ ಕಾರಣ ಎಂದು ಭಾವಿಸಬಹುದು.
6. ಪಟ್ಟಿಯಲ್ಲಿ ನೀಡಿರುವ ಉಪಕರಣಗಳು ವಿದ್ಯಾರ್ಥಿಯ ಸಾಮಾನ್ಯ ವಿದ್ಯಾಭ್ಯಾಸದಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತವೆ.
7. ವಿದ್ಯಾರ್ಥಿ ತರಬೇತಿಯ ಕೊನೆಯಲ್ಲಿ ನಿರೀಕ್ಷಿತ ಯಶಸ್ಸಿನ ಮಟ್ಟವನ್ನು ತಲುಪಿದ್ದಾನೆ/ಳೆ ಯೆ ಎಂಬುದನ್ನು ಕೆಲಸ ಮಾಡಿದ ಅವಧಿ ಮತ್ತು ಗಳಿಸಿದ ಆದಾಯದ ಮೇಲೆ ನಿರ್ಧರಿಸಬೇಕು. ಅಂದರೆ ಎರಡು ತಿಂಗಳ ಅವಧಿಯಲ್ಲಿ ದಿನಕ್ಕೆ 8 ಗಂಟೆಗಳಂತೆ 48 ದಿನಗಳು ವಿದ್ಯಾರ್ಥಿ ಕೆಲಸ ಮಾಡಿರಬೇಕು. ವಿದ್ಯಾರ್ಥಿಯು 12 ರೂ.ಗಳನ್ನು (ದಿನಕ್ಕೆ 4ರೂ.ಗಳಂತೆ) ಗಳಿಸಿದ್ದರೆ ಅವನು/ಳು ತೇರ್ಗಡೆಯಾಗಿದ್ದಾನೆ/ಳೆ ಎಂದು ಪರಿಗಣಿಸಬೇಕು.
8. ಈ ಕೋರ್ಸನ್ನು ಮುಗಿಸುವ ಹೊತ್ತಿಗೆ ಪ್ರತಿಯೊಬ್ಬ ವಿದ್ಯಾರ್ಥಿ ಸ್ವಾವಲಂಬನೆಯ ಘಟಕಗಳಾಗಿರುತ್ತಾರೆ.
9. ಮೊದಲ ವರ್ಷದಲ್ಲಿ ತಕಲಿಯಲ್ಲಿ ನೂಲುವುದನ್ನು ಸಾಮೂಹಿಕ ಕವಾಯತಿನ ರೂಪದಲ್ಲಿ ಕಲಿಸುವುದು ಸಾಧ್ಯ ಮತ್ತು ಹಾಗೆಯೇ ಕಲಿಸುವ ಅಗತ್ಯವಿದೆ.
10. ಚರಕ ಮತ್ತು ತಕಲಿಯಲ್ಲಿ ನೂಲುವುದನ್ನು ಕಲಿಸುವುದರ ಜೊತೆಗೆ ಸಂಗೀತವನ್ನೂ ಕಲಿಸಬೇಕು. ನೂಲುವುದರ ಉತ್ಸಾಹವನ್ನೂ ವೇಗವನ್ನೂ ಅದು ಹೆಚ್ಚಿಸಬಲ್ಲದು.
11. ಏಳು ವರ್ಷದ ಅವಧಿಯ ಎರಡನೆಯ ಭಾಗ ಮೊದಲ ಭಾಗಕ್ಕಿಂತಲೂ ಹೆಚ್ಚಿನ ಯಶಸ್ಸನ್ನು ತರಬಲ್ಲದು.
12. ಮನೆಯ ಖರ್ಚುವೆಚ್ಚಕ್ಕೆ ಸಹಾಯ ಮಾಡಬಲ್ಲರಾದರೆ ಮಾತ್ರ ಹುಡುಗರು ಶಾಲೆಯಲ್ಲಿ ದೀರ್ಘ ಕಾಲದವರೆಗೆ ಕಳೆಯಬಹುದು. ಆದ್ದರಿಂದ ಹುಡುಗರು ಮನೆಯಲ್ಲಿ ನೂಲುವ ಅಭ್ಯಾಸವನ್ನು ಮಾಡಿಕೊಳ್ಳುವಂತೆ ನೋಡಿಕೊಳ್ಳುವ ಮತ್ತು ಅದಕ್ಕೆ ತಕ್ಕ ಸಂಭಾವನೆಯನ್ನು ಪಡೆಯುವಂತೆ ಶಾಲೆಯು ವ್ಯವಸ್ಥೆಮಾಡಬೇಕು.

## ಅಗತ್ಯವಾದ ಉಪಕರಣಗಳ ಪಟ್ಟಿ: ನೂಲುವ ವಿಭಾಗ

### ನೂಲುವುದು

| | ರೂ | –ಅನ | -ಪೈಸೆ |
|---|---|---|---|
| ತಕಲಿ | 0 | 1 | 9 |
| ಸುರುಳಿ ರಾಟೆ | 0 | 1 | 0 |
| ತಕಲಿ ಪೆಟ್ಟಿಗೆ | 0 | 2 | 0 |
| ಎರವಾಡ ಚರಕ | 2 | 8 | 0 |
| ಚರಕದ ಸುರುಳಿ ರಾಟೆ | 0 | 2 | 0 |
| ಎಣ್ಣೆ ಕ್ಯಾನು | 0 | 1 | 0 |
| 27 x 9 ಇಂಚಿನ ಕಪ್ಪು ಬಣ್ಣದ ಬಟ್ಟೆ | 0 | 2 | 0 |
| ಇತರೆ | 0 | 1 | 3 |
| ಒಟ್ಟು ರೂ. | 3 | 3 | 0 |

### ಹತ್ತಿ ಹಿಂಜುವುದು

| | ರೂ | – ಅನ | - ಪೈಸೆ |
|---|---|---|---|
| 4x6x1 ಇಂಚುಗಳ ಮರದ ಹಲಗೆ | 0 | 1 | 0 |
| ಸಲಾಕೆ | 0 | 4 | 0 |
| ಗ್ರಾಮೀಣ ಹತ್ತಿ ಹಿಂಜುವ ಯಂತ್ರ | 1 | 10 | 0 |
| ಮೀನಿನ ದವಡೆಯ ಮೂಳೆ | 0 | 4 | 0 |
| **ಒಟ್ಟು ರೂ.** | **2** | **3** | **0** |

**ಹತ್ತಿ ಹಿಂಜಿ ಎಳೆಗಳನ್ನು ಬಿಡಿಸುವುದು**

| | ರೂ | ಅನ | ಪೈಸೆ |
|---|---|---|---|
| ಯುದ್ಧ-ಪಿಂಜನ್ (ಸಣ್ಣ ಕಮಾನು) | 0 | 8 | 0 |
| ಬಡಿಗೆ | 0 | 2 | 0 |
| ಪಟ್ಟಿಗಳನ್ನು ಮಾಡಿಕೊಳ್ಳಲು ಮರದ ಹಲಗೆ | 0 | 4 | 0 |
| ಹಿಡಿ | 0 | 3 | 0 |
| ಪಟ್ಟಿಗಳನ್ನು ಮಾಡಿಕೊಳ್ಳಲು ಸಲಾಕೆ | 0 | 1 | 0 |
| ಅಂತ್ರ ಇತ್ಯಾದಿ | 0 | 7 | 0 |
| ಚಾಪೆ | 0 | 2 | 0 |
| ಆಂಧ್ರ ಕಮಾನು | 0 | 5 | 0 |
| **ಒಟ್ಟು ರೂ.** | **2** | **0** | **0** |

**ಬೇರೆ ಸಾಧನಗಳು**

| | ರೂ | ಅನ | ಪೈಸೆ |
|---|---|---|---|
| ಸುತ್ತಿಗೆ | 0 | 7 | 0 |
| ಅಡಿಗಲ್ಲು | 0 | 8 | 0 |
| ಅರ | 1 | 0 | 0 |
| ಉಳಿ | 0 | 9 | 0 |
| ಸಣ್ಣ ಗರಗಸ | 0 | 8 | 0 |
| ಉಜ್ಜುಗೊರಡು | 1 | 0 | 0 |

| | | | |
|---|---|---|---|
| ಕೊರೆಯುವ ಯಂತ್ರ | 2 | 12 | 0 |
| ಚಾಕು | 0 | 4 | 0 |
| ಕತ್ತರಿ | 0 | 6 | 0 |
| ಸ್ಕ್ರೂ ಡ್ರೈವರು | 0 | 6 | 0 |
| ಸಣ್ಣ ತಕ್ಕಡಿ (1/16 ತೊಲದಿಂದ | | | |
| 2 ತೊಲಗಳವರೆಗೆ ತೂಕದ ಬಟ್ಟುಗಳೊಂದಿಗೆ) | 2 | 0 | 0 |
| ದೊಡ್ಡ ತಕ್ಕಡಿ (1/2 ಚಟಾಕು, 1 ಸೇರು) | 2 | 14 | 0 |
| **ಒಟ್ಟು ರೂ.** | **12** | **10** | **0** |
| ನಿವ್ವಳ ಮೊತ್ತ ರೂ. | 20 | 0 | 0 |

**ಸೂಚನೆ**

ಉಪಕರಣಗಳ ಮತ್ತು ಇತರ ಸಾಮಗ್ರಿಗಳ ಅಂದಾಜನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಬೆಲೆಗಳು ಸ್ವಲ್ಪಮಟ್ಟಿಗೆ ಆಚೀಚೆ ಸರಿಯಬಹುದು.

## ಬಟ್ಟೆ, ದರಿ ಮತ್ತು ಪಟ್ಟಿಗಳನ್ನು ನೇಯಲು ಬೇಕಾದ ಪರಿಕರಗಳು

### ಪಟ್ಟಿಯ ನೇಯ್ಗೆ

| | ರೂ | ಅನ | ಪೈಸೆ |
|---|---|---|---|
| ಹೊಸೆಯುವ ಚಕ್ರ | 1 | 8 | 0 |
| ಹಾಸು ವಿಂಗಡನೆಯ ಚೌಕಟ್ಟು | 0 | 8 | 0 |
| ಬಡಿಗೆ | 0 | 1 | 0 |
| **ಒಟ್ಟು ರೂ.** | **2** | **1** | **0** |

**ದರಿ ಮತ್ತು ಆಸನಗಳ ನೇಯ್ಗೆ**

| | ರೂ | ಅನ | ಪೈಸೆ |
|---|---|---|---|
| ಹಾಸು ವಿಂಗಡನೆಯ ಚೌಕಟ್ಟು | 0 | 12 | 0 |
| ಕವಲುಗೋಲು | 0 | 8 | 0 |
| ಕೂರಲು ಅಥವಾ ಒರಗಲು ಮತ್ತು ಆಧಾರಕ್ಕೆ ಬೇಕಾದ ಇತರೆ ಸಾಮಗ್ರಿಗಳು | 0 | 12 | 0 |
| **ಒಟ್ಟು ರೂ.** | **2** | **0** | **0** |

**ಎಳೆಗಳನ್ನು ಹಾಸುನೂಲಾಗಿ ಜೋಡಿಸುವುದು**

| | ರೂ | ಅನ | ಪೈಸೆ |
|---|---|---|---|
| ಚರಕದ ಕದಿರು ಅಥವಾ ಚಕ್ರಿ | 0 | 4 | 0 |
| ಸುರುಳಿ ಸುತ್ತುವ ಗಾಲಿ | 0 | 1 | 0 |
| ಉರುಳೆ | 0 | 0 | 6 |
| ಟಿನ್ ಬಾಬ್ಬಿನ್ನುಗಳು | 0 | 12 | 0 |
| ಹಾಸು ವಿಂಗಡನೆಯ ಚಕ್ರ | 1 | 8 | 0 |
| ಹಾಸು ವಿಂಗಡನೆಯ ಚೌಕಟ್ಟು | 2 | 0 | 0 |
| ಬಕೆಟ್ಟುಗಳು | 0 | 7 | 0 |
| ಹಗ್ಗ ಇತ್ಯಾದಿ | 0 | 7 | 0 |
| **ಒಟ್ಟು ರೂ.** | **5** | **8** | **0** |

## ಗಾತ್ರವನ್ನು ಅಳೆಯುವುದು

| | ರೂ | ಅನ | ಪೈಸೆ |
|---|---|---|---|
| ತೇಗದ ಕಂಬಗಳು | 3 | 4 | 0 |
| ಬಿದಿರಿನ ಕಂಬಗಳು | 0 | 8 | 0 |
| ಎರಡು ಬ್ರಷುಗಳು | 5 | 0 | 0 |
| **ಒಟ್ಟು ರೂ.** | **8** | **12** | **0** |

## ನೇಯುವುದು

| | ರೂ | ಅನ | ಪೈಸೆ |
|---|---|---|---|
| ಲಾಳಗಳು | 3 | 0 | 0 |
| ಕೈಮಗ್ಗ | 1 | 8 | 0 |
| ಫ್ಲೈ ಶಟಲ್ ಮಗ್ಗ | 7 | 0 | 0 |
| ರೋಲರು | 1 | 8 | 0 |
| ಕೈಮಗ್ಗ ಶಟಲ್ | 0 | 4 | 0 |
| ಫ್ಲೈ ಶಟಲ್ | 0 | 8 | 0 |
| ಮರದ ತೊಲೆ | 2 | 8 | 0 |
| ಲೆವೆಲ್ ಮಾಡೋ ಕುಪಿ | 0 | 12 | 0 |
| ಅಳತೆಗೋಲು | 0 | 3 | 0 |
| ಕಂಬಗಳು ಇತ್ಯಾದಿ | 1 | 0 | 0 |
| ದಪ್ಪ ಹಗ್ಗಗಳು ಇತ್ಯಾದಿ | 1 | 8 | 0 |
| **ಒಟ್ಟು ರೂ.** | **19** | **11** | **0** |

**ಹಾಸು ವಿಂಗಡನೆಯ ಚೌಕಟ್ಟನ್ನು ಮಾಡಿಕೊಳ್ಳುವುದು**

| | **ರೂ** | **– ಅನ** | **- ಪೈಸೆ** |
|---|---|---|---|
| ರಾಟೆ | 1 | 0 | 0 |
| ಸಿಲಿಂಡರ್ ಮತ್ತು ಮರದ ಪಿನ್ನುಗಳು | 0 | 4 | 0 |
| ಇತರೆ | 0 | 12 | 0 |
| **ಒಟ್ಟು ರೂ.** | **2** | **0** | **0** |
| **ನಿವ್ವಳ ಮೊತ್ತ ರೂ.** | **40** | **0** | **0** |

ಈ ಪರಿಕರಗಳ ಬೆಲೆ ಒಂದು ಸ್ಥೂಲವಾದ ಅಂದಾಜು ಮಾತ್ರ. ಸ್ಥಳೀಯ ಸನ್ನಿವೇಶಗಳಿಗೆ ತಕ್ಕಂತೆ ಆಚೀಚೆ ಸರಿಯುವ ಸಾಧ್ಯತೆ ಇರುತ್ತದೆ.

**ಪ್ರತಿಯೊಂದರಲ್ಲಿ 30 ವಿದ್ಯಾರ್ಥಿಗಳನ್ನು ಹೊಂದಿರುವ ಏಳು ತರಗತಿಗಳ ಪೂರ್ಣ ಪ್ರಮಾಣದ ಶಾಲೆಯಲ್ಲಿ ಹತ್ತಿ ಹಿಂಜಿ ಎಳೆಗಳನ್ನು ಬಿಡಿಸುವ, ನೂಲುವ ಮತ್ತು ನೇಯುವ ಪ್ರಕ್ರಿಯೆಗಳಿಗೆ ಬೇಕಾದ ಪರಿಕರಗಳು**

| **ವಸ್ತು** | **ದರ-ಒಂದಕ್ಕೆ ರೂ-ಅನ-ಪೈಸೆ** | | | **ಬೆಲೆ-ಒಟ್ಟು ರೂ-ಅನ-ಪೈಸೆ** | | |
|---|---|---|---|---|---|---|
| 1. 125 ಮಡಿಸಬಲ್ಲ ಚರಕಗಳು | 2 | 8 | 0 | 312 | 8 | 0 |
| 2. ಆಂಧ್ರ ಕಮಾನನ್ನು ಹೊರತುಪಡಿಸಿ ಉಳಿದೆಲ್ಲಾ ಪರಿಕರಗಳೂ ಸೇರಿದಂತೆ 30 ಹಿಂಜಿ ಎಳೆಗಳನ್ನು ಬಿಡಿಸುವ ಯಂತ್ರಗಳು | 1 | 11 | 0 | 50 | 10 | 0 |
| 3. *50 ತಕಲಿಗಳು ಮತ್ತು 50 ಸುರುಳಿ ಸಾಧನಗಳು | 0 | 2 | 9 | 8 | 9 | 6 |

| | | | | | | |
|---|---|---|---|---|---|---|
| 4. 5 ಹತ್ತಿ ಹಿಂಜುವ ಕೈಯಂತ್ರಗಳು | 1 | 10 | 0 | 8 | 2 | 0 |
| 5. 15 ಮರದ ಹಲಗೆಗಳು ಮತ್ತು | | | | | | |
| ಹಿತ್ತಾಳೆ ಸಲಾಕೆಗಳು | 0 | 5 | 0 | 4 | 11 | 0 |
| 6. 5 ಮಗಾನ್ ಚರಕಗಳು | 6 | 0 | 0 | 30 | 0 | 0 |
| 7. 5 ಸಾವಳಿ ಚರಕಗಳು | 1 | 4 | 0 | 6 | 4 | 0 |
| 8. ಮರಗೆಲಸದ ಸಾಧನಗಳು | | | | 25 | 0 | 0 |
| 9. ಎಲ್ಲಾ ಪರಿಕರಗಳೂ ಸೇರಿದಂತೆ | | | | | | |
| 20 ಮಗ್ಗಗಳು | 25 | 0 | 0 | 500 | 0 | 0 |
| 10. ಇತರೆ | | | | 54 | 3 | 6 |
| | | | **ಒಟ್ಟು ರೂ.** | **1000** | **0** | **0** |

**ಸೂಚನೆ:** ಈ ಮೇಲೆ ಸೂಚಿಸಿರುವ ಬೆಲೆಗಳು ಕೇವಲ ಅಂದಾಜು ಮೇರೆಗೆ. ಮಾರುಕಟ್ಟೆ ಮತ್ತು ಜಿಲ್ಲೆಯಿಂದ ಜಿಲ್ಲೆಗೆ ಬೆಲೆಯಲ್ಲಿ ಬದಲಾವಣೆಗಳು ಆಗಬಹುದು.

## ಕಾರ್ಯೋಪಯುಕ್ತ ಬಂಡವಾಳ

| | ರೂ | ಅನ | ಪೈಸೆ |
|---|---|---|---|
| 1. ಹತ್ತಿ ದಾಸ್ತಾನು | 300 | 0 | 0 |
| 2. ನೂಲುವ ಚಕ್ರಗಳು ಮತ್ತು ಇತರೆ ಪರಿಕರಗಳ ದಾಸ್ತಾನು | 100 | 0 | 0 |
| 3. ಪಟ್ಟಿಗಳು, ನೇಯುವ ಸಾಮಗ್ರಿಗಳು ಮತ್ತು ಇತರೆ | 100 | 0 | 0 |
| **ಒಟ್ಟು ರೂ.** | **500** | **0** | **0** |

★ ಪ್ರತಿ ವಿದ್ಯಾರ್ಥಿಯು ತಕಲಿ ಮತ್ತು ಸುರುಳಿ ಸಾಧನಗಳನ್ನು ಖರೀದಿಸಬೇಕಾಗುತ್ತದೆ. ಆದರೆ ಶಾಲೆಯು ಇವುಗಳನ್ನು ಒದಗಿಸಲು ನಿರ್ಧರಿಸಿದರೆ ಪಟ್ಟಿಯಲ್ಲಿನ ಈ ಪರಿಕರಕ್ಕಾಗಿ ನಿಗದಿಪಡಿಸಿದ ಮೊತ್ತಕ್ಕಿಂತ ಹೆಚ್ಚು ರೂ. 125 ಖರ್ಚು ಮಾಡಬೇಕಾಗಿಬರಬಹುದು.

## ಮೂಲ ಕರಕೌಶಲ್ಯಗಳಾಗಿ ರಟ್ಟು, ಮರ, ಮತ್ತು ಲೋಹದ ಕೆಲಸಕ್ಕಾಗಿ ಏಳು ವರ್ಷಗಳ ಪಠ್ಯಕ್ರಮ

ಈ ಪಠ್ಯಕ್ರಮವನ್ನು ಎರಡು ಭಾಗಗಳಾಗಿ ವಿಭಾಗಿಸಲಾಗಿದೆ:

(a) ರಟ್ಟಿನ ಕೆಲಸಕ್ಕೆ ಸಂಬಂಧಿಸಿದಂತೆ ಹಾಗೂ

(b) ಮರ ಮತ್ತು ಲೋಹದ ಕೆಲಸಗಳಿಗೆ ಸಂಬಂಧಿಸಿದಂತೆ.

1. ಒಂಭತ್ತು ವರ್ಷಕ್ಕಿಂತ ಕಡಮೆ ವಯಸ್ಸಿನ ಮಕ್ಕಳು ಮರ ಅಥವಾ ಲೋಹದಂತಹ ಭಾರವಾದ ಸಾಮಗ್ರಿಗಳನ್ನು ಸಂಭಾಳಿಸಲು ಅಶಕ್ತರಾದ್ದರಿಂದ ಮೊದಲ ಎರಡು ವರ್ಷಗಳನ್ನು ರಟ್ಟಿಗೆ ಸಂಬಂಧಿಸಿದ ಕರಕೌಶಲ್ಯವನ್ನು ಹೇಳಿಕೊಡುವುದರಲ್ಲಿ ಉಪಯೋಗಿಸಬೇಕು.
2. ಮರಗೆಲಸ ಮೂರನೇ ತರಗತಿಯಲ್ಲಿ ಮತ್ತು ಅದಕ್ಕೆ ಸಂಬಂಧಿಸಿದಂತೆ ಲೋಹದ ಕೆಲಸವನ್ನು ಐದನೇ ತರಗತಿಯಲ್ಲಿ ಪರಿಚಯಿಸಬೇಕು.
3. ಆರು ಮತ್ತು ಏಳನೇ ತರಗತಿಯಲ್ಲಿ ವಿದ್ಯಾರ್ಥಿ ತನ್ನ ಸಹಜವಾದ ಆಸಕ್ತಿಯನ್ನು ಆಧರಿಸಿ ಮರಗೆಲಸವನ್ನೋ ಅಥವಾ ಲೋಹಗೆಲಸವನ್ನೋ ಆರಿಸಿಕೊಳ್ಳಬಹುದು.
4. ಆರು ಮತ್ತು ಏಳನೇ ತರಗತಿಗಳಲ್ಲಿ ಮರ ಮತ್ತು ಲೋಹ ಇವೆರಡಕ್ಕೂ ಸಂಬಂಧಪಟ್ಟ ಐಚ್ಛಿಕ ತರಬೇತಿ ಇರುತ್ತದೆ. ಹಾಗೆಯೇ ರಟ್ಟಿಗೆ ಸಂಬಂಧಪಟ್ಟ ಹಾಗೆ ಮೂರು ತಿಂಗಳ ಮಟ್ಟಿಗಿನ ಐಚ್ಛಿಕ ತರಬೇತಿ ಸಹ ಇರುತ್ತದೆ.
5. ರಟ್ಟು, ಮರ ಮತ್ತು ಲೋಹಗೆಲಸದ ಶೈಕ್ಷಣಿಕ ಮೌಲ್ಯವನ್ನು ಸಂಪೂರ್ಣವಾಗಿ ಪಡೆಯಬೇಕೆಂದರೆ ಈ ಕೆಳಗಿನ ಎರಡು ಷರತ್ತುಗಳನ್ನು ಪೂರೈಸಲೇಬೇಕು:

   i) ತರಬೇತಿ ಪಡೆದ ಶಿಕ್ಷಕರು ಕ್ರಮಬದ್ಧ ಶಿಕ್ಷಣವನ್ನು ವ್ಯವಸ್ಥಿತ ರೀತಿಯಲ್ಲಿ ನೀಡಬೇಕು. ನುರಿತ ಕರಕುಶಲಕರ್ಮಿಗಳು ವಿದ್ಯಾರ್ಥಿಗಳಿಗೆ ಕರಕೌಶಲ್ಯದ ಪೂರ್ಣ ಶೈಕ್ಷಣಿಕ ಮೌಲ್ಯವನ್ನು ಮತ್ತು ಸೂಚ್ಯ ಪರಿಣಾಮಗಳನ್ನು ತಲುಪಿಸಬಲ್ಲರು ಎಂಬ ನಿರೀಕ್ಷೆ ಸಲ್ಲ.

   ii) ಬೋಧನೆಗೆ ಮಾರ್ಗದರ್ಶಕವಾಗಿ ಮತ್ತು ಬೋಧನಾ ವಿಧಾನಕ್ಕೆ ಸಂಬಂಧಪಟ್ಟಂತೆ ಚಟುವಟಿಕೆಗಳ ಮಾದರಿಗಳ ಸರಣಿಯನ್ನು ಜಾಗರೂಕತೆಯಿಂದ ಆಯ್ಕೆ ಮಾಡಿ ಒದಗಿಸಬೇಕು. ದಿನನಿತ್ಯದ ಬದುಕಿನಲ್ಲಿ ಅವು ಉಪಯೋಗಕ್ಕೆ ಬರುವುದಲ್ಲದೇ ಸೌಂದರ್ಯ ದೃಷ್ಟಿಯಿಂದ ಸರಳ ಮತ್ತು ಸುಂದರವಾಗಿಯೂ ಇರಬೇಕು. ಈ

ಮಾದರಿಗಳ ಸರಣಿ ಗ್ರಾಮೀಣ ಮತ್ತು ಕೈಗಾರಿಕಾ ಪ್ರದೇಶಗಳಲ್ಲಿ ಬಳಸಲು ಯೋಗ್ಯವಾಗಿರಬೇಕಾದರೆ ಸ್ವಾಭಾವಿಕವಾಗಿ ವಿಭಿನ್ನತೆ ಮತ್ತು ನಮ್ಯತೆಯನ್ನು ಹೊಂದಿರಬೇಕು.

## ರಟ್ಟುಗೆಲಸ

## ತರಗತಿ

## I

## ಬೇಕಾಗುವ ಕಾಲಾವಧಿ: ಪ್ರತಿದಿನ ಎರಡು ಗಂಟೆಗಳು

### 1. ಮಾಡಿ-ಕಲಿ

ರಟ್ಟು, ಕಾಗದ ಮತ್ತು ಬಟ್ಟೆಯಂತಹ ಸಾಮಗ್ರಿಗಳ ರೂಪಗಳನ್ನು ಒಂದು ಅಥವಾ ಹೆಚ್ಚಿನ ಸಾಧನಗಳ ಮೂಲಕ ನಿರ್ದಿಷ್ಟ ರೀತಿಯಲ್ಲಿ ಮತ್ತು ನಿರ್ದಿಷ್ಟ ಉಪಯೋಗಗಳಿಗೆ ಬದಲಾಯಿಸುವ ಹಲವಾರು ಚಟುವಟಿಕೆಗಳನ್ನು ಹೇಳಿಕೊಡಬೇಕು. ಈ ವಿಧಾನದಲ್ಲಿ ಇಪ್ಪತ್ತು ಮಾದರಿಗಳಿದ್ದರೆ ಶಾಲೆಯ ಮೊದಲ ವರ್ಷದಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿ ಕನಿಷ್ಠ ಈ ಎಂಟು ಮಾದರಿಗಳನ್ನು ಮಾಡಲು ಕಲಿಯಬೇಕು:

(a) ಶಾಲೆ ಅಥವಾ ತರಗತಿಯಲ್ಲಿ ನೇತು ಹಾಕಬಹುದಾದ ದಿನನಿತ್ಯದ ಚಟುವಟಿಕೆಗಳ ಫಲಕ.
(b) ನಿಸರ್ಗ ಅಧ್ಯಯನದ ಕೆಲಸಕ್ಕೆ ಸಂಬಂಧಿಸಿದಂತೆ ಸಂಗ್ರಹಿಸಿದ ನಮೂನೆಗಳನ್ನು ಇಡಲು ಬಾಕ್ಸು.
(c) ಚರಿತ್ರೆ ಮತ್ತು ನಿಸರ್ಗ ಅಧ್ಯನದಲ್ಲಿ ಸಂಗ್ರಹಿಸಿದ ಮಾಹಿತಿ ಮತ್ತು ಚಿತ್ರಗಳನ್ನಿಡಲು ಸರಳವಾದ ಆಲ್ಬಮ್.
(d) ಶಾಯಿಯನ್ನು ಹೀರಿಕೊಳ್ಳುವ ಮೆತ್ತೆ: ಒಂದೇ ಮಡಿಕೆಯದು ಮತ್ತು ಎರಡು ಮಡಿಕೆಯದು. ಇದನ್ನು ಶಾಲೆಯಲ್ಲಿ ಬಳಸಬಹುದು ಮತ್ತು ಮಾರಲೂ ಬಹುದು.
(e) ಕಾಗದಪತ್ರಗಳನ್ನಿಡಬಹುದಾದ ಸಂಪುಟ.
(f) ನೋಟುಬುಕ್ಕುಗಳಿಗೆ ರಟ್ಟು ಹಾಕುವುದು.
(g) ಪುಸ್ತಕಗಳನ್ನು ಒಯ್ಯಬಹುದಾದ ಡಬ್ಬ.
(h) ಒಂದು ಹೆಚ್ಚುವರಿ ಮಾದರಿ.

## 2. ಓದಿ-ನೋಡಿ-ತಿಳಿ

(a) ಸಾಧನಗಳು ಮತ್ತು ಅವುಗಳ ಬಳಕೆ.
(b) ಈ ಕೆಳಗಿನವುಗಳನ್ನು ಬಳಸಿಕೊಂಡು ಸರಳ ಪ್ರಮಾಣಗಳ ಅರಿವು:

i) ಇಂಚು, ಅಡಿ ಮತ್ತು ಮೆಟ್ರಿಕ್ ಪದ್ಧತಿ.
ii) (ii) ತೂಕಗಳು - ಸೇರು, ಚಟಾಕು, ತೊಲ.

(c) ಎಣಿಸುವುದು - ಕೂಡು ಮತ್ತು ಕಳೆಯುವಿಕೆಯಲ್ಲಿ ಸರಳವಾದ ಸಮಸ್ಯೆಗಳು.
(d) ಜ್ಯಾಮಿತಿಯಲ್ಲಿ ಸರಳವಾದ ರೂಪಗಳನ್ನು ಗುರುತಿಸುವುದು.

**ರಟ್ಟುಗೆಲಸ**

**ತರಗತಿ**

**II**

**ಬೇಕಾಗುವ ಕಾಲಾವಧಿ: ದಿನನಿತ್ಯ ಎರಡೂವರೆ ಗಂಟೆ**

## ಚಿತ್ರಕಲೆ

ಪರಿಚಯ; ಚಿತ್ರ ಬಿಡಿಸುವ ಅವಶ್ಯಕತೆ; ಬಿಡಿಸುವ ವಿಧಾನ.

- ಈ ಕೆಳಗಿನ ಸಾಮಗ್ರಿಗಳ ಬಳಕೆ: ರೂಲುಪಟ್ಟಿ, ಮುಮ್ಮೂಲೆ ಪಟ್ಟಿ (set square), ಕಾಂಪಸ್.
- ರೇಖೆಗಳು: ಸಮನಾಂತರ, ಲಂಬ, ವಕ್ರ. ರೇಖೆಗಳಿಂದ ತುಂಬುವುದು (lining in).
- ವರ್ತುಲ: ಕೇಂದ್ರ, ತ್ರಿಜ್ಯ, ಸುತ್ತಳತೆ.
- ಚೌಕ, ಚತುರ್ಭುಜ, ಷಡ್ಭುಜ, ಅಷ್ಟಭುಜ.
- ಮಕ್ಕಳು ತಾವೇ ಮಾಡಿದ ಕೆಲಸದ ರೇಖಾಚಿತ್ರ ಬಿಡಿಸುವುದು.

## ಮಾಡಿ-ತಿಳಿ

1. ಕೈಯಿಂದ ತಯಾರಿಸಿದ ಹನ್ನೆರಡು ಹಾಳೆಗಳ ಮೇಲೆ ಬಣ್ಣದಲ್ಲಿ ಅಲಂಕಾರ ಮಾಡುವುದು.
2. ಈ ಕೆಳಗಿನ ಯಾವುದಾದರೂ ಎಂಟು ಮಾದರಿಗಳನ್ನು ಮಾಡುವುದು:

(a) ಬ್ರಷ್, ಪೆನ್ಸಿಲ್, ಪೆನ್ನು ಇತ್ಯಾದಿಗಳನ್ನು ಇಡಲು ಹಿಂದೆ ಮುಂದೆ ಸರಿಯಬಲ್ಲಂತ (sliding) ಬಾಕ್ಸು.
(b) ನಿಬ್ಬು, ಪೆನ್ಸಿಲ್ಲು, ಪೆನ್ನು ಇತ್ಯಾದಿಗಳನ್ನು ಇಡಲು ನಾಲ್ಕು ಮೂಲೆಯುಳ್ಳ ಸ್ವಲ್ಪ ಇಳಿಜಾರಾದ ತಟ್ಟೆ (tray).
(c) ಅದೇ ಉದ್ದೇಶಕ್ಕೆ ಆರು ಮೂಲೆಗಳ ತಟೆ; ದಪ್ಪ ಕಾಗದವನ್ನು ಹಚ್ಚುವುದು.
(d) ಹಾಗೆಯೇ ಬಟ್ಟೆಯನ್ನು ಅಂಟಿಸಿರುವ ಮುಚ್ಚಬಲ್ಲಂತ ಆರು ಮೂಲೆಗಳ ಬಾಕ್ಸು.

**ವಿಶೇಷ ಸೂಚನೆ**

(c) (d) ಮಾದರಿಗಳನ್ನು ವಿದ್ಯಾರ್ಥಿ ಭವಿಷ್ಯದಲ್ಲಿ ತನ್ನದೇ ಚಟುವಟಿಕೆಗಳಿಗೆ ಬಳಸಿಕೊಳ್ಳಲು ನೀಡಬಹುದು.

(e) ತಿರುಗಣಿಯ ಸಹಾಯದಿಂದ ಮುಚ್ಚಿ ತೆಗೆಯಬಲ್ಲ ಬಾಕ್ಸು.
(f) ತಿರುಗಣಿಯ ಸಹಾಯದಿಂದ ಮುಚ್ಚಿ ತೆಗೆಯಬಲ್ಲ ಆರು ಮೂಲೆಗಳ ಬಾಕ್ಸು.
(g) ಶಾಯಿಯನ್ನು ಹೀರಿಕೊಳ್ಳುವ ಮೆತ್ತೆ.
(h) ಕಾಗದ ಪತ್ರಗಳನ್ನಿಡುವ ಸಂಪುಟ - ಸರಳವಾದದ್ದು ಹಾಗೂ ಸ್ವಲ್ಪ ಸಂಕೀರ್ಣವಾದದ್ದು.
(i) ಉರುಟಾದ ಬಾಕ್ಸು.
(j) ವಿಭಿನ್ನ ರೀತಿಯ ಎರಡು ಬಾಕ್ಸ್‌ಗಳು.
(k) ಮೆತ್ತೆ ಮತ್ತು ಚರ್ಮದ ಹೊದಿಕೆಯುಳ್ಳ ಸರಳವಾದ ಅಲ್ಬಮ್ಮು.

## ಮರಗೆಲಸ

## ತರಗತಿ

## III

### ಬೇಕಾಗುವ ಕಾಲಾವಧಿ: ಹತ್ತು ನಿಮಿಷದ ಬಿಡುವಿನೊಂದಿಗೆ ಮೂರೂವರೆ ಗಂಟೆಗಳು

### ಓದಿ-ನೋಡಿ-ತಿಳಿ ಮತ್ತು ಮಾಡಿ-ಕಲಿ ಎರಡನ್ನೂ ಒಟ್ಟಿಗೆ ಸೇರಿಸಲಾಗಿದೆ.

(a) ಉಪಕರಣಗಳು ಮತ್ತು ಅವುಗಳ ಉಪಯೋಗಗಳು.
(b) ಕನಿಷ್ಠ ಏಳು ಚಟುವಟಿಕೆಗಳನ್ನು ಮಾಡಿ-ಕಲಿಯುವುದು (ವಿನ್ಯಾಸವನ್ನು ಒದಗಿಸಬೇಕು- ಆಯ್ಕೆ ವಿದ್ಯಾರ್ಥಿಯದು).
(c) ವಿದ್ಯಾರ್ಥಿಯದೇ ವಿನ್ಯಾಸದ ಎರಡು ಹೆಚ್ಚುವರಿ ಮಾದರಿಗಳು.

**ವಿಶೇಷ ಸೂಚನೆ**

ಗ್ರಾಮೀಣ ಪ್ರದೇಶಗಳ ಶಾಲೆಗಳಲ್ಲಿ ಈ ಕೆಳಗಿನ ಮಾದರಿಗಳನ್ನು ಉಪಯೋಗಿಸಿಕೊಳ್ಳಬಹುದು:

(a) ಕುಡುಗೋಲಿನ ಹಿಡಿ.
(b) ಏಣಿ.
(c) ನೀರಿನ ಪಾತ್ರೆಯನ್ನು ಇಡಲು ಸಣ್ಣ ಸ್ಟೂಲು.
(d) ನೀರನ್ನು ಸೋಸಲು ಒಂದು ಸ್ಟಾಂಡ್ಯಂಡು.
(e) ಓದಿ ಬರೆಯಲು ಒಂದು ಸಣ್ಣ ಮೇಜು.
(f) ತೆರೆದ ಸಣ್ಣ ಪುಸ್ತಕದ ಕಪಾಟು; ಬಟ್ಟೆಗಳನ್ನಿಡಲು ಮರದ ಗೋದಣಿಗೆ; ಆಲ್ಮಾ; ಗೋಡೆಯ ಮೇಲೆ ಗೋದಣಿಗೆ.
(g) ಮನೆಯಲ್ಲಿ ಸಣ್ಣಪುಟ್ಟ ವಸ್ತುಗಳನ್ನಿಡಲು ಒಂದು ಮೂಲೆ ಕಪಾಟು.
(h) ಸರಳವಾದ ಒಂದು ಮರದ ಮಂಚ.
(i) ಅವಶ್ಯಕತೆಗೆ ತಕ್ಕಂತೆ ಒಂದು ಮರದ ಪೆಟ್ಟಿಗೆ.

(d) ಗರಗಸದಲ್ಲಿ ಕತ್ತರಿಸುವಿಕೆ, ಹತ್ತರಿಸುವಿಕೆ (planning), ಗಾತ್ರವನ್ನು ಅಳೆಯುವಿಕೆ, ಕೊರೆಯುವಿಕೆ, ತೋಡುವಿಕೆ, ಸರಳ ಜೋಡಿಸುವಿಕೆ. ಈ ಎಲ್ಲಾ ಪ್ರಕ್ರಿಯೆಗಳನ್ನು ವಸ್ತುಗಳನ್ನು ಮಾಡುವುದರ ಮೂಲಕ ಅಥವಾ ಶೈಕ್ಷಣಿಕ ಸರಣಿಯಲ್ಲಿರುವ ಚಟುವಟಿಕೆಗಳ ಮೂಲಕ ಹೇಳಿಕೊಡುವುದು.

**ಮರಗೆಲಸ**

**ತರಗತಿ**

**IV**

**ಬೇಕಾಗುವ ಕಾಲಾವಧಿ:**

**ಪ್ರತಿದಿನ ಹತ್ತು ನಿಮಿಷಗಳ ಬಿಡುವಿನೊಂದಿಗೆ ಮೂರೂವರೆ ಗಂಟೆ**

**ಮಾಡಿ-ಕಲಿ**

1. (a) ವಿದ್ಯಾರ್ಥಿಗಳು ಹತ್ತು ಮಾದರಿಗಳನ್ನು ಸಿದ್ಧಪಡಿಸಬೇಕು.

(b) ವಿದ್ಯಾರ್ಥಿಗಳು ತಾವೇ ವಿನ್ಯಾಸಗೊಳಿಸಿದ ಇನ್ನೆರಡು ಮಾದರಿಗಳನ್ನು ಸಿದ್ಧಪಡಿಸಬೇಕು.

(c) ನಾಲ್ಕು ರೀತಿಯ ಜೋಡಿಸುವಿಕೆ.

2. ರೇಖಾಕೃತಿಗಳು ಮತ್ತು ಚಟುವಟಿಕೆಗಳ ರೇಖನದ (gಡಿಚಿಔhiಟಿ) ನಿರೂಪಣೆ.

(a) ರೇಖೆಗಳನ್ನು ಬಿಡಿಸುವುದು ಹೇಗೆ.
(b) ಮುಮ್ಮೂಲೆ ಪಟ್ಟಿಯನ್ನು ಉಪಯೋಗಿಸುವುದು ಹೇಗೆ.
(c) ಲಂಬವನ್ನು ಎಳೆಯುವುದು ಹೇಗೆ.
(d) ವಿವಿಧ ಕೋನಗಳನ್ನು ರಚಿಸುವುದು ಹೇಗೆ.
(e) ಕಾಂಪಸ್ಸನ್ನು ಸರಿಯಾಗಿ ಇಟ್ಟುಕೊಳ್ಳುವುದು ಹೇಗೆ.
(f) ರೇಖಾಚಿತ್ರ ಬಿಡಿಸುವ ಹಲಗೆ ಮತ್ತು ಕಾಂಪಸ್ಸನ್ನು ಉಪಯೋಗಿಸುವುದು ಹೇಗೆ.
(g) ರಬ್ಬರಿನ ಉಪಯೋಗಿಸುವುದು ಹೇಗೆ.
(h) T ಚೌಕದ ಉಪಯೋಗಿಸುವುದು ಹೇಗೆ.

3. ಲಂಬರೇಖೀಯ ಪ್ರಕ್ಷೇಪ (orthographic projection)

(a) ದ್ವಿತಲ ಕೋನಗಳು.
(b) ಮಾದರಿಗಳ ವಿಶ್ಲೇಷಣೆ.
(c) ಇವುಗಳ ಅರ್ಥವಿವರಣೆ: ಬಿಂದು, ರೇಖೆ, ಕೋನ, ಚೌಕ, ವರ್ತುಲ (ಕೇಂದ್ರ, ತ್ರಿಜ್ಯ, ಸುತ್ತಳತೆ).

## ಓದಿ-ನೋಡಿ-ತಿಳಿ

### 1. ಮರಗಳ ಬೆಳವಣಿಗೆ.

(a) ಮರ ಕುಗ್ಗುವಿಕೆ ಮತ್ತು ಹದಗೊಳಿಸುವಿಕೆಗೆ ಸಂಬಂಧಪಟ್ಟಂತೆ ಟಿಪ್ಪಣಿಗಳು.
(b) ಬೆಳೆಯುವ ಮರಗಳ ಭಾಗಗಳು.
(c) ಬೀಜಗಳು, ಮೊಳೆಯುವಿಕೆ.
(d) ಬೇರುಗಳು ಮತ್ತು ಅವು ನಿರ್ವಹಿಸುವ ಕಾರ್ಯಗಳು.
(e) ಬೇರಿನ ದ್ರವರೂಪದ ಆಹಾರ.
(f) ಸಸ್ಯದ ಜೀವರಸ ಮೇಲೇರುವಿಕೆ.
(g) ಎಲೆಗಳ ಮೂಲಕ ಆವಿಯಾಗುವುದು.
(h) ಗಾಳಿಯಿಂದ ಇಂಗಾಲವನ್ನು ಹೊರತೆಗೆಯುವುದು.
(i) ಮರಗಳ ಬದುಕಿನ ಅವಧಿ.
(j) ಕಡಿಯುವ ಕಾಲ.

## ಮಾಡಿ-ವಿವರಿಸು

ಮರದ ಅಡ್ಡಭಾಗ.

(a) ವಾರ್ಷಿಕ ಪಟ್ಟೆ.
(b) ಪಟ್ಟೆಗಳು ಕಾಣಿಸಿಕೊಳ್ಳಲು ಕಾರಣ.
(c) ಪಟ್ಟೆಗಳ ಸಂರಚನೆ.
(d) ಚೇಗು (ಮರದ ಬೊಡ್ಡೆಯ ಒಳಭಾಗದ ಗಡುಸಾದ ಬಲಿತ ದಾರು).
(e) ಬಿಳಿದಾರು.
(f) ತೊಗಟೆ ಮತ್ತು ಅದರ ಉಪಯೋಗ.
(g) ತೊಗಟೆ ಮತ್ತು ತಿರುಳಿನ ಬೆಳವಣಿಗೆ.

## ಮರಗೆಲಸದ ಯಂತ್ರವಿಜ್ಞಾನ

(a) ಪದಾರ್ಥ.
(b) ಅಳತೆ.
(c) ಮೆಟ್ರಿಕ್ ಪದ್ಧತಿ: ಭಿನ್ನರಾಶಿ, ಮೂರರ ನಿಯಮ.
(d) ತೂಕ (ಭಾರತೀಯ, ಅಂತರಾಷ್ಟ್ರೀಯ, ಮತ್ತು ಇಂಗ್ಲಿಷ್ ಪದ್ಧತಿ).
(e) ಸಾಂದ್ರತೆ.
(f) ನಿರ್ದಿಷ್ಟ ಗುರುತ್ವಾಕರ್ಷಣ ಶಕ್ತಿ.
(g) ಬಲ ಮತ್ತು ಕೆಲಸ.
(h) ರೇಖನದ ನಿರೂಪಣೆ.
(i) ಬಲಗಳ ಸಮನಾಂತರ ಚತುರ್ಭುಜ.
(j) ಬಲಗಳ ವಿಘಟನೆ .
(k) ಯಾಂತ್ರಿಕ ಸಾಧನಗಳು.
(l) ಮೀಟುಗೋಲುಗಳು.

## ಮರದ ಭೂಮಿಕ ಲಕ್ಷಣಗಳು.

ದೇಶೀಯ ಮರದ ವಿಧಗಳು.

(a) ಮೆದು ಮರ ಮತ್ತು ಗಡಸು ಮರ.
(b) ಜೊಂಡು ಮತ್ತು ಬಿದಿರು.
(c) ಭಾರತದಲ್ಲಿ ಮರ ಬೆಳೆಯುವ ಪ್ರದೇಶಗಳು.
(d) ಮರದಿಂದ ಬರುವ ರಾಷ್ಟ್ರೀಯ ಆದಾಯ.
(e) ಆಮದು ಮತ್ತು ರಫ್ತು.

## ವಿಶೇಷ ಸೂಚನೆ

'ಓದಿ-ನೋಡಿ-ತಿಳಿ' ಅಂಶಗಳನ್ನು ಆದಷ್ಟೂ 'ಮಾಡಿ-ಕಲಿ' ವಿಧಾನದಿಂದಲೇ ಹೇಳಿಕೊಡುವುದು ಉತ್ತಮ. ಮಾದರಿಗಳನ್ನು ನಿರ್ಮಿಸಿದ ನಂತರ ಮತ್ತು ಚಿತ್ರಿಸುವಾಗ ಮಾತ್ರ ಸೈದ್ಧಾಂತಿಕ ಪರಿಭಾಷೆಗಳನ್ನು ಹೇಳಿಕೊಡುವುದು.

**ಮರಗೆಲಸ**

**ತರಗತಿ**

**V**

**ಬೇಕಾಗುವ ಕಾಲಾವಧಿ:**

**ಹತ್ತು ನಿಮಿಷಗಳ ಬಿಡುವಿನೊಂದಿಗೆ ಪ್ರತಿದಿನ ಮೂರೂವರೆ ಗಂಟೆ.**

## ಮಾಡಿ-ಕಲಿ

1. ಹತ್ತು ಮಾದರಿಗಳನ್ನು ಅಥವಾ ಹತ್ತು ಚಟುವಟಿಕೆಗಳನ್ನು ಮಾಡುವುದು.
2. ವಿದ್ಯಾರ್ಥಿ ತಾನೇ ವಿನ್ಯಾಸಗೊಳಿಸಿದ ಎರಡು ಇತರ ಮಾದರಿಗಳನ್ನು ಮಾಡುವುದು.
3. ಬಣ್ಣ ಹಾಕುವುದು. ಹೊಳೆಯುವವರೆಗೆ ಪಾಲಿಶ್ ಮಾಡುವುದು.
4. ಪಾಲಿಶನ್ನು ತಯಾರು ಮಾಡಿಕೊಳ್ಳುವುದು.

## ಓದಿ-ನೋಡಿ-ತಿಳಿ

1. ಮರದ ರಚನೆ.

   (a) ಇಂಗಾಲ (ಕಾರ್ಬನ್ ಅ).
   (b) ಆಮ್ಲಜನಕ (ಆಕ್ಸಿಜನ್ ಔ).
   (c) ಸಾರಜನಕ (ನೈಟ್ರೋಜನ್ ಓ).
   (d) ಜಲಜನಕ (ಹೈಡ್ರೋಜನ್ ಓ).
   (e) ಗಂಧಕ (ಸಲ್ಫರ್ S).
   (f) ಜೀವಧಾತು (ಪ್ರೋಟೋಪ್ಲಾಸಮ್).
   (g) ಇದ್ದಿಲು.

2. ಮರಗೆಲಸಕ್ಕೆ ಸಂಬಂಧಪಟ್ಟಂತೆ ಲೋಹಗಳ ಸರಿಯಾದ ಪರಿಚಯವನ್ನು ಮಾಡಿಸುವುದು.

   (a) ಕಬ್ಬಿಣ: ಅದರ ಅದಿರು ಮತ್ತು ಕಬ್ಬಿಣ ಅದಿರು ಕರಗಿಸುವಿಕೆ. ಎರಕಹೊಯ್ದ ಕಬ್ಬಿಣದ ಗುಣ (ಪ್ರಯೋಗ ಮತ್ತು ಪರೀಕ್ಷೆ). ಸುತ್ತಿಗೆಯಿಂದ ತಟ್ಟಿದ ಕಬ್ಬಿಣ. ಎರಕಹೊಯ್ದ ಕಬ್ಬಿಣವನ್ನು ಸುತ್ತಿಗೆಯಿಂದ ತಟ್ಟಿದ ಕಬ್ಬಿಣವನ್ನಾಗಿ ಮಾರ್ಪಡಿಸುವ ಬಗೆ.

- ಉಕ್ಕು. ಪ್ರಯೋಗಗಳು.
- ಕಬ್ಬಿಣವನ್ನು ಉಕ್ಕನ್ನಾಗಿ ಮಾರ್ಪಡಿಸುವ ಬಗೆ.
- ಉಕ್ಕಿನ ಗುಣಗಳು.
- ಗಟ್ಟಿಯಾಗುವಿಕೆ ಮತ್ತು ಹದಗೊಳಿಸುವಿಕೆ.

(b) ಹಿತ್ತಾಳೆ: ಲೋಹಗಳ ಮಿಶ್ರಣ - ಸತುವು ಒಂದು ಭಾಗ ಮತ್ತು ತಾಮ್ರ ಎರಡು ಭಾಗದಷ್ಟು ತೂಕ.

- ಲೋಹಗಳ ಮಿಶ್ರಣ ಎಂದರೇನು? ಹಿತ್ತಾಳೆಯ ಗುಣಗಳೇನು?

(c) ತಾಮ್ರ: ಅದರ ಅದಿರು ಮತ್ತು ಅದಿರಿನಿಂದ ಲೋಹವನ್ನು ಹೊರ ತೆಗೆಯುವ ಪ್ರಕ್ರಿಯೆ.

(d) ಸತುವು: ಅದರ ಅದಿರು ಮತ್ತು ಅದಿರಿನಿಂದ ಲೋಹವನ್ನು ಹೊರ ತೆಗೆಯುವ ಪ್ರಕ್ರಿಯೆ.

## ಮರಗೆಲಸ

## ತರಗತಿ

## VI

## ಬೇಕಾಗುವ ಕಾಲಾವಧಿ:

## ಹತ್ತು ನಿಮಿಷಗಳ ಬಿಡುವಿನೊಂದಿಗೆ ಪ್ರತಿದಿನ ಮೂರೂವರೆ ಗಂಟೆ.

ಈ ವರ್ಷದಲ್ಲಿ ವಿದ್ಯಾರ್ಥಿಗಳು ಮುಖ್ಯವಾಗಿ ಉತ್ಪಾದನೆಯ ಮೇಲೆ ಗಮನವನ್ನು ಕೇಂದ್ರೀಕರಿಸಬೇಕು. ಆದ್ದರಿಂದ ಮರ ಅಥವಾ ಲೋಹ ಇವೆರಡರಲ್ಲಿ ಯಾವುದಾದರೂ ಒಂದನ್ನು ಆರಿಸಿಕೊಳ್ಳಬೇಕು.

### ಮರಗೆಲಸ

ಮಾರುಕಟ್ಟೆಯಲ್ಲಿ ಮಾರಾಟವಾಗಬಲ್ಲ ದಿನೋಪಯೋಗಿ ವಸ್ತುಗಳನ್ನು ಮಾಡುವುದು.

### ಓದಿ-ನೋಡಿ-ತಿಳಿ

1. ಉಪಕರಣಗಳ ಭಾಗಗಳು ಮತ್ತು ಅವುಗಳನ್ನು ಮಾಡಿರುವ ಬಗ್ಗೆ.
2. ಮರವನ್ನು ಹದಗೊಳಿಸುವ ಬಗ್ಗೆ ಟಿಪ್ಪಣಿಗಳು.

(a) ಜೀವದ್ರವ್ಯವಿರುವ ಮರ.

(b) ಮರವನ್ನು ಕತ್ತರಿಸಿದ ಮೇಲೆ ಅದರ ಸ್ಥಿತಿ.
(c) ಆವಿಯಾಗುವಿಕೆ ಮತ್ತು ಕುಗ್ಗುವಿಕೆ.
(d) ಹದಗೊಳಿಸಬೇಕಾದ ಅವಶ್ಯಕತೆ.
(e) ಹದಗೊಳಿಸುವ ವಿವಿಧ ವಿಧಾನಗಳು.

i) ಸಹಜ ಹದಗೊಳಿಸುವಿಕೆ.
ii) ಕೃತಕ ಹದಗೊಳಿಸುವಿಕೆ: ಬಿಸಿ ನೀರು, ಹರಿಯುವ ತೊರೆ, ಹೊಗೆಯಲ್ಲಿ ಒಣಗಿಸುವುದು.

3. ಉತ್ಪಾದಿಸಿದ ವಸ್ತುಗಳ ಬೆಲೆಯ ಅಂದಾಜಿನ ಮೂಲ ಅರಿವು.

**ಮರಗೆಲಸ**

**ತರಗತಿ**

**VII**

**ಬೇಕಾಗುವ ಕಾಲಾವಧಿ:**

**ಹತ್ತು ನಿಮಿಷಗಳ ಬಿಡುವಿನೊಂದಿಗೆ ಪ್ರತಿದಿನ ಮೂರೂವರೆ ಗಂಟೆ.**

## ಮಾಡಿ-ಕಲಿ

1. ವಿದ್ಯಾರ್ಥಿಗಳು ಮಾರುಕಟ್ಟೆಯಲ್ಲಿ ಮಾರಾಟವಾಗಬಲ್ಲ ವಸ್ತುಗಳನ್ನು ಉತ್ಪಾದಿಸಬೇಕು ಮತ್ತು ಉತ್ಪನ್ನಗಳಿಗೆ ಮುಂಬರಬಹುದಾದ ಸ್ಥಳೀಯ ಕೋರಿಕೆಗಳನ್ನು ಪೂರೈಸಬೇಕು. ಪ್ರತಿಯೊಬ್ಬ ವಿದ್ಯಾರ್ಥಿಯೂ ತಿಂಗಳಿಗೆ ಐದು ರೂಪಾಯಿಗಳನ್ನು ಸಂಪಾದಿಸುಾಷ್ಟು ಸಮರ್ಥನಾಗಬೇಕು.
2. ಹೊಳೆಯುವವರೆಗೆ ಪಾಲಿಶ್ ಮಾಡುವುದು.
3. ಕೆತ್ತುವುದು.
4. ವಿನ್ಯಾಸಗೊಳಿಸುವುದು.
5. ಲೆಕ್ಕವನ್ನು ಇಡುವುದು. ಬೆಲೆಯನ್ನು ನಿರ್ಧರಿಸುವುದು.

## ಓದಿ- ನೋಡಿ-ತಿಳಿ

ಮರದ ಸಾಮಾನ್ಯ ಉಪಯುಕ್ತತೆ.

ಉದ್ದೇಶಿತ ಯೋಜನೆ ಅಥವಾ ಚಟುವಟಿಕೆ ಸರಣಿ.

A ಗುಂಪು

1. ಗೋಡೆ-ಗೋದಣಿಗೆ.
2. ಮುಂದೂಡಬಲ್ಲ ಚಕ್ರ (propeller (ನೋದಕ): ಸರಳ ಮತ್ತು ವಾಸ್ತವಿಕ ಬಳಕೆಗಾಗಿ.
3. ಪೆನ್ನು, ಪೆನ್ಸಿಲ್ಲು, ಬ್ರಷ್ ಮುಂತಾದ ವಸ್ತುಗಳನ್ನಿಡಲು ಹಿಂದೆ ಮುಂದೆ ಸರಿಸಬಲ್ಲ ಬಾಕ್ಸು.
4. ವಿವಿಧ ರೀತಿಯ ಸ್ಟೂಲುಗಳು.
5. ಬರೆಯುವ ಮೇಜು.
6. ಕುಂಡಗಳನ್ನಿಡಬಲ್ಲ ಸ್ಟ್ಯಾಂಡು.
7. ಬಾವುಟಗಳನ್ನಿಡುವ ಸ್ಟ್ಯಾಂಡು.
8. ಪುಸ್ತಕದ ಸ್ಟ್ಯಾಂಡು.
9. ಬೇರೆ ಬೇರೆ ರೀತಿಯ ಆಲ್ಬಾ.
10. ದಾಂಡು.
11. ವಿವಿಧ ಆಕಾರಗಳ ಮರದ ತಟ್ಟೆಗಳು.
12. ಮೇಜು, ಕೊಡಲಿಯ ಹಿಡಿ, ಚಾಕುವಿನ ಹಿಡಿ ಇತ್ಯಾದಿ.
13. ಮಂಚ.
14. ಮೂಲೆ ಕಪಾಟು.
15. ಬಾಗಿಲನ್ನು ಹೊಂದಿದ ಸಣ್ಣ ಅಲ್ಮೇರಾಗಳು ಮತ್ತು ವಿದ್ಯಾರ್ಥಿಗಳೇ ಆಯೋಜಿಸಿದ ಇತರೆ ಮಾದರಿಗಳು.

**B ಗುಂಪು**

1. ವಿವಿಧ ಆಕಾರಗಳ ಚಮಚಾಗಳು.
2. ಒಂದೇ ಮರದ ತುಂಡಿನಲ್ಲಿ ಮಾಡಬಹುದಾದ ಮರದ ತಟ್ಟೆಗಳು.
3. ಫೈಲ್ ಸಂಪುಟಗಳು, ದೀಪವನ್ನಿಡಲು ಗೋಡೆ ಗೋದಣಿಗೆ.
4. ವಿವಿಧ ಆಕಾರಗಳ ಮೋಂಬತ್ತಿ ಸ್ಟ್ಯಾಂಡ್ಗಳು.
5. ವಿವಿಧ ಆಕಾರಗಳ ಸ್ಟ್ಯಾಂಡ್ಗಳು.
6. ಬರೆಯಲು ಸರಳವಾದ ಒಂದು ಮೇಜು.
7. ಮಡಚಿ ಒಯ್ಯಬಲ್ಲ ಮೇಜು.
8. ವಿವಿಧ ರೀತಿಯ ಬಾಕ್ಸ್ಗಳು ಮತ್ತು ವಿವಿಧ ರೀತಿಯ ಜೋಡಿಸುವಿಕೆ ಮತ್ತು ವಿದ್ಯಾರ್ಥಿಗಳೇ ಆಯೋಜಿಸಿದ ಇತರೆ ಮಾದರಿಗಳು.

**C ಗುಂಪು**

1. ಸಣ್ಣ ದೋಣಿ.
2. ಕುರ್ಚಿ.
3. ಮೇಜು.
4. ಗಡಿಯಾರದ ಚೌಕಟ್ಟು.
5. ಏಣಿ.

ಮತ್ತು ವಿದ್ಯಾರ್ಥಿಗಳೇ ಆಯೋಜಿಸಿದ ಇತರೆ ಮಾದರಿಗಳು.

ಮೇಲೆ ಸೂಚಿಸಿರುವ ವಿವರಗಳೆಲ್ಲಾ ಕೇವಲ ಸಲಹೆಗಳು ಅಷ್ಟೇ. ವಿದ್ಯಾರ್ಥಿಗಳು ಉತ್ಪಾದಿಸುವ ಮಾದರಿಗಳು ಸ್ಥಳೀಯ ಸನ್ನಿವೇಶಕ್ಕೆ ಮತ್ತು ಅಗತ್ಯಕ್ಕೆ ತಕ್ಕಂತೆ ಬದಲಾಗುವುದು.

## ಲೋಹಗೆಲಸದಲ್ಲಿ

## ತರಗತಿ VI ಮತ್ತು VII ರ ಪಠ್ಯಕ್ರಮ

ಹಗುರವಾದ ಲೋಹಗೆಲಸವನ್ನು ವಿದ್ಯಾರ್ಥಿಗಳಿಗೆ ಪರಿಚಯ ಮಾಡಿಸುವ ಉದ್ದೇಶವೂ ಸಹ ಉಳಿದ ಪಠ್ಯಕ್ರಮಗಳ ಉದ್ದೇಶವನ್ನೇ ಹೊಂದಿದೆ. ಅಂದರೆ ಕಬ್ಬಿಣ, ತಾಮ್ರ, ಹಿತ್ತಾಳೆ, ಸತುವು, ಅಥವಾ ಯಾವುದೇ ಲೋಹ ಮಿಶ್ರಣವಾಗಿರಲಿ ಅವುಗಳನ್ನು ಒಂದು ಅಥವಾ ಹೆಚ್ಚಿನ ಸಾಧನಗಳನ್ನು ಬಳಸಿ ನಿರ್ದಿಷ್ಟ ರೀತಿಯಲ್ಲಿ ನಿರ್ದಿಷ್ಟ ಉಪಯೋಗಗಳಿಗೆ ಒದಗುವಂತೆ ಮಾರ್ಪಡಿಸುವುದು.

ಮಾಡಬೇಕಾದ ಕೆಲವು ಮಾದರಿಗಳ ಪಟ್ಟಿ ಹೀಗಿದೆ:

1. ಸರಳವಾದ ಬಾಗಿಲ ಬೀಗ.
2. ಸರಪಳಿ ಬೀಗ.
3. ಕೀಲುಗಳು.
4. ಕುಡುಗೋಲು.
5. ಇಸ್ತ್ರಿಪೆಟ್ಟಿಗೆಯನ್ನು ಇಡಲು ಬೇರೆ ಬೇರೆ ರೀತಿಯ ಸ್ಟ್ಯಾಂಡು
6. ಕಾಗದವನ್ನು ಕೊರೆಯುವ ಸಾಧನಗಳು.
7. ಪುರಳಳಕ (calliper)
8. ಬೆಸುಗೆ ಹಾಕುವ ಸಾಧನಗಳು.
9. ಸ್ಕ್ರೂ-ಡ್ರೈವರ್ಸ್
10. ಕಾಂಪಸ್.
11. ಉಳಿ.
12. ಗದ್ದೆಹೊಲದಲ್ಲಿ ಬಳಸುವ ಚಾಕು.
13. ಮೋಂಬತ್ತಿ ಸ್ಟ್ಯಾಂಡು
14. ಪುಸ್ತಕದ ಸ್ಟ್ಯಾಂಡು
15. ಗೋಡೆ ಮೋಂಬತ್ತಿ ಸ್ಟ್ಯಾಂಡು
16. ಪಾತ್ರೆಗಳನ್ನಿಡಲು ವಿವಿಧ ಗಾತ್ರಗಳ ಸ್ಟ್ಯಾಂಡ್‌ಗಳು.
17. ಹಣ್ಣು ಕೀಳುವ ಸಾಧನ.
18. ವಿವಿಧ ಗಾತ್ರ ಮತ್ತು ಆಕಾರಗಳ ತಟ್ಟೆಗಳು.

19. ಬಾಕ್ಸ್‌ಗಳು.
20. ಗೆದ್ದೆ ಹೊಲದಲ್ಲಿ ಬಳಸುವ ಹಲಬೆಯಾಕಾರದ ಸಲಕರಣೆ (farm rake).
21. ಸೂರ್ಯನ ನೆರಳು ಗಡಿಯಾರ.

ಈ ಮೇಲೆ ತಿಳಿಸಿರುವ ಪಟ್ಟಿಯಲ್ಲಿ ಕನಿಷ್ಠ ಹದಿನೈದು ವಸ್ತುಗಳು ಹಾಗೂ ವಿದ್ಯಾರ್ಥಿಯೇ ವಿನ್ಯಾಸಗೊಳಿಸಿದ ಎರಡು ಮಾದರಿಗಳನ್ನು ಮಾಡಬೇಕು. ಅವು ಉಪಯೋಗಿ ವಸ್ತುಗಳಾಗಿರಬೇಕು.

**ಓದಿ-ನೋಡಿ-ತಿಳಿ ಮತ್ತು ಮಾಡಿ-ಕಲಿ ಎರಡನ್ನೂ ಒಟ್ಟಿಗೆ ಸೇರಿಸಲಾಗಿದೆ.**

(a) ಕಿಲುಬುಗಟ್ಟಿಸುವುದು.
(b) ತುಂಬಿಸುವುದು.
(c) ಗಟ್ಟಿಯಾಗಿಸುವುದು ಮತ್ತು ಹದಗೊಳಿಸುವುದು.
(d) ಕರಿಗಟ್ಟಿಸುವ ಪ್ರಕ್ರಿಯೆ.
(e) ಸ್ವಚ್ಛಗೊಳಿಸುವುದು ಮತ್ತು ಪಾಲಿಶ್ ಮಾಡುವುದು.

ತರಗತಿ VII ರ ವಿದ್ಯಾರ್ಥಿಗಳಿಗೆ ಐಚ್ಛಿಕ ರಟ್ಟುಗೆಲಸದ ತರಬೇತಿ.

**ತರಗತಿ**

**VII**

ಮೂಲ ಶಿಕ್ಷಣ ತgಬೇತಿಯಡಿ ಮೊದಲ ಎರಡು ವರ್ಷಗಳಲ್ಲಿ ರಟ್ಟುಗೆಲಸದ ಅನುಭವವಿರುವ ವಿದ್ಯಾರ್ಥಿಗಳಿಗೆ ಅದನ್ನು ಮುಂದುವರೆಸುವ ಆಯ್ಕೆಯನ್ನು ನೀಡಬೇಕು. ಅವರು ಮರ ಮತ್ತು ಲೋಹಗೆಲಸಗಳಲ್ಲಿ ಕಲಿತಿರುವ ಉನ್ನತ ತಂತ್ರವನ್ನು ರಟ್ಟುಗೆಲಸಕ್ಕೆ ಅನ್ವಯಿಸಬೇಕು. ನೂಲುವ ಮತ್ತು ನೇಯುವಂತಹ ಮೂಲ ಕರಕೌಶಲ್ಯಗಳನ್ನು ಕಲಿತಿರುವ ವಿದ್ಯಾರ್ಥಿಗಳೂ ಸಹ ರಟ್ಟುಗೆಲಸಕ್ಕೆ ಸಂಬಂಧಪಟ್ಟಂತೆ ಸ್ವಲ್ಪ ಮಟ್ಟಿಗೆ ಅರಿವನ್ನು ಪಡೆದುಕೊಳ್ಳುವ ಆಯ್ಕೆಯೂ ಇರಬೇಕು.

ರಟ್ಟುಗೆಲಸದಲ್ಲಿ ಮೂರು ತಿಂಗಳ ಪಠ್ಯಕ್ರಮ.

**ಮಾಡಿ-ಕಲಿ**

ಶಾಲೆಯಲ್ಲಿ, ಮನೆಯಲ್ಲಿ ಮತ್ತು ಆಫೀಸುಗಳಲ್ಲಿ ಉಪಯೋಗಕ್ಕೆ ಬರುವಂತಹ ಮತ್ತು ಶೈಕ್ಷಣಿಕ ನೆಲೆಯಲ್ಲಿ ಆಯ್ದ ಹಲವಾರು ವಸ್ತುಗಳನ್ನು ತಯಾರಿಸಬೇಕು.

1. ದಿನನಿತ್ಯ ಬಳಸುವ ಹಲಗೆ.

2. ಪೆನ್ಸಿಲ್ ತಟ್ಟೆ.
3. ಪೆನ್ಸಿಲ್ ಬಾಕ್ಸ್.
4. ಆರು ಮೂಲೆಗಳುಳ್ಳ ತಟ್ಟೆ.
5. ಶಾಯಿ ಹೀರುವ ಮೆತ್ತೆ ಮತ್ತು ಬರೆಯುವ ಹಲಗೆ (ಸರಳವಾದ್ದು).
6. ಕಾಗದಗಳನ್ನಿಡಬಲ್ಲ ಶಾಯಿ ಹೀರುವ ಮೆತ್ತೆ.
7. ಕಾಗದ ಪತ್ರಗಳನ್ನಿಡಬಲ್ಲ ಫೈಲು.
8. ನೇರವಾಗಿ ನಿಲ್ಲಬಲ್ಲ ರಟ್ಟಿನ ಬಾಕ್ಸ್.
9. ಸಂಪುಟಗಳು: ಸರಳ ಮತ್ತು ಸಂಕೀರ್ಣ.
10. ವಿವಿಧ ಆಕಾರಗಳ ಬಾಕ್ಸ್ ಗಳು.
11. ನೋಟ್ ಬುಕ್ಕಿಗೆ ರಟ್ಟುಕಟ್ಟುವುದು.
12. ಆಲ್ಬಮ್.

## ಓದಿ-ನೋಡಿ-ತಿಳಿ

1. ಬಿಂದು, ರೇಖೆ, ಕೋನ, ಸಮನಾಂತರ ಮತ್ತು ಲಂಬ ರೇಖೆಗಳು, ಚೌಕ, ವರ್ತುಲ (ಕೇಂದ್ರ, ತ್ರಿಜ್ಯ, ಸುತ್ತಳತೆ).
2. ತಯಾರಿಸಿದ ವಸ್ತುಗಳ ಅಥವಾ ಮಾದರಿಗಳ ರೇಖನದ ನಿರೂಪಣೆ.
3. ಅಳತೆ: ಇಂಚು, ಅಡಿ, ಮತ್ತು ಮೆಟ್ರಿಕ್ ಪದ್ಧತಿ.

ಮೂಲ ತರಬೇತಿಯ ಕೊನೆಯ ಎರಡು ವರ್ಷಗಳಡಿ ಮರ ಅಥವಾ ಲೋಹಗೆಲಸದಲ್ಲಿ ವಿದ್ಯಾರ್ಥಿಗಳು ಐಚ್ಛಿಕ ತರಬೇತಿಯನ್ನು ಮಾಡಬಹುದು.

**ತರಗತಿ**

**VI ಮತ್ತು VII**

**ಬೇಕಾಗುವ ಕಾಲಾವಧಿ:**

**ಹತ್ತು ನಿಮಿಷಗಳ ಬಿಡುವಿನೊಂದಿಗೆ ಪ್ರತಿದಿನ ಮೂರೂವರೆ ಗಂಟೆ.**

1. ಉಪಕರಣಗಳ ಪರಿಚಯ: ಅವುಗಳ ಉಪಯೋಗ ಮತ್ತು ಉಪಯೋಗಿಸುವ ರೀತಿ.
2. ಚಿತ್ರ ಬಿಡಿಸುವ ಉಪಕರಣಗಳ ಪರಿಚಯ: ಅವುಗಳ ಉಪಯೋಗ ಮತ್ತು ಉಪಯೋಗಿಸುವ ರೀತಿ.
3. ಈ ಕೆಳಗಿನ ಚಿತ್ರಗಳನ್ನು ಬಿಡಿಸಲು ಬಳಸುವ ಉಪಕರಣಗಳ ಪ್ರದರ್ಶನ:

   - ಸಮನಾಂತರ, ಲಂಬ, ಮತ್ತು ಓರೆಗೆರೆಗಳು.
   - ಕಾಂಪಸ್ಸನ್ನು ಸರಿಯಾಗಿ ಇಟ್ಟುಕೊಳ್ಳುವ ರೀತಿ.

- ಪ್ರಕ್ಷೇಪಣ (projection): ಯೋಜನೆಗಳು, ಚಪ್ಪಟೆ ನಕಾಸೆ ಮತ್ತು ಭಾಗ.
- ವರ್ತುಲಗಳು: ಕೇಂದ್ರ, ತ್ರಿಜ್ಯ, ಸುತ್ತಳತೆ.
- ಚೌಕ, ಚತುರ್ಭುಜ, ಷಡ್ಭುಜ, ಅಷ್ಟಭುಜ ಇತ್ಯಾದಿ.

4. ವಿದ್ಯಾರ್ಥಿ ತಾನು ತಯಾರಿಸಿದ ಮಾದರಿಯನ್ನು ರೇಖನದ ಮೂಲಕ ವಿವರಿಸಬೇಕು.

**ಮಾಡಿ-ಕಲಿ**

1. ಪ್ರತಿಯೊಬ್ಬ ವಿದ್ಯಾರ್ಥಿ ಕನಿಷ್ಠ ಹದಿನೈದು ಮಾದರಿಗಳನ್ನು ತಯಾರಿಸಬೇಕು.
2. ಮತ್ತು ಅವುಗಳ ಮೂಲಕ ಎಂಟು ರೀತಿಯ ಜೋಡಿಸುವಿಕೆಯನ್ನು ನಿರೂಪಿಸಬೇಕು.
3. ಪಾಲಿಶ್ ಮಾಡುವುದು.
4. ಬಣ್ಣ ಹಾಕುವುದು.

**ಓದಿ-ನೋಡಿ-ತಿಳಿ ಮತ್ತು ಪ್ರಾಯೋಗಿಕ ಪ್ರದರ್ಶನ:**

(1) ಪದಾರ್ಥ.

(2) ಅಳತೆ.

(3) ಮೆಟ್ರಿಕ್ ಪದ್ಧತಿ: ಭಿನ್ನರಾಶಿ, ಮೂರರ ನಿಯಮ.

(4) ತೂಕ (ಭಾರತೀಯ, ಅಂತರಾಷ್ಟ್ರೀಯ, ಮತ್ತು ಇಂಗ್ಲಿಷ್ ಪದ್ಧತಿ).

(5) ಸಾಂದ್ರತೆ.

(6) ನಿರ್ದಿಷ್ಟ ಗುರುತ್ವಾಕಷÀಣ ಶಕ್ತಿ.

(7) ಬಲ ಮತ್ತು ಕೆಲಸ.

(8) ರೇಖನದ ನಿರೂಪಣೆ.

(9) ಬಲಗಳ ಸಮನಾಂತರ ಚತುರ್ಭುಜ.

(10) ಬಲಗಳ ವಿಘಟನೆ.

(11) ಯಾಂತ್ರಿಕ ಸಾಧನಗಳು.

(12) ಮೀಟುಗೋಲುಗಳು.

## ಅಗತ್ಯವಾದ ಸಲಕರಣೆಗಳ ಪಟ್ಟಿ

ತರಗತಿ VII ರಲ್ಲಿ ರಟ್ಟುಗೆಲಸವನ್ನು ಐಚ್ಛಿಕ ತರಬೇತಿಯನ್ನು ತೆಗೆದುಕೊಳ್ಳುತ್ತಿರುವ ಮೂವತ್ತು ಮಂದಿ ವಿದ್ಯಾರ್ಥಿಗಳಿಗೆ ಬೇಕಾದ ಸಲಕರಣೆ.

| | ರೂ | ಅನ | ಪೈಸೆ |
|---|---|---|---|
| 1 ಕೆಲಸ ಮಾಡಲು ಮೇಜು | 40 | 0 | 0 |
| 2 ಅಲ್ಮೇರಾಗಳು | 50 | 0 | 0 |
| 30 ಚಾಕುಗಳು | 15 | 0 | 0 |
| 2 ಕೂತು ಕೆಲಸ ಮಾಡಲು ಬೇಕಾದ ಬೆಂಚುಗಳು | 15 | 0 | 0 |
| 30 ಸಮತೋಲನಗಳು | 15 | 0 | 0 |
| 4 ಸಪಾಟಾದ ಕಬ್ಬಿಣದ ಚೌಕಗಳು | 5 | 0 | 0 |
| 30 ಕೆಲಸದ ಹಲಗೆಗಳು | 45 | 0 | 0 |
| 30 ಬಿದಿರು ಅಥವಾ ಮರದಲ್ಲಿ ಮಾಡಿದ ಕಾಗದ ಕತ್ತರಿಸುವ ಚಾಕುಗಳು | 7 | 8 | 0 |
| 10 ಕತ್ತರಿಗಳು | 4 | 12 | 0 |
| ಸಾಮಗ್ರಿಗಳು: ಕಾಗದ, ರಟ್ಟು, ಬಟ್ಟೆ, ಚರ್ಮ ಇತ್ಯಾದಿ. | 60 | 0 | 0 |
| **ಒಟ್ಟು ರೂ.** | **260** | **4** | **0** |

## ರಟ್ಟುಗೆಲಸದ ತರಗತಿಯಲ್ಲಿ
## ಹದಿನೈದು ಮಂದಿ ಆರಂಭಿಕ ವಿದ್ಯಾರ್ಥಿಗಳಿಗೆ ಬೇಕಾದ ಸಲಕರಣೆ

| | ರೂ | ಅನ | ಪೈಸೆ |
|---|---|---|---|
| 1 ಅಲ್ಮೇರಾ | 25 | 0 | 0 |
| 15 ಚಾಕುಗಳು | 10 | 0 | 0 |
| 2 ಕೂತು ಕೆಲಸ ಮಾಡಲು ಬೇಕಾದ ಬೆಂಚುಗಳು | 12 | 0 | 0 |
| 1 ಕೆಲಸ ಮಾಡುವ ಮೇಜು | 12 | 0 | 0 |
| 15 ಸಮತೋಲನಗಳು | 7 | 0 | 0 |
| 2 ಸಪಾಟಾದ ಕಬ್ಬಿಣದ ಚೌಕಗಳು | 2 | 8 | 0 |
| 15 ಕೆಲಸದ ಹಲಗೆಗಳು | 22 | 8 | 0 |
| 7 ಕತ್ತರಿಗಳು | 2 | 0 | 0 |
| 17 ಬಿದಿರು ಅಥವಾ ಮರದಲ್ಲಿ ಮಾಡಿದ ಕಾಗದ ಕತ್ತರಿಸುವ ಚಾಕುಗಳು | 5 | 0 | 0 |
| ಸಾಮಗ್ರಿಗಳು: ಕಾಗದ, ರಟ್ಟು, ಬಟ್ಟೆ, ಚರ್ಮ ಇತ್ಯಾದಿ. | 38 | 0 | 0 |
| **ಒಟ್ಟು ರೂ.** | **136** | **8** | **0** |

**ತರಗತಿ VI ಮತ್ತು VII ರಲ್ಲಿ ಮರಗೆಲಸವನ್ನು ಐಚ್ಛಿಕವಾಗಿ ತೆಗೆದುಕೊಳ್ಳುವ ಹದಿನೈದು ಮಂದಿ ವಿದ್ಯಾರ್ಥಿಗಳಿಗೆ ಬೇಕಾದ ಸಲಕರಣೆ**

| | ರೂ | ಅನ | ಪೈಸೆ |
|---|---|---|---|
| ಕೂತು ಕೆಲಸ ಮಾಡಲು ಬೇಕಾದ | | | |
| 15 ಸಿಂಗಲ್ ಅಥವಾ 8 ಡಬಲ್ ಬೆಂಚುಗಳು | 250 | 0 | 0 |
| (2 ಬಿಗಿ ಹಿಡಿತೆಗಳು ಮತ್ತು ಪರಿಕರಗಳ ಕಪಾಟನ್ನು ಅಳವಡಿಸಲಾದ ಗಟ್ಟಿಮರದ ಚೌಕಟ್ಟಿನ ಕೆಲಸದ ಬೆಂಚುಗಳು) | | | |
| 15 ವಿವಿಧ ರೀತಿಯ ಗರಗಸಗಳು | 45 | 0 | 0 |
| 30 ಉಜ್ಜುಗೊರಡುಗಳು (ಠಿಟಚಿಟಿes) | 98 | 0 | 0 |
| 15 ಅಡಿಲೆಕ್ಕದ ಅಳತೆಪಟ್ಟಿಗಳು | 15 | 0 | 0 |
| 15 (try-square) ಟ್ರೈ-ಸ್ಕ್ವೇರ್* | 20 | 0 | 0 |
| 15 ಚಾಕುಗಳು | 15 | 0 | 0 |
| 5 ಸ್ಕ್ರೂ ಡ್ರೈವರುಗಳು | 5 | 0 | 0 |
| 1 ರುಬ್ಬುವಕಲ್ಲು | 6 | 0 | 0 |
| 2 ರಂಧ್ರ ಕೊರೆಯುವ ಕೈಯಂತ್ರಗಳು | 6 | 0 | 0 |
| 15 ಸುತ್ತಿಗೆಗಳು | 15 | 0 | 0 |
| 1 ಸೆಟ್ಟು ಬೈರಿಗೆ ಮೊಳೆಗಳು | 18 | 0 | 0 |
| 15 ರೇಖಕ ಸಾಧನಗಳು (gauges) | 15 | 0 | 0 |
| 5 ಕಾಂಪಸ್ಸುಗಳು | 2 | 8 | 0 |
| 40 ಹಿಡಿಯುಳ್ಳ ಉಳಿಗಳು | 28 | 0 | 0 |
| 1 ಚಿಮ್ಮಟ | 2 | 8 | 0 |

| | | | |
|---|---|---|---|
| 15 ಕಬ್ಬಿಣ ಉಜ್ಜುಗಗಳು | 15 | 0 | 0 |
| 10 ವಿವಿಧ ರೀತಿಯ ರಂಧ್ರ ಕೊರೆಯುವ | | | |
| ಯಂತ್ರಗಳು | 8 | 0 | 0 |
| ಇತರೆ | 50 | 0 | 0 |
| ಮೊಳೆಗಳು, ಸ್ಕ್ರೂಗಳು, ಮರ ಇತ್ಯಾದಿ. | 300 | 0 | 0 |
| **ಒಟ್ಟು ರೂ.** | **914** | **0** | **0** |

* ಟ್ರೈ-ಸ್ಕ್ವೇರ್ – ಮರದ ತುಂಡುಗಳ ಮೇಲೆ 900 ಕೋನಗಳನ್ನು ಗುರುತು ಮಾಡಲು ಮತ್ತು ಪರಿಶೀಲಿಸಲು ಬಳಸುವ ಮರಗೆಲಸದ ಸಾಧನ.

## ತರಗತಿ VI ಮತ್ತು VII ರಲ್ಲಿ ಲೋಹಗೆಲಸವನ್ನು ಐಚ್ಛಿಕವಾಗಿ ತೆಗೆದುಕೊಳ್ಳುವ ಹದಿನೈದು ಮಂದಿ ವಿದ್ಯಾರ್ಥಿಗಳಿಗೆ ಬೇಕಾದ ಸಲಕರಣೆ

| | **ರೂ** | **ಅನ** | **ಪೈಸೆ** |
|---|---|---|---|
| 3 ಅಡಿಗಲ್ಲುಗಳು | | | |
| 15 ಬಿಗಿ ಹಿಡಿಕೆಗಳು | | | |
| 15 ಸುತ್ತಿಗೆಗಳು | | | |
| 1 ತಿದಿ | | | |
| 20 ವಿವಿಧ ರೀತಿಯ ಸರಿಗೆಗಳು | | | |
| 1 ರಂಧ್ರ ಕೊರೆಯುವ ಯಂತ್ರ | | | |
| 1 ತಗಡನ್ನು ಕತ್ತರಿಸುವ ಯಂತ್ರ | | | |
| ಇತರೆ (ಅಂದಾಜಿನಲ್ಲಿ) | 500 | 0 | 0 |
| ಸಾಮಗ್ರಿಗಳು: ತಾಮ್ರ, ಕಬ್ಬಿಣ, ಮತ್ತು | | | |

| | |
|---|---|
| ಹಿತ್ತಾಳೆಯ ಶೀಟುಗಳು ಇತ್ಯಾದಿ | 100 0 0 |
| **ಒಟ್ಟು ರೂ.** | **600 0 0** |

**ವಿಶೇಷ ಸೂಚನೆ**

ಮೇಲೆ ಸೂಚಿಸಿರುವ ಬೆಲೆಗಳು ಕೇವಲ ಅಂದಾಜಿನ ಮೇರೆಗೆ ಅಷ್ಟೇ. ಸ್ಥಳೀಯ ಸನ್ನಿವೇಶಕ್ಕೆ ಬದಲಾಗುವ ಸಾಧ್ಯತೆಗಳಿರುತ್ತವೆ.

**ತರಗತಿಗಳು.**

ರಟ್ಟುಗೆಲಸದ 30 ವಿದ್ಯಾರ್ಥಿಗಳನ್ನು ಒಳಗೊಳ್ಳಬಲ್ಲ ಜಾಗವನ್ನು ತರಗತಿಯ ಕೊಠಡಿ ಹೊಂದಿರಬೇಕು.

ಕೊಠಡಿಯ ಅಳತೆ: 45x25 ಅಡಿಗಳು.

**ಮರಗೆಲಸದ ಕೊಠಡಿ.**

ಮರಗೆಲಸದ ಕೊಠಡಿಯ ಆಕಾರ ಅಲ್ಲಿಯ ಬೆಂಚುಗಳನ್ನು ಇಡುವ ರೀತಿಯ ಮೇಲೆ ಅವಲಂಬಿಸಿರುತ್ತದೆ. 30 ಮಂದಿ ವಿದ್ಯಾರ್ಥಿಗಳಿಗೆ 60x24 ಅಡಿಗಳು ಮತ್ತು 15 ಮಂದಿಗೆ 45x25 ಅಡಿಗಳು ಸೂಕ್ತವಾಗಿರುತ್ತದೆ.

ಕೆಲಸದ ಕೊಠಡಿಗಳಿಗೆ ಹೊಂದಿಕೊಂಡಂತೆ ಒಂದು ಬಾಗಿಲು ಹಾಕಿ ಭದ್ರಪಡಿಸಬಲ್ಲ ಉಗ್ರಾಣದ ಕೊಠಡಿಯೂ ಇರಬೇಕು.

**15 ಮಂದಿ ವಿದ್ಯಾರ್ಥಿಗಳಿಗೆ ಲೋಹಗೆಲಸದ ಕೊಠಡಿ.**

ಅಗತ್ಯವಾದ ಕೊಠಡಿಯ ವಿಸ್ತಾರ: 45x25 ಅಡಿಗಳ ವಿಸ್ತಾರದ ಬಾಗಿಲು ಹಾಕಿ ಭದ್ರಪಡಿಸಬಲ್ಲ ಕೊಠಡಿಯು ಸೂಕ್ತವಾಗಿರುತ್ತದೆ.

**ವಿಶೇಷ ಸೂಚನೆ**

ರಟ್ಟುಗೆಲಸದ ಕೊಠಡಿಯನ್ನು ಚಿತ್ರ ನಕಾಶೆಯನ್ನು ಸಿದ್ದ ಮಾಡುವ ಮತ್ತು ಶಾಲೆಯ ವಸ್ತುಸಂಗ್ರಹಾಲಯದ ಕೊಠಡಿಯನ್ನಾಗಿ ಸಹ ಬಳಸಿಕೊಳ್ಳಬಹುದು.

## ಮಾತೃಭಾಷೆ ಮತ್ತು ಹಿಂದೂಸ್ತಾನಿ

## ತರಗತಿ

## I

### 1. ಮೌಖಿಕ ಸ್ವ-ಅಭಿವ್ಯಕ್ತಿ.

ಮನುಷ್ಯನ ವಿವಿಧ ಅಂಗಗಳ ಹೆಸರುಗಳು ಮತ್ತು ಅವುಗಳ ವಿವರಣೆ, ಉಡುಪುಗಳು, ತರಗತಿ, ಕರಕೌಶಲ್ಯದಲ್ಲಿ ಬಳಸುವ ಉಪಕರಣಗಳು ಮತ್ತು ಪ್ರಕ್ರಿಯೆಗಳು, ಸಹಜ ವಿದ್ಯಮಾನಗಳು, ದಿನನಿತ್ಯ ನಡೆಯುವಂತ ಘಟನೆಗಳ ಮೇಲೆ ಸಂವಾದಗಳನ್ನು ಕೇಂದ್ರೀಕರಿಸುವುದು.

### 2. ಕಥೆಗಳು.

(a) ಮಿಥಕಗಳು ಮತ್ತು ದಂತಕಥೆಗಳು.
(b) ಜಾನಪದ ಕಥೆಗಳು.
(c) ನಿಸರ್ಗದ ಮಿಥಕಗಳು.
(d) ನೀತಿಕಥೆ ಮತ್ತು ಪ್ರಾಣಿಲೋಕದ ಕಥೆಗಳು.
(e) ಭೂಮಿಯ ಇತರ ಭಾಗಗಳಲ್ಲಿನ ಮನುಷ್ಯ ಸಮುದಾಯದ ಕಥೆಗಳು.
(f) ಆದಿಮಾನವ ಮತ್ತು ಪುರಾತನಕಾಲಕ್ಕೆ ಸಂಬಂಧಪಟ್ಟ ಕಥೆಗಳು.
(g) ಶಾಲೆಯ ಮತ್ತು ಕುಟುಂಬದ ಬದುಕಿಗೆ ಸಂಬಂಧಪಟ್ಟ ಕಥೆಗಳು.

### ವಿಶೇಷ ಸೂಚನೆ

ಕೊನೆಯ ಮೂರು ವಿವರಗಳು (e, f, ಮತ್ತು g) ಸಾಮಾಜಿಕ ಅಧ್ಯಯನದ ಪಠ್ಯಕ್ರಮದಲ್ಲೂ ಸೇರಿರುತ್ತದೆ.

3. ಸರಳವಾದ ಪದ್ಯಗಳ ವಾಚನ.

4. ಅಭಿನಯ.

5. ಸರಳವಾದ ಪದಗಳನ್ನು ಮತ್ತು ವಾಕ್ಯಗಳನ್ನು ಓದುವ ಸಾಮರ್ಥ್ಯ.

ಮಾತೃಭಾಷೆಗೆ ಸಂಬಂಧಪಟ್ಟಂತೆ ವಿದ್ಯಾರ್ಥಿಯ ಮೊದಲ ಆರು ತಿಂಗಳು ಕಲಿಕೆ ಸಂಪೂರ್ಣವಾಗಿ ಮೌಖಿಕವಾಗಿಯೇ ಇರಬೇಕು.

## ತರಗತಿ

**II**

1. ಮೌಖಿಕ ಸ್ವ-ಅಭಿವ್ಯಕ್ತಿ.

   (a) ಮಗುವಿನ ಪದಸಾಮರ್ಥ್ಯ ವಿಸ್ತಾರ: ಕರಕೌಶಲ್ಯ, ಗಣಿತ, ನಿಸರ್ಗ, ಮತ್ತು ಸಮಾಜದ ಕಲಿಕೆಯಲ್ಲಿ ಮಗು ಕಲಿತಿರುವ ಹೊಸ ಪದಗಳ ಪುನರಾವರ್ತನ.
   (b) ವಿವರಣಾತ್ಮಕ ಸ್ವ-ಅಭಿವ್ಯಕ್ತಿ: ಮಗು ತನ್ನ ಸುತ್ತಮುತ್ತಲ ವಸ್ತು, ಜನ, ಘಟನೆಗಳ ಬಗ್ಗೆ ಮಾತನಾಡುವ ಮತ್ತು ಹಳ್ಳಿಯ ವಿವಿಧ ಕರಕೌಶಲ್ಯಗಳು, ವೃತ್ತಿಗಳು, ಜಾತ್ರೆ, ಹಬ್ಬ ಇತ್ಯಾದಿಗಳನ್ನು ವಿವರಿಸುವ ಸಾಮರ್ಥ್ಯವನ್ನು ಪಡೆಯಬೇಕು.

2. ವಾಚನ ಮತ್ತು ಅಭಿನಯ.

3. ಕಥೆಗಳು: ಒಂದನೇ ತರಗತಿಯ ಪಠ್ಯಕ್ರಮದ ಮುಂದುವರಿಕೆ.

4. ಓದುವಿಕೆ:

ಈ ಕೆಳಗಿನ ವಿಷಯಗಳ ಬಗ್ಗೆ ಪಾಠಗಳನ್ನು ಒಳಗೊಂಡಿರುವ ಸರಳ ಪುಸ್ತಕಗಳನ್ನು ಓದುವುದು:

   (a) ನಿಸರ್ಗದ ಜೀವನ.
   (b) ಮಗುವಿನ ಸಾಮಾಜಿಕ ವಾತಾವರಣ: ಮನೆ, ಶಾಲೆ ಮತ್ತು ಹಳ್ಳಿ.
   (c) ಆರೋಗ್ಯ ಮತ್ತು ನೈರ್ಮಲ್ಯ.
   (d) ಸಮುದಾಯ ಕಲ್ಯಾಣಕ್ಕೆಂದಿರುವ ಸ್ಥಳೀಯ ಕಾರ್ಯಭಾರಗಳು.
   (e) ಕರಕೌಶಲ್ಯಗಳು.
   (f) ಹಬ್ಬಗಳು.
   (g) ಕಥೆಗಳು ಮತ್ತು ದಂತಕಥೆಗಳು.
   (h) ಭೂಮಿಯ ಬೇರೆ ಭಾಗಗಳಲ್ಲಿ ಮಕ್ಕಳ ಬದುಕು ಹೇಗಿದೆ.

5. ಬರವಣಿಗೆ: ಸರಳವಾದ ಪದಗಳು ಮತ್ತು ವಾಕ್ಯಗಳು.

## ತರಗತಿ

## III

1. ಮೌಖಿಕ ಸ್ವ-ಅಭಿವ್ಯಕ್ತಿ.

ತರಗತಿ ಎರಡರಲ್ಲಿ ಕಲಿತಿದ್ದರ ಮುಂದುವರಿಕೆ. ಜೊತೆಗೆ ಸರಳವಾದ ಕಥೆಗಳನ್ನು ಹೇಳುವುದು.

2. ಓದುವಿಕೆ.

ತರಗತಿ II ರ ಪಠ್ಯಕ್ರಮದ ಮುಂದುವರಿಕೆಯ ಜೊತೆಗೆ ಬುದ್ಧ, ಏಸುಕ್ರಿಸ್ತ ಮತ್ತು ಮಹಮ್ಮದ್ ಪೈಗಂಬರರಂತಹ ಲೋಕಕಲ್ಯಾಣಕ್ಕೆ ಬದುಕನ್ನು ಸವೆಸಿದ ಮಹಾತ್ಮರ ಕಥೆಗಳನ್ನು ಒಳಗೊಳ್ಳಬೇಕು.

(a) ಸ್ಪಷ್ಟ ಉಚ್ಚಾರಣೆ ಮತ್ತು ಅಭಿವ್ಯಕ್ತಿಗಳ ಮೇಲೆ ಒತ್ತು ನೀಡಿ ಜೋರಾಗಿ ಓದಬೇಕು.
(b) ಸರಳ ಗದ್ಯಗಳನ್ನು ಮನಸ್ಸಿನಲ್ಲೇ ಓದಿಕೊಳ್ಳಬೇಕು.

3. ಬರವಣಿಗೆ.

(a) ಹೇಳಿ ಬರೆಸುವಿಕೆಯ ಮೂಲಕ ಕೆಲವು ಸರಳವಾದ ವಾಕ್ಯಗಳು.
(b) ಸರಳರೂಪದಲ್ಲಿ ಪತ್ರ, ವಿವರಣೆ ಮತ್ತು ಕಥೆಗಳು.
(c) ಹವಾಮಾನ ಅವಲೋಕನಗಳ ದೈನಂದಿನ ದಾಖಲೆ.

4. ವಾಚನ ಮತ್ತು ಅಭಿನಯ.

## ತರಗತಿ

## IV

### 1. ಮೌಖಿಕ ಸ್ವ-ಅಭಿವ್ಯಕ್ತಿ.

ಒಂದನೆಯ, II ಮತ್ತು III ತರಗತಿಗಳಲ್ಲಿ ಕಲಿತಿದ್ದನ್ನು ಮುಂದುವರೆಸುವ ಜೊತೆಗೆ ಈ ಕೆಳಗಿನದನ್ನೂ ಕಲಿಯುವುದು:

(a) ಕರಕೌಶಲ್ಯ, ಸಾಮಾಜಿಕ ಅಧ್ಯಯನ ಮತ್ತು ಸಾಮಾನ್ಯ ವಿಜ್ಞಾನಗಳಿಗೆ ಸಂಬಂಧಪಟ್ಟಂತೆ ಪುಟ್ಟ ಭಾಷಣಗಳನ್ನು ಮಾಡುವುದು.
(b) ಸುತ್ತಮುತ್ತಲಿನ ಬದುಕಿಗೆ ಸಂಬಂಧಪಟ್ಟಂತೆ ಚರ್ಚೆಗಳಲ್ಲಿ ಭಾಗವಹಿಸುವುದು.

**ವಿಶೇಷ ಸೂಚನೆ**

ಮೇಲಿನ ಎರಡು ಅಂಶಗಳಿಗೆ ಸಂಬಂಧಪಟ್ಟಂತೆ IV ಮತ್ತು V ತರಗತಿಯ ವಿದ್ಯಾರ್ಥಿಗಳಿಗೆ ಚರ್ಚೆಯ ಗುಂಪನ್ನು ಅಥವಾ ವಾಗ್ವಾದದ ಸಂಘವೊಂದನ್ನು ಪ್ರಾರಂಭಿಸಬಹುದು.

2. ಓದುವಿಕೆ.

ಮೂರನೇ ತರಗತಿಯ ಪಠ್ಯಕ್ರಮದಲ್ಲಿ ಸೂಚಿಸಿರುವ ವಿಷಯಗಳ ಜೊತೆಗೆ ತರಗತಿ IVರಲ್ಲಿ ಈ ಕೆಳಗಿನವುಗಳನ್ನು ಓದುವ ವಿಷಯಗಳಾಗಿ ಸೇರಿಸಿಕೊಳ್ಳಬೇಕು.

(a) ಹಳ್ಳಿಯ ಕರಕೌಶಲ್ಯಗಳು ಮತ್ತು ಕರಕುಶಲಿಗರಿಗೆ ಸಂಬಂಧಪಟ್ಟ ಕಥೆಗಳು.

ಕಟ್ಟಡ ಕಟ್ಟುವುದು, ಬಟ್ಟೆ ತಯಾರಿಕೆ, ಕುಂಬಾರಿಕೆ ಇತ್ಯಾದಿಯಂತಹ ವಿಭಿನ್ನ ಕಾಲ ದೇಶಗಳ ಕಲೆ ಮತ್ತು ಕರಕೌಶಲ್ಯಗಳ ಬಗೆಗಿನ ಕಥೆಗಳು.

(b) ಸುಪ್ರಸಿದ್ಧ ಸಂಶೋಧನೆಗಳು ಮತ್ತು ಸಂಶೋಧಕರ ಬಗೆಗಿನ ಕಥೆಗಳು.
(c) ಸುಪ್ರಸಿದ್ಧ ಅನ್ವೇಷಕರು ಮತ್ತು ಅನ್ವೇಷಣೆಗಳ ಬಗೆಗಿನ ಕಥೆಗಳು. (ಸಾಮಾಜಿಕ ಅಧ್ಯಯನದ ಪಠ್ಯಕ್ರಮವನ್ನು ನೋಡಿ.)
(d) ಜಗತ್ತಿನ ಕೆಲವು ಸಾಮಾನ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನರ ಬದುಕಿನ ಬಗ್ಗೆ.
(e) ಜೊರಾಸ್ಟರ್ (Zoroaster), ಸಾಕ್ರೆಟೀಸ್ (Socrates), ಹುಸೇನ್ (Husain), ಲಿಂಕನ್ (Lincoln), ಪಾಸ್ಟರ್ (Pasteur), ಡೇವಿ (Davy), ಫ್ರಾಂಕ್ಲಿನ್ (Franklin), ಫ್ಲಾರೆನ್ಸ್ ನೈಟಿಂಗೇಲ್(Florence Nightingale), ಟಾಲ್ಸ್ಟ್ಯಾಯ್ (Tolstory), ಬೂಕರ್ ವಾಶಿಂಗ್ಟನ್ (Booker Washington), ಸುನ್ ಯಾಟ್ ಸೆನ್ (Sun Yat Sen), ಗಾಂಧಿ (Gandhi) (IV ಮತ್ತು V ತರಗತಿಗಳಲ್ಲಿ ಹೇಳಿಕೊಡಲಾಗುತ್ತದೆ) ಮುಂತಾದ ಮನುಷ್ಯಕುಲದ ಏಳಿಗೆಗೆ ದುಡಿದ ಮಹಾತ್ಮರ ಜೀವನ ಕಥೆಗಳು.

**ವಿಶೇಷ ಸೂಚನೆ**

ಇವೆಲ್ಲವೂ ಸಾಮಾಜಿಕ ಅಧ್ಯಯನಕ್ಕೆ ಸಹಸಂಬಂಧಿತವಾಗಿ ಹೇಳಿಕೊಡಲಾಗುತ್ತದೆ.

3. ಬರವಣಿಗೆ.

(a) ಸೃಜನಶೀಲ ಬರವಣಿಗೆ: ವಿದ್ಯಾರ್ಥಿಗಳು ಸ್ವತಹ ತಾವೇ ಬರೆದ ಸಣ್ಣ ಸಣ್ಣ ಕಥೆಗಳು ಮತ್ತು ಇತರ ಕಥೆಗಳು.
(b) ಹೇಳಿ ಬರೆಸುವಿಕೆಯ ಮೂಲಕ ಬರೆಯುವುದು.
(c) ಸರಳವಾದ ಮತ್ತು ವ್ಯಾವಹಾರಿಕ ಪತ್ರಗಳನ್ನು ಬರೆಯುವುದು.
(d) ಮೂಲ ಕರಕೌಶಲ್ಯದಲ್ಲಿ ಸಾಧಿಸಿರುವ ವ್ಯಕ್ತಿಗತ ಮತ್ತು ತರಗತಿಯ ಪ್ರಗತಿಯನ್ನು ಮತ್ತು ಇತರ ಆಸಕ್ತಿ ಹುಟ್ಟಿಸಿದ ಅನುಭವಗಳನ್ನು ದಿನನಿತ್ಯ ಮತ್ತು ಮಾಸಿಕವಾಗಿ ದಾಖಲಿಸುವುದು.

4. ನಾಲ್ಕು ಮತ್ತು V ತರಗತಿಯ ಕಿರಿಯ ವಿದ್ಯಾರ್ಥಿಗಳಿಗೆಂದು ತರಗತಿಯ ನಿಯತಕಾಲಿಕೆಗೆ ಬರೆಯುವುದು ಮತ್ತು ನ್ಯೂಸ್ ಬುಲೆಟಿನ್ ಅನ್ನು ತಯಾರಿಸುವುದು.

**ವಿಶೇಷ ಸೂಚನೆ**

ಈ ನಿಯತಕಾಲಿಕೆ ಉಳಿದ ವಿಷಯಗಳನ್ನೂ ಸೇರಿಸಿದಂತೆ ಈ ಕೆಳಗಿನವುಗಳನ್ನು ಒಳಗೊಂಡಿರಬೇಕು:

(a) ಮೂಲ ಕರಕೌಶಲ್ಯದ ಕಲಿಕೆಯಲ್ಲಿ ತರಗತಿ ಸಾಧಿಸಿರುವ ಪ್ರಗತಿಯ ಮಾಸಿಕ ದಾಖಲಾತಿ.
(b) ದಿನನಿತ್ಯದ ಮತ್ತು ತಿಂಗಳ ಹವಾಮಾನ ವರದಿಗಳು.
(c) ತರಗತಿಯ, ಕುಟುಂಬದ ಮತ್ತು ಹಳ್ಳಿಯ ಆರೋಗ್ಯದ ಬಗ್ಗೆ ವರದಿಗಳು.
(d) ಸಾಮಾಜಿಕ ಮತ್ತು ಭೌಗೋಳಿಕ ಸಮೀಕ್ಷೆಗಳ ಬಗ್ಗೆ ವರದಿಗಳು.
(e) ಪ್ರಸಕ್ತ ಘಟನಾವಳಿಗಳು.

## ತರಗತಿ

## V

ಮೌಖಿಕ, ಓದು ಮತ್ತು ಬರವಣಿಗೆಗಳಿಗೆ ಸಂಬಂಧಪಟ್ಟಂತೆ IV ನೇ ತರಗತಿಯ ಪಠ್ಯಕ್ರಮವನ್ನು ಮುಂದುವರೆಸುವುದರ ಜೊತೆಗೆ ಈ ಕೆಳಗಿನ ಹೊಸ ಅಂಶಗಳನ್ನೂ ಪರಿಚಯಿಸಲಾಗುತ್ತದೆ:

1. ಮಾತೃಭಾಷೆಯ ರಚನೆಯ ಬಗ್ಗೆ ಸರಳ ಮತ್ತು ಪ್ರಾಯೋಗಿಕ ಅರಿವು ಮತ್ತು ಪದಗಳು ನಿರ್ವಹಿಸುವ ಕಾರ್ಯ.
2. ಅರ್ಥಕೋಶ ಮತ್ತು ಅದರೊಳಗಿನ ವಿಷಯ, ಸೂಚ್ಯಂಕ ಇತ್ಯಾದಿಗಳ ಉಪಯೋಗಗಳು.

3. ಮೂಲ ಹಿಂದೂಸ್ಥಾನಿಯ ಪರಿಚಯ ಮತ್ತು ಹಿಂದೂಸ್ಥಾನಿಗೂ ಮಗುವಿನ ಮಾತೃಭಾಷೆಗೂ ಇರುವ ಸಂಬಂಧ. ಹಿಂದೂಸ್ಥಾನಿಯನ್ನು ಮಾತಾಡುವ ಪ್ರದೇಶಗಳಲ್ಲಿ ಮಗುವಿಗೆ ಗೊತ್ತಿಲ್ಲದ ಉರ್ದು ಯಾ ಹಿಂದಿ ಅಕ್ಷರಗಳನ್ನು ಕಲಿಸಲಾಗುವುದು. ಉಳಿದ ಪ್ರದೇಶಗಳಲ್ಲಿ ಮಗು ಅವೆರಡರಲ್ಲಿ ಯಾವುದಾದರೂ ಒಂದನ್ನು ಆರಿಸಿಕೊಳ್ಳಬಹುದು. ಹಿಂದೂಸ್ಥಾನಿಯನ್ನು ಪರಿಚಯಿಸುವ ಪ್ರವೇಶಿಕೆ ಮತ್ತು ಪ್ರಾಥಮಿಕ ಓದುಗವನ್ನು ಬಳಸಿಕೊಳ್ಳುವುದು.

## ತರಗತಿ

## VI

### 1. ಸಾಮಾನ್ಯ ಓದುವಿಕೆ.

ತರಗತಿ IV ರಲ್ಲಿ ಓದಿರುವುದರ ಮುಂದುವರಿಕೆಯಾಗಿ ಸಾಮಾನ್ಯ ವಿಷಯವಸ್ತುಗಳಿಗೆ ಸಂಬಂಧಪಟ್ಟಂತೆ ಬೋಧಕರ ಮಾರ್ಗದರ್ಶನದಲ್ಲಿ ಸರಳವಾದ ಪುಸ್ತಕಗಳು, ಕರಪತ್ರಗಳು, ಮತ್ತು ಲೇಖನಗಳನ್ನು ವ್ಯಕ್ತಿಗತವಾಗಿ ಓದುವುದು. ಜೊತೆಗೆ ಈ ಕೆಳಗಿನವನ್ನೂ ಓದಬೇಕು:

(a) ಎವರೆಸ್ಟ್, ಉತ್ತರ ಧ್ರುವಗಳಂತಹ ಇತ್ತೀಚಿನ ಭೌಗೋಳಿಕ ಅನ್ವೇಷಣೆಗಳು.
(b) ಬೇರೆ ದೇಶಗಳ ನಿದರ್ಶನಗಳೂ ಒಳಗೊಂಡಂತೆ ಸಮುದಾಯ ನೈರ್ಮಲ್ಯ, ಸಮುದಾಯ ಕಲ್ಯಾಣಗಳ ಬಗ್ಗೆ ಯಾವ ರೀತಿಯ ಕೆಲಸಗಳು ನಡೆಯುತ್ತಿವೆ.
(c) ವ್ಯವಸಾಯ ಮತ್ತು ವ್ಯವಸಾಯಗಾರನ ಸ್ಥಿತಿ ಭಾರತದಲ್ಲಿ ಮತ್ತು ಇತರ ದೇಶಗಳಲ್ಲಿ ಹೇಗಿದೆ.

2. ಸಾಹಿತ್ಯದ ಓದು.

(a) ಮಾತೃಭಾಷೆಯಲ್ಲಿನ ಸಾಹಿತ್ಯದ ಪ್ರಾತಿನಿಧಿಕ ಸಂಗ್ರಹಗಳಿಂದ ಆಯ್ಕೆಗಳು.
(b) ಭಾರತೀಯ ಸಾಹಿತ್ಯಗಳಲ್ಲಿನ ಅತ್ಯುತ್ತಮ ಆಯ್ಕೆಗಳನ್ನು ಮಗುವಿನ ಮಾತೃಭಾಷೆಯ ಅನುವಾದದಲ್ಲಿ ಓದುವುದು.

3. ಮಗುವು ತನ್ನ ಮಾತೃಭಾಷೆಯ ರಚನೆ ಮತ್ತು ವ್ಯಾಕರಣವನ್ನು ಸ್ವಲ್ಪ ಹೆಚ್ಚಿನ ಮಟ್ಟದಲ್ಲಿ ಓದುವುದು.

- ಪದರಚನೆ.

• ವಾಕ್ಯರಚನೆ.

• ರಚನೆಯ ಸಮರೂಪತೆ - ಉತ್ತಮ ಭಾಷಾಶೈಲಿಯ ಗುಣಗಳು.

4. ಸ್ವ-ಅಭಿವ್ಯಕ್ತಿ - ಮೌಖಿಕ ಮತ್ತು ಬರವಣಿಗೆ.

ನಾಲ್ಕು ಮತ್ತು V ತರಗತಿಗಳ ಕಲಿಕೆಯ ಮುಂದುವರಿಕೆಯ ಜೊತೆಗೆ ಈ ಕೆಳಗಿನ ಅಂಶಗಳನ್ನೂ ಒಳಗೊಳ್ಳುವುದು:

(a) ದಿನನಿತ್ಯದ ಸುದ್ದಿಸಮಾಚಾರದ ಸರಳ ಪತ್ರಿಕೆಯನ್ನು ತಯಾರಿಸುವುದು.
(b) ಆರು ಮತ್ತು VII ರ ತರಗತಿಯ ವಿದ್ಯಾರ್ಥಿಗಳಿಗೆ ಶಾಲಾ ನಿಯತಕಾಲಿಕೆಯನ್ನು ಸಂಪಾದಿಸುವುದು.
(c) ಸೂಚನೆ, ಪ್ರಕಟಣೆ, ಮತ್ತು ಜಾಹೀರಾತುಗಳನ್ನು ತಯಾರು ಮಾಡುವುದು.
(d) ವ್ಯಾವಹಾರಿಕ ಅರ್ಜಿಗಳನ್ನು ಭರ್ತಿ ಮಾಡುವುದು.
(e) ಆಹ್ವಾನ ಪತ್ರಿಕೆ, ಸಂತಾಪ ಸೂಚನೆ, ಕ್ಷಮಾಪಣೆ ಇತ್ಯಾದಿ ಸಾಮಾಜಿಕ ಉಪಯೋಗಿ ಪತ್ರಗಳನ್ನು ಬರೆಯುವುದು.
(f) ಯಾವುದಾದರೂ ನಿರ್ದಿಷ್ಟ ವಿಷಯದ ಮೇಲಿನ ಚರ್ಚೆಯಲ್ಲಿ ಭಾಗವಹಿಸುವುದು ಅಥವಾ ಸಣ್ಣ ಪುಟ್ಟ ಭಾಷಣಗಳನ್ನು ಮಾಡುವುದು.

5. ಮೂಲ ಹಿಂದೂಸ್ಥಾನಿ ಕಲಿಕೆಯನ್ನು ಸ್ವಲ್ಪ ಹೆಚ್ಚಿನ ಮಟ್ಟದಲ್ಲಿ ಒದುವುದು.

- ಎರಡನೇ ವಾಚಿಕೆ.
- ಬರವಣಿಗೆ.
- ಸರಳವಾದ ಸಂಭಾಷಣೆಯ ಅಭ್ಯಾಸ.

## ತರಗತಿ

## VII

1. ತರಗತಿ VIರಲ್ಲಿ ಸೂಚಿಸಿರುವ ಪಠ್ಯಕ್ರಮದ ಸಾಮಾನ್ಯ ಓದುವಿಕೆಯ ಮುಂದುವರಿಕೆ.
2. ಸಾಹಿತ್ಯದ ಓದು.

(a) ಮಗುವಿನ ಮಾತೃಭಾಷೆಯಲ್ಲಿನ ಅತ್ಯುತ್ತಮ ಸಾಹಿತಿಗಳ ಬರವಣಿಗೆಗಳಿಂದ ಉನ್ನತ ಮಟ್ಟದ ಆಯ್ಕೆಗಳನ್ನು ಕಾಲಾನುಕ್ರಮವಾಗಿ ಜೋಡಿಸಿ ವಿದ್ಯಾರ್ಥಿಗಳಿಗೆ ಓದಲು

ಒದಗಿಸುವುದು. ಜೊತೆಗೆ ಮಾತೃಭಾಷೆಯ ಸಾಹಿತ್ಯ ಚರಿತ್ರೆಯನ್ನು ಸರಳವಾದ ರೂಪದಲ್ಲಿ ನಿರೂಪಿಸುವುದು.

(b) ವಿವಿಧ ಭಾರತೀಯ ಸಾಹಿತ್ಯದ ಮೇರುಕೃತಿಗಳಿಂದ ಅತ್ಯುತ್ತಮ (ಸ್ವಲ್ಪ ಹೆಚ್ಚಿನ ಮಟ್ಟದ) ಆಯ್ಕೆಗಳನ್ನು ವಿದ್ಯಾರ್ಥಿಗಳ ಮಾತೃಭಾಷೆಯ ಅನುವಾದದಲ್ಲಿ ಓದಲು ಒದಗಿಸುವುದು.

(c) ಜಗತ್ತಿನ ಶ್ರೇಷ್ಠ ಸಾಹಿತ್ಯದ ಕೃತಿಗಳನ್ನು ವಿದ್ಯಾರ್ಥಿಗಳ ಮಾತೃಭಾಷೆಯ ಅನುವಾದದಲ್ಲಿ ಪರಿಚಯಿಸುವುದು.

**ವಿಶೇಷ ಸೂಚನೆ**

ಈ ಪಠ್ಯಪುಸ್ತಕಗಳು ಈ ಕೆಳಗಿನವುಗಳನ್ನೂ ಸಹ ಒಳಗೊಂಡಿರಬೇಕು:

(a) ಹೆಚ್ಚಿನ ಮಟ್ಟದ ಸಾಹಿತ್ಯದ ಆಯ್ದ ಕೆಲವು ಭಾಗಗಳನ್ನು ವಿವರವಾದ ಓದಿಗೆ ಒಳಪಡಿಸುವುದು.

(b) ವಿಶ್ವದ ಪ್ರಮುಖ ಧರ್ಮಗಳ ಧರ್ಮಗ್ರಂಥ ಮತ್ತು ಧಾರ್ಮಿಕ ಬರಹಗಳಿಂದ ಆಯ್ದ ಭಾಗಗಳನ್ನು ಓದುವುದು.

3. ಮಗುವಿನ ಮಾತೃಭಾಷೆಯ ರಚನೆಯಲ್ಲಿ ಹೆಚ್ಚಿನ ಅರಿವನ್ನು ನೀಡುವುದರ ಜೊತೆಗೆ ಆ ಭಾಷೆಯ ಚರಿತ್ರೆ ಮತ್ತು ಉಳಿದ ಭಾರತೀಯ ಭಾಷೆಗಳ ಜೊತೆ ಇರುವ ಸಂಬಂಧದ ಬಗ್ಗೆ ಮೂಲ ಅರಿವನ್ನು ಬೆಳೆಸುವುದು.
4. ಮಾತು ಮತ್ತು ಬರಹಗಳಲ್ಲಿ ಸ್ವ-ಅಭಿವ್ಯಕ್ತಿ.

(a) ತರಗತಿ VI ರಲ್ಲಿ ಸೂಚಿಸಿರುವ ಪಠ್ಯಕ್ರಮದ ಮುಂದುವರಿಕೆ.

(b) ಪೂರ್ಣಗೊಳಿಸಿರುವ ಕೆಲಸದ ವರದಿಯನ್ನು ತಯಾರಿಸುವುದು. ಉದಾ: ಆರೋಗ್ಯ ಅಭಿಯಾನ, ಹಳ್ಳಿಯ ನೈರ್ಮಲ್ಯ ಯೋಜನೆ ಇತ್ಯಾದಿ.

(c) ಮಾಡಬೇಕಾದ ಕೆಲಸಕ್ಕೆ ಸೂಚನೆಗಳನ್ನು ಅಥವಾ ಯೋಜನೆಗಳನ್ನು ರೂಪಿಸುವುದು.

(d) ವಿದ್ಯಾರ್ಥಿ ತಾನೇ ಆರಿಸಿಕೊಂಡ ವಿಷಯದ ಮೇಲೆ ಒಂದು ಕರಪತ್ರವನ್ನು ತಯಾರಿಸುವುದು.

(e) ಹದಿಮೂರು ಹದಿನಾಲ್ಕು ವರ್ಷದ ಹಿರಿಯ ವಿದ್ಯಾರ್ಥಿಗಳು ತಮ್ಮ (ಹತ್ತು ಹನ್ನೆರಡು ವರ್ಷ ವಯಸ್ಸಿನ) ಕಿರಿಯರಂತೆ ತಮ್ಮದೇ ಚರ್ಚಾಗುಂಪುಗಳನ್ನು ಮತ್ತು ನಾಟಕದ ತಂಡಗಳನ್ನು ರೂಪಿಸಿಕೊಳ್ಳುವುದು. ಈ ಚರ್ಚೆ ಮತ್ತು ಮನರಂಜನಾ ಚಟುವಟಿಕೆಗಳು ಹಳ್ಳಿಯ ಬದುಕಿನ ಜೊತೆ ನಿಕಟತೆಯನ್ನು ಹೊಂದಿದ್ದು ಸಮುದಾಯದ ವಯಸ್ಕರನ್ನು ಆಕರ್ಷಿಸುವ ಸಾಮರ್ಥ್ಯವನ್ನು ಹೊಂದಿರಬೇಕು.

ಕೊನೆಯ ಎರಡು ವರ್ಷಗಳಲ್ಲಿ ವಿದ್ಯಾರ್ಥಿಗಳು ಸಾಮಜಿಕವಾಗಿ ಉಪಯೋಗವಾಗುವಂತ ವಯಸ್ಕರ ಶಿಕ್ಷಣ, ಆರೋಗ್ಯ ಅಭಿಯಾ£, ರಾಷ್ಟ್ರೀಯ ಮತ್ತು ಸಾಂಸ್ಕೃತಿಕ ಹಬ್ಬಗಳಂತಹ ಕೆಲಸಗಳನ್ನು ಹಳ್ಳಿಯಲ್ಲಿ ಹಮ್ಮಿಕೊಳ್ಳಬೇಕು. ಈ ಸಂದರ್ಭಗಳು ವಿದ್ಯಾರ್ಥಿಗಳಿಗೆ ಹಳ್ಳಿಯ ಸಾಮಾನ್ಯ ಜನರನ್ನು ಉದ್ದೇಶಿಸಿ ಪ್ರಾಯೋಗಿಕ ವಿಷಯಗಳ ಬಗ್ಗೆ ಸಣ್ಣ ಪುಟ್ಟ ಭಾಷಣಗಳನ್ನು ಮಾಡಲು ಅವಕಾ± ಒದಗಿಸುವಂತಿರಬೇಕು.

5. ಹಿಂದೂಸ್ಥಾನಿ ಭಾಷೆಯ ಹೆಚ್ಚಿನ ಮಟ್ಟದ ಅರಿವು.

(a) ಹಿಂದೂಸ್ಥಾನಿಯಲ್ಲಿ ಸಂಭಾಷಣೆ ಮತ್ತು ಸಣ್ಣ ಪುಟ್ಟ ಭಾಷಣಗಳನ್ನು ಮಾಡಲು ಸಾಮರ್ಥ್ಯ ಹೊಂದಬೇಕು.
(b) ಸರಳವಾದ ವೈಯಕ್ತಿಕ ಮತ್ತು ವ್ಯಾವಹಾರಿಕ ಪತ್ರಗಳನ್ನು ಬರೆಯುವುದು.
(c) ಸರಳವಾದ ಪುಸ್ತಕಗಳನ್ನು, ವಾರ್ತಾ ಪತ್ರಿಕೆಗಳನ್ನು ಮತ್ತು ನಿಯತಕಾಲಿಕೆಗಳನ್ನು ಓದುವುದು.

## ಗಣಿತ

## ತರಗತಿ

## I

### ಮೊದಲನೆಯ ಅರ್ಧ ವಾರ್ಷಿಕ ಅವಧಿ.

1. ಸಂಖ್ಯೆ 100 ರ ತನಕ ಎಣಿಸುವುದು (ಮೂರ್ತ ವಸ್ತುಗಳ ಮೂಲಕ); ನಾವು ಎಣಿಸುವ ರೀತಿ ದಶಾಂಶ ಪದ್ಧತಿಯನ್ನು ಒಳಗೊಂಡಿರುತ್ತದೆ ಎಂದು ಸೂಚಿಸುವುದು.
2. ಹತ್ತು, ಐದು ಮತ್ತು ಎರಡರ ಗುಣಿತದಲ್ಲಿ 100 ರ ತನಕ ಎಣಿಸುವುದು.
3. ಸಣ್ಣ ಮತ್ತು ದೊಡ್ಡ ಸಂಖ್ಯೆಗಳನ್ನು ನೋಡಿದ ತಕ್ಷಣ ಗುರುತಿಸುವುದು.

### ಎರಡನೆಯ ಅರ್ಧ ವಾರ್ಷಿಕ ಅವಧಿ.

1. ಸಂಖ್ಯೆ 160 ರ ತನಕ ಎಣಿಸುವುದು (ಮೂರ್ತ ವಸ್ತುಗಳನ್ನು ಇಟ್ಟುಕೊಂಡು). ಇದು ದಶಾಂಶ ಪದ್ಧತಿಯ ಪರಿಕಲ್ಪನೆಯನ್ನು ಮುಂದುವರೆಸುವ ಉದ್ದೇಶವನ್ನು ಹೊಂದಿರುವುದು.

2. ಹತ್ತಕ್ಕಿಂತ ಕಡಮೆಯ ಸಂಖ್ಯೆಗಳ ಕೂಡುವಿಕೆ ಮತ್ತು ಕಳೆಯುವಿಕೆಯ ಬಾಯಿಲೆಕ್ಕ ಮಾಡಿಸುವುದು. ಅದಕ್ಕೆ ಹತ್ತರ ಮಗ್ಗಿಯ ತನಕ ಚೆನ್ನಾಗಿ ಗೊತ್ತಿರುವುದು ಅವಶ್ಯಕ.
3. + ಮತ್ತು - ಚಿಹ್ನೆಗಳ ಅರ್ಥ.
4. ಹತ್ತರ ತನಕ ಕೂಡುವುದು ಮತ್ತು ಕಳೆಯುವುದರ ಸರಳ ಲೆಕ್ಕಗಳನ್ನು ಮಾಡುವುದು.
5. ಸಂಖ್ಯೆ 160 ರ ತನಕ ಬರೆಯುವುದು.
6. ಈ ಕೆಳಗಿನವುಗಳನ್ನು ಉಪಯೋಗಿಸಿಕೊಂಡು ಸರಳ ಅಳತೆಗಳನ್ನು ಮಾಡುವುದು:

   (a) ಗಜ, ಅಡಿ, ಇಂಚು ಮತ್ತು ಹಾತ್ (18 ಇಂಚು).
   (b) ಸೇರು, ಚಟಾಕು ಮತ್ತು ತೊಲ.

7. ಈ ಕೆಳಗಿನ ಜ್ಯಾಮಿತಿ ಆಕಾರಗಳನ್ನು ಗುರುತಿಸುವುದು:

   ನೇರ ರೇಖೆಗಳು; ಬಾಗಿದ ರೇಖೆಗಳು; ನೇರ ರೇಖೆ ಎಂದರೆ ಎರಡು ಬಿಂದುಗಳ ನಡುವಿನ ಕನಿಷ್ಠ ದೂರ ಎನ್ನುವುದರ ಅರಿವು.

## ತರಗತಿ

## II

1. ಸಂಖ್ಯೆ ಮತ್ತು ಸಂಕೇತಗಳು -- 999 ರ ತನಕ.
2. ಕೂಡುವಿಕೆ ಮತ್ತು ಕಳೆಯುವಿಕೆ - 20 ರ ತನಕ ಮಗ್ಗಿ.
3. ಎರಡು ಮತ್ತು ಮೂರು ಅಂಕೆಗಳಿರುವ ಸಂಖ್ಯೆಗಳನ್ನು ಅಡ್ಡವಾಗಿ ಮತ್ತು ಉದ್ದುದ್ದವಾಗಿ ಕೂಡಿಸುವುದು. ಮೊತ್ತ 999 ಅನ್ನು ಮೀರಬಾರದು.
4. ಎರಡು ಮತ್ತು ಮೂರು ಅಂಕೆಗಳಿರುವ ಸಂಖ್ಯಯಿಂದ ಕಳೆಯುವುದು.
5. ಮಗ್ಗಿ 10 x 10 ರ ತನಕ; X ಮತ್ತು /(ಭಾಗ) ಚಿಹ್ನೆಗಳ ಅರ್ಥ.
6. ಸಂಖ್ಯೆಗಳ ಸರಳ ಗುಣಾಕಾರ. ಗುಣಿತ ಸಂಖ್ಯೆ ಗರಿಷ್ಟ ಮೂರು ಅಂಕೆಗಳು ಮಾತ್ರ.
7. ಗರಿಷ್ಟ ಮೂರು ಅಂಕೆಗಳಿರುವ ಸಂಖ್ಯೆಯನ್ನು ಗರಿಷ್ಟ 9 ರಿಂದ ಭಾಗಿಸುವುದು.
8. ಉದ್ದವನ್ನು ಮತ್ತು ತೂಕವನ್ನು ಅಳೆಯುವ ಅಭ್ಯಾಸ ಮಾಡುವುದು.

   - ಹಣದ ಕೋಷ್ಟಕ: ರುಪಾಯಿ, ಆಣೆ, ಅರೆ ಆಣೆ , ಮತ್ತು ಪೈಸೆ.
   - ತೂಕದ ಕೋಷ್ಟಕ: ಪನ್ಸೇರಿ, ಸೇರು, ಚಟಾಕು, ತೊಲ ಅಥವಾ ಅದಕ್ಕೆ ಸಮನಾದ ಸ್ಥಳೀಯ ತೂಕ.

- ಉದ್ದದ ಕೋಷ್ಟಕ: ಗಜ, ಅಡಿ, ಇಂಚು, ಮೊಣಕೈ (hath(ಹಾತ್)), ಗೂಂದಿ, ಲಡಿ, ಕಲ್ಲಿ (kalli) ಇತ್ಯಾದಿ.

9. ಚೌಕ, ಆಯತ, ತ್ರಿಕೋನ ಮತ್ತು ಗೋಳಾಕಾರದಂತ ಸಾಮಾನ್ಯ ಜ್ಯಾಮಿತಿಯ ಆಕಾರಗಳನ್ನು ಗುರುತಿಸುವುದು.

## ತರಗತಿ

## III

1. ಏಳು ಅಂಕೆಗಳ ತನಕ ಸಂಖ್ಯೆ ಮತ್ತು ಸಂಕೇತಗಳು.
2. ಕೂಡುವುದು ಮತ್ತು ಕಳೆಯುವುದರ ಮುಂದುವರಿಕೆ. ಪ್ರತಿನಿತ್ಯದ ಬದುಕಿನಲ್ಲಿ ಕೂಡು ಕಳೆಯುವ ಪ್ರಕ್ರಿಯೆ ಮತ್ತು ಸಮಸ್ಯೆಗಳ ಅಭ್ಯಾಸ.
3. ಗುಣಿತದಲ್ಲಿ 16 x 16 ರ ತನಕ ಅಭ್ಯಾಸ.
4. ಸ್ವಲ್ಪ ಕ್ಲಿಷ್ಟವಾದ ಗುಣಾಕಾರ. ಗುಣಕ ಏಳು ಅಂಕೆಗಳನ್ನು ಮೀರಬಾರದು.
5. ಕ್ಲಿಷ್ಟವಾದ ಭಾಗಾಕಾರ. ಭಾಜಕ ಮೂರು ಸಂಖ್ಯೆಗಳನ್ನು ಮೀರಬಾರದು.
6. ಹಣ, ಉದ್ದ ಮತ್ತು ತೂಕವನ್ನು ಅಳೆಯುವುದರ ಸರಳೀಕರಣ (ಏರುವಿಕೆ ಮತ್ತು ಇಳಿಯುವಿಕೆ):

   (a) ರುಪಾಯಿ, ಆಣೆ, ಅರೆಯಾಣೆ , ಪೈಸೆ.
   (b) ಗಜ, ಅಡಿ, ಇಂಚು.
   (c) ಸೇರು, ಚಟಾಕು, ತೊಲ.

7. ಮಿಶ್ರ ಸಂಕಲನ ಮತ್ತು ವ್ಯವಕಲನದಲ್ಲಿ ಸರಳವಾದ ಸಮಸ್ಯೆಗಳು.
8. ಭಾರತೀಯ ಪದ್ಧತಿ: ರೂ/ಆಣೆ/ಪೈಸೆ. ಮತ್ತು ಮಣ, ಸೇರು, ಚಟಾಕು.
9. ಭಿನ್ನರಾಶಿಗಳು, 1/4, 1/2, 3/4.
10. ಯಾವುದಾದರೂ ಸೂಕ್ತವಾದ ವಸ್ತುವನ್ನು ಆರಿಸಿಕೊಂಡು 1/4, 1/2, 3/4 ಭಿನ್ನರಾಶಿಗಳ ಕೋಷ್ಟಕವನ್ನು ಅನ್ವಯಿಸಿ 20 ರ ತನಕ ಕಲಿಸುವುದು.
11. ಲಘು, ಲಂಬ ಮತ್ತು ವಿಶಾಲ ಕೋನಗಳನ್ನು ಗುರುತಿಸುವುದು.
12. ಸಿಲಿಂಡರ್, ಶಂಕು, ಗೋಳ ಮತ್ತು ಕ್ಯೂಬ್ ನಂತಹ ಘನಾಕೃತಿಗಳನ್ನು ಗುರುತಿಸುವುದು.
13. ತೂಕ, ಉದ್ದ, ಪರಿಮಾಣ ಮತ್ತು ಕಾಲ - ಇವುಗಳ ಕೋಷ್ಟಕಗಳನ್ನು ರಚಿಸುವುದು:

   - ಸೇರು, ಪನ್ಸೇರಿ, ಮಣ, ಖಂಡಿ.
   - ಗಜ, ಪೋಲು (ಐದೂವರೆ ಗಜಕ್ಕೆ ಸಮ), ಫರ್ಲಾಂಗು, ಮೈಲಿ.
   - ಪರಿಮಾಣದ ಸ್ಥಳೀಯ ಅಳತೆಗಳು.
   - ಕ್ಷಣ, ನಿಮಿಷ, ಗಂಟೆ, ದಿನ, ವಾರ, ತಿಂಗಳು, ವರ್ಷ.

## ತರಗತಿ

## IV

1. ಸಂಖ್ಯೆ ಮತ್ತು ಸಂಕೇತ - ಪೂರ್ಣಗೊಳಿಸುವುದು.
2. ನಾಲ್ಕು ಸರಳ ನಿಯಮಗಳು - ಪೂರ್ಣಗೊಳಿಸುವುದು.
3. ಮಿಶ್ರ ಸಂಕಲನ ಮತ್ತು ವ್ಯವಕಲನ.
4. ಮಿಶ್ರ ಗುಣಾಕಾರ ಮತ್ತು ಭಾಗಾಕಾರ.
5. ಭಿನ್ನ ರೇಖೆ: ಕಾಲಾಂಶ ಪದ್ಧತಿಯಲ್ಲಿ ರುಪಾಯಿ, ಆಣೆ, ಪೈಸೆ ಮತ್ತು ಮುಡಿ, ಸೇರು, ಚಟಾಕುಗಳನ್ನು ಕೂಡಿಸುವ, ಕಳೆಯುವ, ಗುಣಿಸುವ ಮತ್ತು ಭಾಗಿಸುವ ರೀತಿ.

   (ವಿಶೇಷ ಸೂಚನೆ: ಪೂರ್ಣಾಂಕದಿಂದ ಭಾಗಿಸಬೇಕು, ಭಿನ್ನರಾಶಿಯಿಂದಲ್ಲ).

6. ಸಂಖ್ಯೆ 10, 12, 14, 16, 20 ರ ಸರಳ ಭಿನ್ನರಾಶಿಗಳು.
7. ಮೇಲಿನ ಸಂಖ್ಯೆಗಳ ಲಘುತಮ ಸಾಮಾನ್ಯ ಅಪವರ್ತ್ಯ.
8. ಮೇಲೆ ಹೇಳಿರುವ ಭಿನ್ನರಾಶಿಗಳ ಸಂಕಲನ ಮತ್ತು ವ್ಯವಕಲನ.
9. ಬ್ರಿಟಿಷ್ ಮತ್ತು ಭಾರತೀಯ ತೂಕದ ಅಳತೆಗಳ ಹೋಲಿಕೆ: ಪೌಂಡು, ಸೇರು, ಟನ್ನು, ಖಂಡಿ.
10. ಮೂರು ಮತ್ತು IV ತರಗತಿಗಳಲ್ಲಿ ಕಲಿತ ಅಳತೆಯ ಕೋಷ್ಟಕಗಳಿಗೆ ಸಂಬಂಧಪಟ್ಟಂತೆ 'ಗುರು' (ಲೆಕ್ಕಾಚಾರದ ಸೂತ್ರಗಳು) ಅಭ್ಯಾಸ.
11. ಲೆಕ್ಕ ಇಡುವುದು: ಪ್ರತಿಯೊಂದು ಕರಕೌಶಲ್ಯಕ್ಕೆ ಸಂಬಂಧಪಟ್ಟಂತೆ ದಾಸ್ತಾನಿನ ಲೆಕ್ಕ ಇಡುವುದು.
12. ಚದರದ ಅಳತೆ, ಚೌಕ ಮತ್ತು ಆಯತಗಳ ವಿಸ್ತೀರ್ಣವನ್ನು ಕಂಡು ಹಿಡಿಯುವುದು. ಇದಕ್ಕೆ ಸಂಬಂಧಪಟ್ಟಂತೆ ವಿದ್ಯಾರ್ಥಿಗಳು ಈ ಕೆಳಗಿನ ಅಂಶಗಳನ್ನು ಅಭ್ಯಾಸ ಮಾಡಬೇಕು:

    (a) ಯಾವುದೇ ಗೆರೆಗೆ ಲಂಬ ಗೆರೆಯನ್ನು ಹೇಗೆ ಎಳೆಯುವುದು.
    (b) ನೇರ ಗೆರೆಗೆ ಸಮನಾಂತರ ಗೆರೆಯನ್ನು ಹೇಗೆ ಎಳೆಯುವುದು.

## ತರಗತಿ

## V

1. ನಾಲ್ಕು ಮೂಲಭೂತ ಸರಳ ಮತ್ತು ಮಿಶ್ರ ನಿಯಮಗಳ ಪುನರಾವರ್ತನೆ.
2. ಲಘುತಮ ಸಾಮಾನ್ಯ ಅಪವರ್ತ್ಯ ಮತ್ತು ಗರಿಷ್ಟ ಸಾಮಾನ್ಯ ಅಪವರ್ತನ.
3. ಸಾಮಾನ್ಯ ಭಿನ್ನರಾಶಿಗಳನ್ನು ಪೂರ್ಣಗೊಳಿಸುವುದು (ಸಂಕೀರ್ಣ ಭಿನ್ನರಾಶಿಗಳು ಬೇಡ).

4. ಸಾಮಾನ್ಯ ಮತ್ತು ಮಿಶ್ರ ಭಿನ್ನರಾಶಿಗಳ ಅಭ್ಯಾಸ.
5. ಏಕಮಾನ ಪದ್ಧತಿ.

**ಲೆಕ್ಕ ಇಡುವುದು.**

1. ಆಯವ್ಯಯವನ್ನು ಅಂದಾಜಿಸುವುದು (ಬಜೆಟ್). ಉದಾಹರಣೆಗೆ ಮನೆ, ಹೊಲ ಮತ್ತು ಹಬ್ಬಗಳಿಗೆ ಸಂಬಂಧಪಟ್ಟಂತೆ.
2. ದಾಸ್ತಾನಿನ ಲೆಕ್ಕ, ದಾಖಲೆಗಳನ್ನು ಜೋಪಾನವಾಗಿ ಇಡುವುದು. (ವ್ಯಕ್ತಿಗತ ಮತ್ತು ತರಗತಿಗೆ).
3. ನಗದು-ಪುಸ್ತಕ ಮತ್ತು ಖಾತಾ ಪುಸ್ತಕ (ಕರಕೌಶಲ್ಯ, ಶಾಲೆ ಮತ್ತು ಮನೆಗೆ ಸಂಬಂಧಪಟ್ಟಂತೆ ಸರಕುಗಳ ನಗದು ವ್ಯವಹಾರ ಮತ್ತು ಹಣದ ಲೆಕ್ಕವನ್ನು ಇಡುವುದು).
4. ತಿಂಗಳ ಲೆಕ್ಕದ ದಾಖಲೆಗಳು (ರಶೀದಿಗಳು ಮತ್ತು ರವಾನೆ).
5. ಲಾಭ ಮತ್ತು ನಷ್ಟದ ಲೆಕ್ಕ. ವರ್ಷದ ಕೊನೆಯಲ್ಲಿ ದಾಸ್ತಾನೆಲ್ಲಾ ಖಾಲಿಯಾಗಿರಬೇಕು.

**ಅಭ್ಯಾಸೀಯ ಜ್ಯಾಮಿತಿ.**

1. ವಿಸ್ತೀರ್ಣವನ್ನು ಕಂಡು ಹಿಡಿಯುವುದು: ತ್ರಿಕೋನ, ಸಮನಾಂತರ ಚತುರ್ಭುಜ.
2. ವೃತ್ತ, ಸುತ್ತಳತೆಗೂ ವ್ಯಾಸಕ್ಕೂ ನಡುವಿನ ಅನುಪಾತ, ಮತ್ತು ವೃತ್ತದ ವಿಸ್ತೀರ್ಣ.
3. ಕ್ಷೇತ್ರ ಕೆಲಸ: ವಿಸ್ತೀರ್ಣವನ್ನು ನಿರ್ದಿಷ್ಟ ಅಳತೆಗೆ ಇಳಿಸುವುದು. ಕುಂಟೆ ಮತ್ತು ಎಕರೆಗಳ ನಡುವಿನ ಹೋಲಿಕೆ.

   ಇದಕ್ಕೆ ಸಂಬಂಧಿಸಿದಂತೆ ವಿದ್ಯಾರ್ಥಿ ಈ ಕೆಳಗಿನವುಗಳ ರಚನೆಗಳನ್ನು ಕಲಿಯುತ್ತಾರೆ:

   (a) ಒಂದು ನಿರ್ದಿಷ್ಟ ಕೋನಕ್ಕೆ ಸಮನಾದ ಕೋನವನ್ನು ರಚಿಸುವುದು.
   (b) ನಿರ್ದಿಷ್ಟ ತ್ರಿಕೋನಕ್ಕೆ ಸಮನಾದ ತ್ರಿಕೋನವನ್ನು, ಆಯತ ಮತ್ತು ಸಮನಾಂತರ ಚತುರ್ಭುಜಗಳಿಗೆ ಆಯಾ ಆಕಾರಗಳನ್ನು ರಚಿಸುವುದು.
   (c) ವೃತ್ತದ ಅಥವಾ ವೃತ್ತಚಾಪದ ಕೇಂದ್ರಬಿಂದುವನ್ನು ಕಂಡು ಹಿಡಿಯುವುದು.

# ತರಗತಿ

**VI**

1. ದಶಾಂಶ ಭಿನ್ನರಾಶಿಗಳನ್ನು ಓದುವುದು ಮತ್ತು ಬರೆಯುವುದು.
2. ದಶಾಂಶ ಭಿನ್ನರಾಶಿಗಳ ಸಂಕಲನ, ವ್ಯವಕಲನ, ಗುಣಾಕಾರ ಮತ್ತು ಭಾಗಾಕಾರ.
3. ಅಂದಾಜು ಎಂಬ ಪರಿಕಲ್ಪನೆ.
4. ಶೇಕಡಾ.
5. ಸರಳ ಬಡ್ಡಿ.
6. ಲಾಭ ಮತ್ತು ನಷ್ಟ.

## ಲೆಕ್ಕ ಇಡುವುದು.

1. ಐದನೇ ತರಗತಿಯಲ್ಲಿ ಕಲಿತದ್ದರ ಮುಂದುವರಿಕೆ.
2. ಸಾಲ ಮತ್ತು ಹವಾಲಾಗೆ ಸಂಬಂಧಪಟ್ಟ ವ್ಯವಹಾರ.
3. ಪರೀಕ್ಷಾರ್ಥ ತುಲನೆ (Trial Balance) (ಎರಡು ಸಲ ಲೆಕ್ಕ ಬರೆಯುವ ಪದ್ಧತಿಯಲ್ಲಿ ಹೆಚ್ಚು ಕಡಮೆಗಳನ್ನು ಕಂಡು ಹಿಡಿಯಲು ಆಯವ್ಯಯಗಳ ತನಿಖೆ ಮಾಡುವ ವಿಧಾನ).

## ಅಭ್ಯಾಸೀಯ ಜ್ಯಾಮಿತಿ.

1. ಐದನೇ ಹಂತದಲ್ಲಿ ಕಲಿತ ವಿಸ್ತೀರ್ಣವನ್ನು ಲೆಕ್ಕ ಹಾಕುವುದನ್ನು ಮುಂದುವರೆಸುವುದು. ಪಟವಾರಿ ಜಮೀನು ಅಳತೆಯ ಪದ್ಧತಿಯನ್ನು ಆಧರಿಸಿ ಕ್ಷೇತ್ರ ಕೆಲಸವನ್ನು ಮಾಡುವುದು ಇತ್ಯಾದಿ.
2. ಘನ(Cube(ಕ್ಯೂಬ್)), ಘನಾಭ(cuboid(ಕ್ಯೂಬಾಯಿಡ್), ಮತ್ತು ಉರುಳೆ(cylinder (ಸಿಲಿಂಡರು)ಗಳ ಪರಿಮಾಣವನ್ನು ಕಂಡು ಹಿಡಿಯುವುದು.

## ವಿಶೇಷ ಸೂಚನೆ

ಈ ಮೇಲಿನ ಚಟುವಟಿಕೆಗಳನ್ನು ಗೋಡೆ ಮಾಡುವ, ಬಾವಿಯನ್ನು ಅಗೆಯುವ ಇತ್ಯಾದಿ ಭೂಮಿ ಕೆಲಸಗಳಿಗೆ ಸಂಬಂಧಪಟ್ಟಂತೆ ಕಲಿಸುವುದು.

## ತರಗತಿ

## VII

1. ಈ ಮೊದಲು ಕಲಿತಿರುವುದರ ಪುನರಾವರ್ತನೆ ಮತ್ತು ಮುಂದುವರಿಕೆ.
2. ಅನುಪಾತ ಮತ್ತು ಪ್ರಮಾಣ - ಮೂರರ ನಿಯಮ.
3. ಕಾಲ, ಕೆಲಸ, ಮತ್ತು ವೇಗ.
4. ವಿಸ್ತೀರ್ಣ, ಪರಿಮಾಣ, ಬಡ್ಡಿ ಇತ್ಯಾದಿಗಳನ್ನು ಕಂಡು ಹಿಡಿಯಲು ನಿಯಮಗಳು ಮತ್ತು ಗುರುಗಳ ಸರಳ ಸಮೀಕರಣಗಳನ್ನು ಬಳಸುವುದು.
5. ರೇಖಾನಕ್ಷೆಗಳು (ಗ್ರಾಫ್ಸ್).
6. ವರ್ಗಮೂಲ.

### ಲೆಕ್ಕ ಇಡುವುದು.

1. ವ್ಯವಹಾರದ ಲೆಕ್ಕ.
2. ಲಾಭ ಮತ್ತು ನಷ್ಟದ ಲೆಕ್ಕ.
3. ಆಯವ್ಯಯ ಪಟ್ಟಿ.

### ಅಭ್ಯಾಸೀಯ ಜ್ಯಾಮಿತಿ.

1. ಈ ಮೊದಲು ಕಲಿತಿರುವುದರ ಪುನರಾವರ್ತನೆ.
2. ವಿಸ್ತೀರ್ಣ ಮತ್ತು ಪರಿಮಾಣಗಳನ್ನು ಕಂಡು ಹಿಡಿಯಲು ಸೂತ್ರಗಳು.
3. ವಿಸ್ತೀರ್ಣಗಳನ್ನು ಅಳತೆಗೆ ತಕ್ಕಂತೆ ಇಳಿಸುವುದು.

## ಸಾಮಾಜಿಕ ಅಧ್ಯಯನ

## ತರಗತಿ

## I

### I. ಆದಿಮಾನವನ ಕಥೆ.

ಹೇಗೆ ಮಾನವ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದ ಮತ್ತು ನಾಗರಿಕತೆಯ ಮೂಲತತ್ವಗಳನ್ನು ಅಭಿವೃದ್ಧಿಪಡಿಸಿದ:

(a) ವಾಸ - ಗುಹೆ, ಮರ, ಕೊಳದ ಬಳಿಯ ವಾಸ ಇತ್ಯಾದಿ.
(b) ಬಟ್ಟೆ ಅಥವಾ ನೈಸರ್ಗಿಕ ರಕ್ಷಣೆ - ಎಲೆ, ತೊಗಟೆ, ಚರ್ಮ ಇತ್ಯಾದಿಗಳು ಕ್ರಮೇಣ ಉಣ್ಣೆ, ಹತ್ತಿ ಮತ್ತು ರೇಶ್ಮೆಗಳಿಗೆ ಸಾಗಿದ ಹಾದಿ.

(c) ಜೀವನೋಪಾಯ - ಬೇಟೆ, ಹಳ್ಳಿಗಾಡಿನ ಬದುಕು, ಮತ್ತು ಸರಳ ವ್ಯವಸಾಯ.
(d) ಆಯುಧಗಳು ಮತ್ತು ಉಪಕರಣಗಳು - ಮರ, ಕಲ್ಲು, ಕಂಚು ಮತ್ತು ಕಬ್ಬಿಣ.
(e) ಸ್ವ-ಅಭಿವ್ಯಕ್ತಿ - ಮಾತು, ಪ್ರಾಚೀನ ಬರವಣಿಗೆ ಮತ್ತು ಚಿತ್ರಕಲೆ.
(f) ಸಹಾಯಕರು ಮತ್ತು ಸಂಗಾತಿಗಳು - ಕುದುರೆ, ಹಸು, ನಾಯಿ ಇತ್ಯಾದಿ.

**ವಿಶೇಷ ಸೂಚನೆ**

ಆದಿಮಾನವನ ಬದುಕಿನ ಈ ಆಖ್ಯಾನವನ್ನು ಮಕ್ಕಳ ಕಲ್ಪನೆಗೆ ಸ್ಪೂರ್ತಿ ತುಂಬುವಂತೆ ಕಥೆ ಮತ್ತು ಚಟುವಟಿಕೆಗಳ ಮೂಲಕ ಕಟ್ಟಿಕೊಡುವುದು.

## II. ಪ್ರಾಚೀನ ಕಾಲದಲ್ಲಿ ಮನುಷ್ಯನ ಬದುಕು.

ಪ್ರಾಚೀನ ಈಜಿಪ್ಟ್, ಚೈನಾ, ಮತ್ತು ಭಾರತದಲ್ಲಿನ ಬದುಕನ್ನು ಈ ಕೆಳಗಿನ ಕಥೆಗಳ ಉದಾಹರಣೆಗಳ ಮೂಲಕ ನಿರೂಪಿಸುವುದು.

(a) ಸಾಮಾನ್ಯ ಗುಲಾಮ ಈಜಿಪ್ಟಿನ ಪಿರಮಿಡ್ಡನ್ನು ಕಟ್ಟಿರುವುದರ ಕಥೆ.
(b) ಮೊದಲ ಐದು ಚೀನೀಯ ಚಕ್ರವರ್ತಿಗಳ ಕಥೆ.
(c) ಮೊಹೆಂಜದಾರೊನಲ್ಲಿನ ಹುಡುಗನೊಬ್ಬನ ಕಥೆ.
(d) ಶುನಃ ಶೇಪ (ವೇದೀಯ ಕಾಲ) ನ ಕಥೆ.

## III. ದೂರದ ಪ್ರದೇಶಗಳಲ್ಲಿ ಮನುಷ್ಯನ ಬದುಕು.

ಅರಬ್ ಬೆಡುವಿನ್, ಎಸ್ಕಿಮೊ, ಆಫ್ರಿಕನ್ ಪಿಗ್ಮಿ, ರೆಡ್ ಇಂಡಿಯನ್.

**ವಿಶೇಷ ಸೂಚನೆ**

ಇದಕ್ಕೆ ಸಂಬಂಧಪಟ್ಟ ಅರಿವನ್ನು ಮಾತೃಭಾಷೆಯನ್ನು ಕಲಿಯಲು ನಿಗದಿಯಾದ ಅವಧಿಯಲ್ಲಿ ಮೌಖಿಕವಾಗಿ ಕಥೆಗಳ ಮತ್ತು ನಾಟಕಗಳ ಮೂಲಕ ನೀಡಬಹುದು.

## IV. ಪೌರಬದುಕಿಗೆ ಅವಶ್ಯಕವಾದ ತರಬೇತಿ.

### 1. ಮಗುವಿನ ಶಾಲಾ ಬದುಕು.

ಈ ಕೆಳಗಿನ ಧೋರಣೆಗಳು ಮತ್ತು ಅಭ್ಯಾಸಗಳನ್ನು ಬೆಳೆಸುವ ಗುರಿಯನ್ನು ಹೊಂದಿರುವ ಅಭ್ಯಾಸೀಯ ತರಬೇತಿಯ ಮೂಲಕ ಮಗುವಿಗೆ ಪೌರಬದುಕಿನ ಬಗ್ಗೆ ತರಬೇತಿಯನ್ನು ನೀಡುವುದು:

**(a) ಶುಚಿತ್ವ ಮತ್ತು ನೈರ್ಮಲ್ಯ.**

i. ವೈಯಕ್ತಿಕ ಶುಚಿತ್ವ (ಸಾಮಾನ್ಯ ವಿಜ್ಞಾನದಲ್ಲಿನ ಪಠ್ಯಕ್ರಮವನ್ನು ಗಮನಿಸಿ).
ii. ಬಟ್ಟೆಗಳ ಸ್ವಚ್ಛತೆ.
iii. ಶೌಚಾಲಯ ಮತ್ತು ಮೂತ್ರಾಲಯಗಳ ಸರಿಯಾದ ಬಳಕೆ.
iv. ಕಸದ ತೊಟ್ಟಿ ಮತ್ತು ರದ್ದಿ ಕಾಗದ ಬುಟ್ಟಿಗಳ ಸರಿಯಾದ ಬಳಕೆ.
v. ತರಗತಿಯನ್ನು ಮತ್ತು ಶಾಲೆಯ ಕಪಾಟುಗಳನ್ನು ಶುಚಿಯಾಗಿಡುವುದು.
vi. ಶಾಲೆಯ ಕುಡಿಯುವ ನೀರಿನ ರಕ್ಷಣೆ ಮತ್ತು ಸರಿಯಾದ ಬಳಕೆ.

**(b) ಸಾಮಾಜಿಕ ಜವಾಬ್ದಾರಿಗಳು.**

i) ಶಿಕ್ಷಕರ ಮತ್ತು ಸಹ ವಿದ್ಯಾರ್ಥಿಗಳ ಜೊತೆ ಗೌರವಪೂರ್ವಕವಾಗಿ ವರ್ತಿಸುವುದು.
ii) ಸೌಜನ್ಯಯುತ ಭಾಷೆಯ ಬಳಕೆ.
iii) ಸೌಹಾರ್ದದಿಂದ ಪ್ರಶ್ನೆಗಳನ್ನು ಕೇಳುವುದು ಮತ್ತು ಉತ್ತರಿಸುವುದು.
iv) ಮಾತನಾಡಲು ತನ್ನ ಸರಿದಿಗೆ ಕಾಯುವುದು.
v) ಸರತಿಯ ಸಾಲಿನ ಪದ್ಧತಿಯನ್ನು ಪಾಲಿಸುವುದು.

**(c) ಕರಕೌಶಲ್ಯ.**

i. ಕರಕೌಶಲ್ಯದ ಸಾಮಗ್ರಿಗಳನ್ನು ಮತ್ತು ಉಪಕರಣಗಳನ್ನು ಸರಿಯಾಗಿ ಬಳಸುವುದು.
ii. ಅವನ್ನು ಸಹ ವಿದ್ಯಾರ್ಥಿಗಳೊಂದಿಗೆ ಹಂಚಿಕೊಳ್ಳುವುದು.
iii. ಗುಂಪಿನಲ್ಲಿ ಕೆಲಸ ಮಾಡುವುದು.
iv. ತನ್ನ ಸರದಿಗಾಗಿ ಕಾಯುವುದು.
v. ಕೆಲಸ ಮುಗಿಸಿದ ನಂತರ ಸಾಮಗ್ರಿ ಮತ್ತು ಉಪಕರಣಗಳನ್ನು ತೆಗೆದಿಟ್ಟು, ತರಗತಿಯನ್ನು ಅಚ್ಚುಕಟ್ಟಾಗಿ ಇರಿಸುವುದು.

**(d) ಆಟೋಟ.**

i. ನ್ಯಾಯಬದ್ಧತೆ (ಸುಳ್ಳು ಮೋಸಗಳನ್ನು ದೂರವಿಡಬೇಕು).
ii. ದುರ್ಬಲರನ್ನು ದುರುಪಯೋಗ ಮಾಡಿಕೊಳ್ಳಬಾರದು.
iii. ಗೆಲ್ಲುವುದು ಅಥವಾ ಲಾಭಪಡೆಯುವುದು ಮುಖ್ಯವಲ್ಲ. ಸತ್ಯ, ನ್ಯಾಯಗಳು ಮುಖ್ಯ.

(e) ಜವಾಬ್ದಾರಿಗಳನ್ನು ಪೂರೈಸುವುದು.

ಮೇಲೆ ಹೇಳಿದ ಅಭ್ಯಾಸೀಯ ತರಬೇತಿಯ ಜೊತೆಗೆ ಪ್ರತಿಯೊಬ್ಬ ವಿದ್ಯಾರ್ಥಿಯೂ ತನ್ನ ಶಾಲಾ ಬದುಕಿನಲ್ಲಿ ವ್ಯಕ್ತಿಗತವಾಗಿ ಅಥವಾ ಗುಂಪಿನ ಸದಸ್ಯಳಾ(ನಾ)ಗಿ ಯಾವುದಾದರೂ ಒಂದು ನಿರ್ದಿಷ್ಟÀ◌ೆಟ ಜವಾಬ್ದಾರಿಯನ್ನು ನಿಭಾಯಿಸುವುದು ಅಗತ್ಯ. ಏಳು ಮತ್ತು ಒಂಭತ್ತು ವರ್ಷಗಳ ನಡುವಿನ ಮಕ್ಕಳಿಗೆ ಈ ಕೆಳಗಿನ ಜವಾಬ್ದಾರಿಗಳನ್ನು ಸೂಚಿಸಲಾಗಿದೆ:

i. ತರಗತಿಯನ್ನು ಶುಚಿಯಾಗಿಡುವುದು.
ii. ಶಾಲಾ ಕಾಂಪೌಂಡನ್ನು ಶುಚಿಯಾಗಿಡುವುದು.
iii. ಕುಡಿಯುವ ನೀರಿನ ರಕ್ಷಣೆ.
iv. ಶಾಲೆಯ ವಸ್ತು ಸಂಗ್ರಹಾಲಯಕ್ಕೆ ಎಲೆ, ಹೂವು, ಕಲ್ಲು, ಗರಿ, ತೊಗಟೆ, ಮರ ಇತ್ಯಾದಿಗಳನ್ನು ಸಂಗ್ರಹಿಸುವುದು.
v. ಹಬ್ಬ ಇತ್ಯಾದಿಗಳಲ್ಲಿ ಶಾಲೆಯನ್ನು ಸಿಂಗರಿಸಲು ಸಹಾಯ ಮಾಡುವುದು.
vi. ಶಾಲೆಯಲ್ಲಿ ಮತ್ತು ಹಳ್ಳಿಯವರಿಗೆ ಒದಗಿಸುವ ಮನರಂಜನೆಯಲ್ಲಿ ಭಾಗವಹಿಸುವುದು.
vii. ಹೊಸ ವಿದ್ಯಾರ್ಥಿಗಳಿಗೆ ಸಹಾಯ ಮಾಡುವುದು.

## 2. ಮನೆಯಲ್ಲಿ ಮಗುವಿನ ಬದುಕು.

(a) ಮನೆ ಒಂದು ವ್ಯವಸ್ಥಿತ ಸಮುದಾಯದ ಕಿರುರೂಪವಾಗಿರುತ್ತದೆ. ಅದರಲ್ಲಿ ಪ್ರತಿಯೊಬ್ಬರು ನಿರ್ವಹಿಸುವ ಪಾತ್ರದ ಬಗ್ಗೆ ಅರಿವು ನೀಡುವುದು; ತಂದೆ, ತಾಯಿಯರ ಪಾತ್ರ; ಅಕ್ಕತಂಗಿ, ಅಣ್ಣತಮ್ಮಂದಿರ ಪಾತ್ರ ಮತ್ತು ದಾಯಾದಿಗಳ ಪಾತ್ರ; ಬೇರೆ ಬಂಧುಗಳ ಪಾತ್ರ; ಮನೆಕೆಲಸದವರ ಪಾತ್ರ ಇತ್ಯಾದಿ.
(b) ಕುಟುಂಬದಲ್ಲಿ ಮಗುವಿನ ಪಾತ್ರ, ಹಿರಿ ಕಿರಿಯರ ಬಗ್ಗೆ ನಿರ್ವಹಿಸಬೇಕಾದ ಹೊಣೆ.
(c) ಮನೆಯಲ್ಲಿ ತನಗೆ ವಹಿಸಿದ ನಿರ್ದಿಷ್ಟ ಕರ್ತವ್ಯಗಳನ್ನು ಪೂರೈಸುವುದು.

## V. ವ್ಯಾಯಾಮ.

(a) ವಿಶೇಷ ಉಪಕರಣಗಳು ಬೇಕಿಲ್ಲದ ಮೈದಾನದ ಮತ್ತು ಹಳ್ಳಿಯ ಸಾಮಾನ್ಯ ಆಟಗಳು.
(b) ಕಲ್ಪನಾತ್ಮಕ ಮತ್ತು ಅನುಕರಿಸಬಲ್ಲಂತ ಆಟಗಳು.
(c) ಲಯಬದ್ಧ ವ್ಯಾಯಾಮ.
(d) ಜಾನಪದ ನೃತ್ಯಗಳು.

## ತರಗತಿ

## II

1. ಆಧುನಿಕ ಕಾಲದಲ್ಲಿ ಪುರಾತನ ಬದುಕು.

ಉದಾಹರಣೆಗೆ ಆಫ್ರಿಕನ್ ಆದಿವಾಸಿಗಳು, ಆಸ್ಟ್ರೇಲಿಯಾದ ಪೊದೆಗಾಡಿನ ಜನ, ಸಿಲೋನಿನ ವೆಡ್ಡರು, ಭಾರತೀಯ ಆದಿವಾಸಿ ಬುಡಕಟ್ಟು ಜನಾಂಗಗಳು.

2. ಪುರಾತನ ಕಾಲದಲ್ಲಿ ಮನುಷ್ಯನ ಬದುಕು.

ಪುರಾತನ ಹೀಬ್ರೂ, ರೋಮನ್, (ಉಪನಿಷದ್ ಕಾಲದ) ಭಾರತ ನೆಲದ ಜನರ ಬದುಕಿನ ಆಖ್ಯಾನವನ್ನು ಕಥೆಗಳ ರೂಪದಲ್ಲಿ ಕೊಡಬೇಕು. ಉದಾಹರಣೆಗೆ,

- ಮೊಸೆಸ್‌ನ ಕಥೆ, ಏಬ್ರಹಾಮ್‌ನ ಕಥೆ.
- ಮಾರ್ಕಸ್ ಒರೆಲಿಯಸ್ (Marcus Aurelius) ಮತ್ತು ರೆಗ್ಯುಲಸ್ ರೋಮನ್ (Regulus the Roman) ನ ಕಥೆ.
- ನಚಿಕೇತಾ ಮತ್ತು ಗಾರ್ಗಿಯ ಕಥೆ.

3. ದೂರ ಪ್ರದೇಶಗಳಲ್ಲಿ ವಾಸಿಸುತ್ತಿರುವ ಮನುಷ್ಯನ ಬದುಕು.

- ಆಫ್ರಿದಿ ಹುಡುಗನೊಬ್ಬನ ಕಥೆ.
- ಸ್ವಿಸ್ ಹಳ್ಳಿಯಲ್ಲಿ ವಾಸಿಸುತ್ತಿರುವ ಹುಡುಗನೊಬ್ಬನ ಕಥೆ.
- ಪರ್ಶಿಯಾದ ಹುಡುಗನೊಬ್ಬನ ಕಥೆ.
- ಜಪಾನಿನ ಹುಡುಗನೊಬ್ಬನ ಕಥೆ.

### ವಿಶೇಷ ಸೂಚನೆ

1 ಮತ್ತು 2ರ ಶೀರ್ಷಿಕೆಯಡಿಯಲ್ಲಿ ಸೂಚಿಸಿರುವ ಹೆಚ್ಚಿನಂಶ ಚಟುವಟಿಕೆಗಳನ್ನು ಮಾತೃಭಾಷೆಯಲ್ಲಿ ಕಥೆಗಳ ಮತ್ತು ನಾಟಕಗಳ ರೂಪದಲ್ಲಿ ಹಾಗೂ ಓದುವ ವಿಷಯಗಳಲ್ಲಿ ಸೇರಿಸಲಾಗುವುದು.

### 4. ಪೌರಬದುಕಿಗೆ ತರಬೇತಿ.

ಆಹಾರ, ಬಟ್ಟೆಬರೆ, ಮನೆ, ವೃತ್ತಿಗಳು, ನೀರಿನ ಸರಬರಾಜು, ಹಳ್ಳಿಯ ಮಾರುಕಟ್ಟೆ, ಪ್ರಾರ್ಥನಾ ಸ್ಥಳಗಳು, ಮನರಂಜನೆ, ಜಾತ್ರೆ, ಹಬ್ಬ ಮುಂತಾದ ಅಂಶಗಳನ್ನೊಳಗೊಂಡ ಹಳ್ಳಿಯ ಸಾಮುದಾಯಿಕ ಬದುಕನ್ನು ನಿಕಟವಾಗಿ ಗಮನಿಸುವುದು.

## 5. ಮಾಡಿ-ಕಲಿ

ಪೌರಬದುಕಿಗೆ ತರಬೇತಿ ನೀಡುವಾಗ ಮಗುವಿನ ಬದುಕಿನ ಈ ಕೆಳಗಿನ ಅಂಶಗಳನ್ನು ಒಳಗೊಳ್ಳುವುದು:

(a) ಶಾಲೆಯಲ್ಲಿ
(b) ಮನೆಯಲ್ಲಿ

ಇವೆರಡನ್ನು ಸೂಚಿಯಾಗಿಟ್ಟುಕೊಂಡು ಒಂದನೇ ತರಗತಿಯ ಪಠ್ಯಕ್ರಮವನ್ನು ಮುಂದುವರಿಸುವುದು.

(c) ಮಗು ಮತ್ತು ಹಳ್ಳಿ

i. ಮನೆಯ ಸುತ್ತಮುತ್ತಲನ್ನು ಶುಚಿಯಾಗಿಡುವುದು.
ii. ಹಳ್ಳಿಯ ರಸ್ತೆಗಳನ್ನು ಶುಚಿಯಾಗಿಡುವುದು (ಸಾಧ್ಯವಾದರೆ ಮಕ್ಕಳು ಹಳ್ಳಿಯ ಹಲವಾರು ಕಡೆಗಳಲ್ಲಿ ಸರಳವಾದ ಕಸದ ಬುಟ್ಟಿಗಳನ್ನು ಇರಿಸಿ ತಮ್ಮ ಕುಟುಂಬದವರನ್ನು ಮತ್ತು ಸ್ನೇಹಿತರನ್ನು ಅವುಗಳನ್ನು ಬಳಸುವಂತೆ ಒತ್ತಾಯಿಸುವುದು).
iii. ಹಳ್ಳಿಯ ಬಾವಿ ಗಲೀಜಾಗದಂತೆ ನೋಡಿಕೊಳ್ಳುವುದು.
iv. ಶಾಲೆಯ ಮನರಂಜನಾ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಸಮುದಾಯಕ್ಕೆ ಉತ್ತಮ ಮನರಂಜನೆಯನ್ನು ಒದಗಿಸುವುದು.
v. ಪ್ರಾಣಿಪಕ್ಷಿಗಳಿಗೆ ದಯೆ ತೋರುವುದು.

## 6. ದೈಹಿಕ ತರಬೇತಿ

ಒಂದನೇ ತರಗತಿಯ ಪಠ್ಯಕ್ರಮದಲ್ಲಿ ಸೂಚಿಸಿದಂತೆ.

## ತರಗತಿ

## III

## 1. ಪ್ರಾಚೀನ ಕಾಲದಲ್ಲಿ ಮನುಷ್ಯನ ಬದುಕು.

ಪ್ರಾಚೀನ ಭಾರತ (ಬೌದ್ಧೀಯ ಕಾಲ), ಪ್ರಾಚೀನ ಪರ್ಶಿಯ, ಪ್ರಾಚೀನ ಗ್ರೀಸ್.

ಇವನ್ನು ಕಥೆÉಗಳ ರೂಪದಲ್ಲಿ ಕಲಿಸುವುದು. ಉದಾಹರಣೆಗೆ:

- ಬೌದ್ಧೀಯ ಭಾರತ - ಬುದ್ಧ, ಅಶೋಕ, ಮಹೇಂದ್ರ ಮತ್ತು ಸಂಘಮಿತ್ರರ ಕಥೆ; ಮಧ್ಯ ಏಶಿಯಾದಲ್ಲಿ ಅಥವಾ ಚೈನಾದಲ್ಲಿ ಬೌದ್ಧ ಪ್ರಚಾರ ಮಂಡಲಿಯ ಕಥೆ; ನಳಂದ ವಿಶ್ವವಿದ್ಯಾಲಯದಲ್ಲಿ ಓರ್ವ ವಿದ್ಯಾರ್ಥಿ ಮುಂತಾದ ಕಥೆಗಳು.
- ಪ್ರಾಚೀನ ಪರ್ಶಿಯ - ಕಮ್ಮಾರ ಕಾವಾ, ಥರ್ಮೊಪೊಲಿ (Thermopylae) ಯುದ್ಧ, ಮಹಾನ್ ಡೇರಿಯಸ್ (Darius) ನ ಆಸ್ಥಾನದಲ್ಲಿ ಭಾರತದ ವೈದ್ಯ ಮುಂತಾದ ಕಥೆಗಳು.
- ಪ್ರಾಚೀನ ಗ್ರೀಸ್ - ಗ್ರೀಕ್ ಗುಲಾಮ, ಸಾಕ್ರೆಟೀಸ್, ಒಲಂಪಿಕ್ ಪಂದ್ಯಗಳಲ್ಲಿ ಭಾಗವಹಿಸುತ್ತಿರುವ ಯುವಕ, ಮ್ಯಾರಥಾನ್ ಪಂದ್ಯದ ಫೈಡಿಪಿಡಿಸ್ (Pheiddlipides), ಅಲೆಕ್ಸಾಂಡರ್, ಮೆಗಸ್ತನೀಸ್ (Megasthenes), ಮುಂತಾದ ಕಥೆಗಳು.

## 2. ದೂರದ ಪ್ರದೇಶಗಳಲ್ಲಿ ಮನುಷ್ಯನ ಬದುಕು

ನ್ಯೂಯಾರ್ಕಿನ ಹುಡುಗ, ಚೈನಾದ ಹುಡುಗ, ರಷ್ಯಾದ ಕೊಲ್ಖೊಜ್ (Kolkhoz) ಅಥವಾ ಸಾಮುಹಿಕ ವ್ಯವಸಾಯ ಕ್ಷೇತ್ರದಲ್ಲಿನ ಹುಡುಗ, ಭಾರತದ ಚಹಾ ನೆಡುತೋಪುಗಳಲ್ಲಿ ಕೆಲಸ ಮಾಡುತ್ತಿರುವ ಹುಡುಗ, ಇತ್ಯಾದಿ ಕಥೆಗಳು.

## ವಿಶೇಷ ಸೂಚನೆ

1 ಮತ್ತು 20 ಶೀರ್ಷಿಕೆಯಡಿಯಲ್ಲಿ ಹೆಚ್ಚಿನಂಶ ಚಟುವಟಿಕೆಗಳನ್ನು ಮಾತೃಭಾಷೆಯಲ್ಲಿ ಕಥೆಗಳ ಮತ್ತು ನಾಟಕಗಳ ರೂಪದಲ್ಲಿ ಹಾಗೂ ಓದುವ ವಿಷಯಗಳಲ್ಲಿ ಸೇರಿಸಲಾಗುವುದು.

## 3. ಜಿಲ್ಲೆಯ ಅಧ್ಯಯನ

(ಸಾಧ್ಯವಾದರೆ ಮಕ್ಕಳನ್ನು ನಿರ್ದೇಶಿತ ಜಿಲ್ಲಾ ಪ್ರವಾಸಕ್ಕೆ ಕರೆದುಕೊಂಡು ಹೋಗುವುದು). ಈ ಕೆಳಗಿನ ಅಂಶಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು: ಪರಿಹಾರಗಳು, ಸಾಮಾನ್ಯ ಲಕ್ಷಣಗಳು, ಹವಾಗುಣ, ಬೆಳೆಗಳು, ಕೈಗಾರಿಕೆಗಳು, ಸ್ಥಳೀಯ ಐತಿಹಾಸಿಕ ಸ್ಮಾರಕಗಳು, ಸಂವಹನದ ರೀತಿಗಳು, ಕಾರ್ಯಾಗಾರಗಳು ಯಾವುವು ಮತ್ತು ಎಲ್ಲಿವೆ.

## ವಿಶೇಷ ಸೂಚನೆ

ಈ ಪ್ರವಾಸದ ಸಮಯದಲ್ಲಿ ಸಾಮಾನ್ಯ ಮತ್ತು ಮೂಲ ಅರಿವಿನ ಬಗ್ಗೆ ಗಮನ ಕೊಡಬೇಕು. ಇದನ್ನೇ ಮುಂದುವರೆಸಿ ನಾಲ್ಕನೇ ತರಗತಿಯಲ್ಲಿ ಜಿಲ್ಲೆಯ ಕೈಗಾರಿಕಾ ಸಮೀಕ್ಷೆ ಮಾಡುವಾಗ ಹೆಚ್ಚು ನಿಖರವಾದ ಅರಿವಿನ ಮೇಲೆ ಕೇಂದ್ರೀಕರಿಸಬೇಕು.

**ಮಾಡಿ-ಕಲಿ**

(a) ಜಿಲ್ಲೆಯ ಸ್ಥೂಲ ನಕಾಶೆಯನ್ನು ಸಿದ್ಧಪಡಿಸಿ ಅದರಲ್ಲಿ ಪ್ರಮುಖವಾದ ಅಂಶಗಳನ್ನು ಸೇರಿಸುವುದು.
(b) ಯೋಜನೆಗಳನ್ನು ಸಿದ್ಧಪಡಿಸುವುದು: ತರಗತಿಯ ಯೋಜನೆ, ಶಾಲಾ ಕಟ್ಟಡದ ಯೋಜನೆ ಮತ್ತು ಶಾಲೆಯ ಆವರಣದ ಯೋಜನೆ.

**4. ಭೂಗೋಳದ ಅಧ್ಯಯ£: ಭೂಮಿಯ ಆಕಾರ; ನೆಲ ಮತ್ತು ನೀರು ಪ್ರದೇಶಗಳು.**

**5. ಹಳ್ಳಿಯ ಸಮುದಾಯದ ಬಗೆಗಿನ ಅಧ್ಯಯನ.**

(a) ಗ್ರಾಮ ಮತ್ತು ಅದರ ಆಡಳಿತ; ಗ್ರಾಮ ಅಧಿಕಾರಿಗಳು; ಗ್ರಾಮ ಪಂಚಾಯತ್ ಮತ್ತು ಅವು ನಿರ್ವಹಿಸುವ ಕಾರ್ಯಗಳು.
(b) ಗ್ರಾಮೀಣ ಸೌಲಭ್ಯಗಳು - ಮಾರುಕಟ್ಟೆ, ಆರೋಗ್ಯ ಕೇಂದ್ರ, ಅಂಚೆ ಕಛೇರಿ, ದೊಡ್ಡಿ, ರಸ್ತೆಗಳು, ಆಟದ ಮೈದಾನ, ಹತ್ತಿರದ ರೈಲ್ವೇ ನಿಲ್ದಾಣ.

**6. ಮಾಡಿ-ಕಲಿ**

(a) ಗ್ರಾಮ ಪಂಚಾಯತಿ ಮಾದರಿಯಲ್ಲೇ ಶಾಲಾ ಪಂಚಾಯತನ್ನು ರೂಪಿಸುವುದು.
(b) 9 ಮತ್ತು 12 ವರ್ಷ ವಯಸ್ಸಿನ ಹೆಣ್ಣು ಮತ್ತು ಗಂಡುಮಕ್ಕಳನ್ನು ಈ ಕೆಳಗಿನ ಪೌರ ಚಟುವಟಿಕೆಗಳನ್ನು ನಡೆಸಲು ಸಮಾಜ ಸೇವೆ ಗುಂಪುಗಳಾಗಿ ಆಯೋಜಿಸುವುದು:

i. ಬಾವಿ ಮತ್ತು ರಸ್ತೆಗಳ ರಕ್ಷಣೆ ಮತ್ತು ಸ್ವಚ್ಛತೆ.
ii. ಪ್ರಾಣಿಗಳು ಬೆಳೆಗಳನ್ನು ನಾಶ ಮಾಡುವುದನ್ನು ತಡೆಯುವುದು.
iii. 9 ಕ್ಕಿಂತ ಕಡಮೆ ವಯಸ್ಸಿನ ಮಕ್ಕಳಿಗೆ ಆಟೋಟಗಳನ್ನು ಏರ್ಪಡಿಸುವುದು.
iv. ಹಳ್ಳಿಯ ಮಕ್ಕಳಿಗೆ ಮತ್ತು ವಯಸ್ಕರಿಗೆ ಮನರಂಜನೆಯನ್ನು ಏರ್ಪಡಿಸುವುದು.
v. ರಾಷ್ಟ್ರೀಯ ಮತ್ತು ಋತುಮಾನದ ಹಬ್ಬಗಳಲ್ಲಿ ಭಾಗವಹಿಸುವುದು.
vi. ಸನ್ನೆ, ಭಿತ್ತಿಚಿತ್ರ, ಇತ್ಯಾದಿಗಳನ್ನು ರಚಿಸುವುದು.
vii. ಹಳ್ಳಿಯ ಜಾತ್ರೆ, ಹಬ್ಬ ಇತ್ಯಾದಿಗಳಲ್ಲಿ ಸ್ವ-ಇಚ್ಛೆಯಿಂದ ಕೆಲಸ ಮಾಡುವುದು.

**ತರಗತಿ**

**IV**

**I. ಪ್ರಾಚೀನ ಕಾಲದ ಕಥೆ.**

ಪ್ರಾಚೀನ ಭಾರತ, ಬೌದ್ಧೀಯ ಚೈನಾ, ವಿಶಾಲ ಭಾರತ, ಮೊದಲ ಕ್ರಿಶ್ಚಿಯನ್ನರು.

**(a) ಪ್ರಾಚೀನ ಭಾರತ:**

ಸಮುದ್ರಗುಪ್ತ, ಕಾಳಿದಾಸ, ಆರ್ಯಭಟ್ಟ, ಭಾರತದೊಂದಿಗೆ ವ್ಯಾಪಾರ ಮಾಡುತ್ತಿದ್ದ ಅರಬ್ ವರ್ತಕ, ತನ್ನ ಸರಕನ್ನು ಹೊತ್ತು ದೂರದ ನಾಡುಗಳಲ್ಲಿ ವ್ಯಾಪಾರ ಮಾಡುತ್ತಿದ್ದ ಭಾರತೀಯ ವರ್ತಕ, ಹರ್ಷವರ್ಧನ, ಪೃಥ್ವಿರಾಜ, ಹಾರೂನ್-ಊರ್-ರಶೀದನ ಆಸ್ಥಾನದಲ್ಲಿದ್ದ ಭಾರತೀಯ ವೈದ್ಯ ಇವರುಗಳ ಕಥೆಗಳು.

**(b) ಬೌದ್ಧೀಯ ಚೈನಾ:**

ಚೀನೀಯ ಯಾತ್ರಿಕರು, ಫಾಹಿಯಾನ್ (Fahien) ಮತ್ತು ಹ್ಯೂಯೆನ್ ಟ್ಸಂಗ್ (Hiuen Tsang) ಅವರ ಕಥೆಗಳು.

**(c) ವಿಶಾಲ ಭಾರತ:**

ಭಾರತದ ವರ್ತಕ ಅಥವಾ ಕಲಾವಿದನೊಬ್ಬ ಜಾವಾ ಮತ್ತು ಸಿಯಾಮ್ ಪ್ರದೇಶಗಳಿಗೆ ಹೋಗಿ ತನ್ನ ಕೆಲಸಕ್ಕೆ ಅಲ್ಲೇ ನೆಲೆಸುವುದರ ಕಥೆ.

(d) ಏಸುಕ್ರಿಸ್ತನ ಮತ್ತು ಮೊದಲ ಕ್ರಿಶ್ಚಿಯನ್ನರ ಕಥೆ.

**II. ಮನುಷ್ಯನ ಭೌಗೋಳಿಕ ವಾತಾವರಣಗಳು:**

**1. ಜಿಲ್ಲೆಯ ಕೈಗಾರಿಕಾ ಸಮೀಕ್ಷೆ:-**

**ಮಾಡಿ-ಕಲಿ**

- ಜಿಲ್ಲೆಯಲ್ಲಿರುವ ಕೈಗಾರಿಕೆಗಳ ನಕ್ಷೆಯನ್ನು ತಯಾರಿಸುವುದು.
- ಸಹಕಾರದ ಪ್ರಯತ್ನದಲ್ಲಿ ಒಂದು "ಮಾರ್ಗದರ್ಶನ ಕೈಪಿಡಿ"ಯನ್ನು ಸಿದ್ಧಪಡಿಸುವುದು.

2. ಆ ಪ್ರಾಂತ್ಯದ ನೈಸರ್ಗಿಕ ಸರಹದ್ದುಗಳು, ಹವಾಮಾನ, ವ್ಯವಸಾಯ, ಕೈಗಾರಿಕೆಗಳು ಮತ್ತು ಸಂವಹನಗಳ ಮೂಲಕ ಭೌಗೋಳಿಕ ಅರಿವನ್ನು ಪಡೆದುಕೊಳ್ಳುವುದು.
3. ಜಗತ್ತಿನಲ್ಲಿ ಬೇಟೆಯಾಡುವುದು, ಮೀನುಗಾರಿಕೆ ಮತ್ತು ಕಾಡುಗಳಿಗೆ ಸಂಬಂಧಪಟ್ಟ ಜೀವನೋಪಾಯಗಳು ಎಲ್ಲೆಲ್ಲಿ ಇವೆ.

**ಮಾಡಿ-ಕಲಿ**

- ಆವೆಮಣ್ಣು ಅಥವಾ ಮಣ್ಣನ್ನು ಉಪಯೋಗಿಸಿಕೊಂಡು ಪರಸ್ಪರ ಸಹಕಾರದಲ್ಲಿ ಆ ಪ್ರಾಂತ್ಯದ ಛಾಯಾ ಭೂಪಟವನ್ನು ತಯಾರಿಸುವುದು.
- ನಕಾಶೆ, ಚಾರ್ಟು, ಯೋಜನೆ, ರೇಖಾಚಿತ್ರಗಳು ಇತ್ಯಾದಿಯ ತಯಾರಿಕೆ.

4. ಜಗತ್ತನ್ನು ಅನ್ವೇಷಿಸಿದವರ ಕಥೆಗಳು - ಮಾರ್ಕೊ ಪೋಲೊ, ವಾಸ್ಕೋಡ ಗಾಮ, ಕೊಲಂಬಸ್.
5. ಜಗತ್ತಿನ ಪ್ರಮುಖ ಸಮುದ್ರ ಮಾರ್ಗಗಳು: ಭಾರತದಿಂದ ದೂರದ ಪೂರ್ವಕ್ಕೆ, ಭಾರತದಿಂದ ಯುರೋಪಿಗೆ, ಭಾರತದಿಂದ ಆಸ್ಟ್ರೇಲಿಯಾಗೆ, ಭಾರತದಿಂದ ಅರೇಬಿಯಾ ಮತ್ತು ಆಫ್ರಿಕಾಗಳಿಗೆ ಹಾಗೂ ಯುರೋಪಿನಿಂದ ಅಮೆರಿಕಾಗೆ.
6. ನೂಲುವುದು ಯಾವ್ಯಾವ ದೇಶಗಳಲ್ಲಿ ಮೂಲ ಕರಕೌಶಲ್ಯವಾಗಿದೆಯೋ, ಅಲ್ಲೆಲ್ಲಾ ವಿವಿಧ ಕಾಲಗಳಲ್ಲಿ ವಿವಿಧ ರೀತಿಯ ಹತ್ತಿ ಹಿಂಜುವ ಮತ್ತು ಹಿಂಜಿ ಎಳೆಗಳನ್ನು ಬಿಡಿಸುವ ರೀತಿಗಳನ್ನು ಅರಿಯುವುದು.

## III. ಪೌರಬದುಕಿಗೆ ತರಬೇತಿ.

(a) ಈ ಕೆಳಗಿನ ಅಂಶಗಳನ್ನು ಉಲ್ಲೇಖಿಸಿ ಒಂದು ಯೋಜಿತ ಸಮುದಾಯವಾಗಿ ಪಟ್ಟಣದ ಅಧ್ಯಯನ:

(a) ಪಟ್ಟಣ ಮತ್ತು ಹಳ್ಳಿಯ ನಡುವಿನ ಸಂಬಂಧ - ಅವುಗಳ ನಡುವಿನ ಪರಸ್ಪರ ಅವಲಂಬನೆ - ಹಳ್ಳಿಯಿಂದ ಪಟ್ಟಣಕ್ಕೆ ವಲಸೆ.
(b) ಪಟ್ಟಣದ ಆಡಳಿತ - ಮುನಿಸಿಪಾಲಿಟಿ - ಪ್ರಜೆಗಳ ಹಕ್ಕು ಮತ್ತು ಕರ್ತವ್ಯಗಳು -ತೆರಿಗೆಗಳು, ಪೋಲೀಸ್, ನ್ಯಾಯಾಲಯಗಳು.
(c) ಸಾಮಾಜಿಕ ಸೇವೆಗಳು: ಆಸ್ಪತ್ರೆ, ಮಗು ಕಲ್ಯಾಣ ಕೇಂದ್ರ, ಗ್ರಂಥಾಲಯ ಮತ್ತು ಓದುವ ಕೊಠಡಿ, ಅಂಚೆ ಕಛೇರಿ, ನೀರು ಸರಬರಾಜು, ರಸ್ತೆ ದೀಪ, ಆಟದ ಮೈದಾನ, ಅಖಾಡಾ.

(d) ಪ್ರಾರ್ಥನಾ ಸ್ಥಳಗಳು: ಎಲ್ಲ ಸಮುದಾಯಗಳ ಪ್ರಾರ್ಥನಾ ಸ್ಥಳಗಳನ್ನು ಗೌರವಿಸುವುದು.
(e) ಮನೋರಂಜನೆ ಮತ್ತು ಮನರಂಜನೆ: ರಂಗಸ್ಥಳ, ಸಿನಿಮಾ.
(f) ಶಿಕ್ಷಣ ಕೇಂದ್ರಗಳು: ವಿಶ್ವವಿದ್ಯಾಲಯ, ಕಾಲೇಜು ಮತ್ತು ಶಾಲೆಗಳು, ಕೈಗಾರಿಕಾ ಶಾಲೆಗಳು.

**ಮಾಡಿ-ಕಲಿ**

ಸಾಧ್ಯವಾದರೆ ಹತ್ತಿರದ ಯಾವುದಾದರೂ ಪಟ್ಟಣಕ್ಕೆ ಮಾರ್ಗದರ್ಶನದಡಿ ಒಂದು ಪ್ರವಾಸ.

**2. ಪ್ರಸಕ್ತ ಘಟನಾವಳಿಗಳನ್ನು ಅರಿಯುವುದು:**

ಮಾತೃಭಾಷೆಯ ಕಲಿಕೆಯ ಜೊತೆಗೆ ಮತ್ತು ಭೂಗೋಳದ ನಕಾಶೆಗಳನ್ನು ಓದುವುದಕ್ಕೆ ಸಹಸಂಬಂಧಿತವಾಗಿ ಓದುವ ಗುಂಪುಗಳನ್ನು ಮಾಡಿಕೊಂಡು ದಿನನಿತ್ಯ ವಾರ್ತಾಪತ್ರಿಕೆಗಳನ್ನು ಓದುವುದರ ಮೂಲಕ ಅರಿಯುವುದು.

**3. ಮಾಡಿ-ಕಲಿ.**

(a) ಸ್ಥಳೀಯ ಸ್ವಯಂ-ಆಡಳಿತ ತತ್ವಗಳ ಆಧಾರದ ಮೇಲೆ ಶಾಲೆಯಲ್ಲಿ ಅಂತಹ ಘಟಕಗಳನ್ನು ರಚಿಸಿಕೊಳ್ಳುವುದು.
(b) ಸಮಾಜ ಸೇವಾ ಗುಂಪುಗಳನ್ನು ಆಯೋಜಿಸಿ III ತರಗತಿಯಲ್ಲಿ ಸೂಚಿಸಿದ ಪಠ್ಯಕ್ರಮದ ಚಟುವಟಿಕೆಗಳನ್ನು ಮುಂದುವರೆಸುವುದು.
(c) ರಾಷ್ಟ್ರೀಯ, ಧಾರ್ಮಿಕ ಅಥವಾ ರುತುಮಾನದ ಹಬ್ಬಗಳನ್ನು ಆಚರಿಸುವುದು.
(d) ವಾರ್ತಾಪತ್ರಿಕೆಗಳನ್ನು ಓದುವ ಗುಂಪುಗಳನ್ನು ಮತ್ತು ಪ್ರಸಕ್ತ ವಿಷಯಗಳ ಬಗ್ಗೆ ಚರ್ಚೆ ನಡೆಸುವ ಗುಂಪುಗಳನ್ನು ಮಾಡುವುದು.

**4. ಪೌರ ಚಟುವಟಿಕೆಗಳು**

ಮೂರನೇ ತರಗತಿಯಲ್ಲಿ ಸೂಚಿಸಿರುವುದರ ಮುಂದುವರಿಕೆ.

## ತರಗತಿ

## V

**I.1. ಭಾರತದಲ್ಲಿ ಮತ್ತು ಜಗತ್ತಿನಲ್ಲಿ ಮುಸ್ಲಿಮ್ ನಾಗರಿಕತೆಯ ಕಥೆ.**

(a) ಅರೇಬಿಯಾದ ಭೌಗೋಳಿಕ ಮತ್ತು ಸಾಮಾಜಿಕ ಹಿನ್ನೆಲೆಯ ಜೊತೆಗೆ ಪ್ರವಾದಿ ಮಹಮ್ಮದರ ಜೀವನ ಕಥೆ.

(b) ಆರಂಭಿಕ ಇಸ್ಲಾಮೀಯ ಚರಿತ್ರೆಯ ವೀರರು: ಒಮಾರ್, ಅಲಿ, ಹುಸೇನ್, ಕಲೀಫ್ ಅಬ್ದುಲ್ ಅಜೀಜ್.
(c) ಭಾರತದ ಜೊತೆ ಆರಂಭದಲ್ಲಿನ ಮುಸ್ಲಿಮ್ ಸಂಪರ್ಕ - ಮುಸ್ಲಿಮ್ ಪ್ರಯಾಣಿಕರು ಮತ್ತು ವರ್ತಕರು - ಮೊಹಮ್ಮದ್ ಬಿನ್ ಖಾಸೀಮ್, ಖ್ವಾಜಾ ಮೊಯಿನುದ್ದೀನ್ ಚಿಷ್ಟಿ.
(d) ಇಂಡೋ-ಮುಸ್ಲಿಮ್ ಸಂಸ್ಕೃತಿಯ ಬೆಳವಣಿಗೆಯ ಕಥೆಯನ್ನು ನೈಜ ಉದಾಹರಣೆಗಳ ಮೂಲಕ ನಿರೂಪಿಸುವುದು.

i. ಅಮೀರ್ ಖುಸ್ರೋ, ಕಬೀರ್, ಗುರು ನಾನಕ್, ಅಕ್ಬರ್ ಮತ್ತು ದಾರಾ ಶಿಕೊ ಅವರ ಕಥೆಗಳ ಮೂಲಕ ಹಿಂದೂ ಮುಸ್ಲಿಮ್ ಧರ್ಮಗಳ ನಡುವಿನ ಪರಸ್ಪರ ಪ್ರಭಾವವನ್ನು ಅರ್ಥ ಮಾಡಿಸುವುದು.
ii. ಎರಡೂ ಧರ್ಮಗಳ ಆಹಾರ, ವೇಷಭೂಷಣ, ಮನರಂಜನೆ, ಹಬ್ಬಗಳು, ಸಾಮಾಜಿಕ ಪದ್ದತಿ ಮತ್ತು ಸಂಪ್ರದಾಯ ಇವೆಲ್ಲವೂ ಒಂದು ಸಾಮುದಾಯಿಕ ಸಾಮಾಜಿಕ ಬದುಕಿಗೆ ಹೇಗೆ ಹಾದಿಯನ್ನು ತೆರೆದವು ಎನ್ನುವುದರ ಬಗ್ಗೆ ಅರ್ಥ ಮಾಡಿಸುವುದು.
iii. ಶೇರ್ ಶಾಹ್, ಅಕ್ಬರ್ ಮತ್ತು ತೋಡರ್ ಮಾಲ್ ಅವರ ಕಥೆಗಳ ಮೂಲಕ ಎರಡೂ ಜನಾಂಗಗಳ ನಡುವಿನ ಕೊಳ್ಕೊಡುವಿಕೆಯಲ್ಲಿ ಹೇಗೆ ಒಂದು ಸಾಮುದಾಯಿಕ ರಾಜಕೀಯ ಮತ್ತು ಆಡಳಿತ ವ್ಯವಸ್ಥೆ ಹೊಮ್ಮಲು ಸಾಧ್ಯವಾಯಿತು.
iv. ಭಾಷೆ ಮತ್ತು ಸಾಹಿತ್ಯ:

- ಪರ್ಶಿಯನ್ ಒಂದು ಸಾಹಿತ್ಯಕ ಮತ್ತು ಆಸ್ಥಾನ ಭಾಷೆಯಾಗಿ.
- ಪರ್ಶಿಯನ್ ವಿದ್ವಾಂಸರಾಗಿದ್ದ ಹಿಂದೂ ಬರಹಗಾರರು ಮತ್ತು ಸಂಸ್ಕೃತ ಹಾಗೂ ಹಿಂದಿ ವಿದ್ವಾಂಸರಾಗಿದ್ದ ಮುಸ್ಲಿಮ್ ಬರಹಗಾರರು.
- ಸಂಸ್ಕೃತ, ಹಿಂದಿ ಮತ್ತು ಬಂಗಾಲಿಗೆ ಆಶ್ರಯ ಉತ್ತೇಜನಗಳನ್ನು ನೀಡಿದ ಮುಸ್ಲಿಮರು.
- ಹಿಂದೂಸ್ತಾನಿ ಇವೆರಡೂ ಜನಾಂಗಗಳ ನಡುವಿನ ಸಾಮಾನ್ಯ ಸಾಮುದಾಯಿಕ ಭಾಷೆಯಾಗಿ ಬೆಳೆದ ಬಗೆ.

**v. ಕಲೆ;**

- ಸಂಗೀತ; ಇಂಡೋ-ಮುಸ್ಲಿಮ್ ಸಂಗೀತ: ಅಮೀರ್ ಖುಸ್ರೋ, ತಾನ್ ಸೇನ್.
- ಚಿತ್ರಕಲೆ: ಮುಘಲ್, ರಜಪೂತ ಮತ್ತು ಕಾಂಗ್ರಾ ಚಿತ್ರಕಲಾ ಪ್ರಕಾರಗಳು.
- ವಾಸ್ತುಶಿಲ್ಪ: ಕುತುಬ್ ಮಿನಾರ್, ಫತೇಪುರ್ ಸಿಕ್ರಿ, ತಾಜ್ ಮಹಲ್.

- ಮೋಡಿಅಕ್ಷರ ಮತ್ತು ಹಸ್ತಪ್ರತಿಯ ಸುವರ್ಣಾಲಂಕರಣ.

**(vi) ಕರಕೌಶಲ್ಯಗಳು:** ನೇಯುವುದು, ರಂಗು ಬಳಿಯುವುದು, ಅಚ್ಚೊತ್ತುವುದು, ಚಿನ್ನ ಮತ್ತು ಬೆಳ್ಳಿ ಕುಲುಮೆಗಾರಿಕೆ, ಕಸೂತಿ, ಜಮಖಾನ ತಯಾರಿಸುವಿಕೆ, ತೋಟಗಾರಿಕೆ.

(e) ಈ ಕೆಳಗೆ ಸೂಚಿಸಿದ ವ್ಯಕ್ತಿಗಳ ಜೀವನ ಚರಿತ್ರೆಗಳನ್ನು ಅವರು ಬದುಕಿದ್ದ ಸಾಮಾಜಿಕ ಸನ್ನಿವೇಶಗಳಿಗೆ ವಿಶೇಷ ಒತ್ತು ಕೊಟ್ಟು ನೀಡುವುದು: ಆಲ್ಬೆರೂನಿ (Alberuni), ಇಬನ್-ಇ-ಬಟೂಟ (Ibn-I-Batuta), ಫಿರೋಜ್ ಶಾ ತುಘಲಕ್, ಬಾಬರ್, ಚಾಂದ್ ಬೀಬಿ, ನೂರ್ ಜಹಾನ್ ಮತ್ತು ದಾದು, ಕಾವಿರ್, ನಾನಕ್ ಹಾಗೂ ಬಾಬಾ ಫರೀದ್ ಅವರಂತಹ ಅನುಭಾವಿ ಸಂತರು.

(f) ಜಗತ್ತಿಗೆ ಇಸ್ಲಾಮೀಯ ನಾಗರಿಕತೆ ನೀಡಿರುವ ಕೊಡುಗೆ: ಅಲಿ (ಒಬ್ಬ ವ್ಯಕ್ತಿಯಾಗಿ ಮತ್ತು ವಿದ್ವಾಂಸನಾಗಿ); ಬಲಾಲ್ (ನೀಗ್ರೋ ಪ್ರಜಾಪ್ರಭುತ್ವ); ಹರೂನ್-ಊರ್-ರಶೀದ್ (ಕಲಿಕೆಗೆ ಇತ್ತ ಉತ್ತೇಜನ); ಸಲಾಹುದ್ದೀನ್ (ಮುಸ್ಲಿಮ್ ಮದಿಪಿನ ಪ್ರತಿನಿಧಿ); ಅಬ್ದುರ್ ರಹಮಾನ್ III (ಸ್ಪೇನಿನ ಮೂರ್ ಸಂಸ್ಕೃತಿ); ಜಗತ್ತಿನಲ್ಲಿ ಮುಸ್ಲಿಮ್ ಚಕ್ರಾಧಿಪತ್ಯದ ಪ್ರಮಾಣ (ಭೌಗೋಳಿಕ ಅಧ್ಯಯನಕ್ಕೆ ಸಹಸಂಬಂಧಿತವಾಗಿ).

## II. ಮನುಷ್ಯನ ಭೌಗೋಳಿಕ ವಾತಾವರಣದ ಅಧ್ಯಯನ.

1. ಭಾರತದ ನೈಸರ್ಗಿಕ ವಿಭಾಗಗಳು, ಪ್ರದೇಶದ ಸ್ಥಳವಿವರಣೆ, ಹವಾಮಾನ, ನೈಸರ್ಗಿಕ ಸಸ್ಯವರ್ಗಗಳು, ಬೆಳೆಗಳು, ಸಂಪರ್ಕ ಮತ್ತು ಸಂವಹನದ ವಿಧಾನಗಳು, ಕೈಗಾರಿಕೆಗಳು, ವ್ಯವಹಾರ, ಜನಸಂಖ್ಯೆ, ರಾಜಕೀಯ ವಿಭಾಗಗಳು, ಭಾಷಾವಾರು ಪ್ರದೇಶಗಳು.

### ಮಾಡಿ-ಕಲಿ

i. ಭಾರತದ ವಿವಿಧ ಭೌಗೋಳಿಕ ಲಕ್ಷಣಗಳನ್ನು ತೋರಿಸುವ ಭೂಪಟ, ನಕಾಶೆ, ಮತ್ತು ರೇಖಾಚಿತ್ರಗಳು.
ii. ಮುಸ್ಲಿಮ್ ಚಕ್ರಾಧಿಪತ್ಯವನ್ನು ಗುರುತಿಸುವ ಜಾಗತಿಕ ಭೂಪಟ.

2. ಈ ಕೆಳಗಿನ ಜೀವನೋಪಾಯಗಳಿಗೆ ಸಂಬಂಧಿಸಿದಂತೆ ಜಗತ್ತಿನ ವಿವಿಧ ಪ್ರದೇಶಗಳ ಅಧ್ಯಯನ: ವಾಣಿಜ್ಯ, ವ್ಯವಸಾಯ ಮತ್ತು ಕೈಗಾರಿಕೆಗಳು.

ಮಾಡಿ-ಕಲಿ

ಭೂಪಟಗಳು, ನಕಾಶೆಗಳು ಮತ್ತು ರೇಖಾಚಿತ್ರಗಳು.

3. ಜಗತ್ತಿನ ಅನ್ವೇಷಕರು: ಲಿವಿಂಗ್ಸ್ಟೋನ್ (Living Stone), ಕುಕ್(Cook), ಪಿಯರಿ(Peary), ಶ್ಯಾಕಿಲ್ಟನ್ (Shackleton).
4. ಭಾರತ ಮತ್ತು ಇತರ ದೇಶಗಳಲ್ಲಿ ನೂಲುವ ವಿಧಾನದ ಚರಿತ್ರೆ (ಇದನ್ನು ಕರಕೌಶಲ್ಯಕ್ಕೆ ನಿಗದಿಪಡಿಸಿದ ಅವಧಿಯಲ್ಲಿ ಹೇಳಿಕೊಡುವುದು). ಮೌಖಿಕ ಮಾಹಿತಿ, ಚರ್ಚೆ, ಮತ್ತು ಬರವಣಿಗೆಯ ಅಭ್ಯಾಸ.

**III. ಪೌರಬದುಕಿಗೆ ತರಬೇತಿ.**

1. ಪ್ರಸಕ್ತ ಘಟನಾವಳಿಗಳನ್ನು ಈ ಕೆಳಗಿನ ಅಂಶಗಳ ಮೂಲಕ ತಿಳಿದುಕೊಳ್ಳುವುದು:

   (a) ವಾರ್ತಪತ್ರಿಕೆಗಳನ್ನು ಗುಂಪಿನಲ್ಲಿ ಓದುವುದು.
   (b) ದಿನನಿತ್ಯದ ಸುದ್ದಿಹಾಳೆಯನ್ನು ಸಂಪಾದಿಸುವುದು (ಭಾಷೆಯನ್ನು ಕಲಿಯುವಾಗ ಮಾಡುವ ಚಟುವಟಿಕೆ).

2. ಈ ಕೆಳಗಿನ ಅಂಶಗಳ ಆಧಾರದ ಮೇಲೆ ಜಿಲ್ಲೆಯ ಬಗ್ಗೆ ಅರಿವನ್ನು ಮೂಡಿಸುವುದು:

   (a) ಸ್ಥಳೀಯ ಮತ್ತು ಜಿಲ್ಲೆಯ ಮಂಡಳಿಗಳು ಮತ್ತು ಅವುಗಳು ಆಯೋಜಿಸಿ ನಿಯಂತ್ರಿಸುವ ಸೇವಾಸೌಲಭ್ಯಗಳು: ವ್ಯವಸಾಯ, ನೀರಾವರಿ, ಸಹಕಾರ ಸಂಸ್ಥೆಗಳು, ನೈರ್ಮಲ್ಯ, ಸಾರ್ವಜನಿಕ ಆರೋಗ್ಯ, ಔಷಧಿ ಮತ್ತು ಶಿಕ್ಷಣ.
   (b) ಆಡಳಿತ: ಆಡಳಿತದ ಉಪವಿಭಾಗಗಳು; ಜಿಲ್ಲಾ ಅಧಿಕಾರಿಗಳು ಮತ್ತು ಅವರ ಕರ್ತವ್ಯಗಳು; ನ್ಯಾಯಾಲಯಗಳು ಮತ್ತು ಪೊಲೀಸ್.
   (c) ಸಾಮಾಜಿಕ ಸೇವಾಸೌಲಭ್ಯಗಳ ಕಾರ್ಯಭಾರಗಳು.
   (d) ಮನರಂಜನೆಯ ಸಾಧನಗಳು ಮತ್ತು ಜನಪ್ರಿಯ ಶಿಕ್ಷಣ.

3. ಪೌರ ಚಟುವಟಿಕೆಗಳು: ನಾಲ್ಕನೇ ತರಗತಿಯಲ್ಲಿ ಸೂಚಿಸಿದ ಪಠ್ಯಕ್ರಮದ ಮುಂದುವರಿಕೆ.

## ತರಗತಿ

## VI

**I.1. ಆಧುನಿಕ ಕಾಲಕ್ಕೆ ವಿಶೇಷ ಗಮನ ನೀಡುವುದರೊಂದಿಗೆ ಭಾರತದ ಇತಿಹಾಸ.**

(a) ಮೊಘಲ್ ಸಾಮ್ರಾಜ್ಯದ ಅವನತಿಯ ಕಥೆ - ಶಿವಾಜಿ ಮತ್ತು ಮರಾಠರ ಪ್ರಾಬಲ್ಯ.
(b) ಇಂಡೋ-ಮುಸ್ಲಿಮ್ ಸಂಸ್ಕೃತಿಯ ಅವನತಿ.

(c) ಆರಂಭದಲ್ಲಿ ಯುರೋಪಿಯನ್ ವರ್ತಕರು, ವ್ಯಾಪಾರಸ್ಥರು, ಸೈನಿಕರು ಮತ್ತು ಧರ್ಮಪ್ರಚಾರಕರು ಭಾರತಕ್ಕೆ ಬಂದಿಳಿದ ಕಥೆ.
(d) ಬ್ರಿಟಿಷರು ಭಾರತವನ್ನು ಆಕ್ರಮಿಸಿಕೊಂಡ ಕಥೆ.
(e) ರಣಜಿತ್ ಸಿಂಗ್ ಮತ್ತು ಸಿಖ್ಖರ ಪ್ರಾಬಲ್ಯ.

2. ಭಾರತದ ಸಂಸ್ಕೃತಿಯ ಮೇಲೆ ಪಾಶ್ಚಾತ್ಯ ನಾಗರಿಕತೆಯ ಪ್ರಭಾವ - ಈ ಕೆಳಗಿನ ಅಂಶಗಳಿಗೆ ಸಂಬಂಧಿಸಿದಂತೆ ಅಧ್ಯಯನ ಮಾಡುವುದು:

(a) ಧರ್ಮ.
(b) ಸಾಮಾಜಿಕ ಬದುಕು.
(c) ರಾಜಕೀಯ ಮತ್ತು ಆರ್ಥಿಕ ಬದುಕು.
(d) ಭಾಷೆ ಮತ್ತು ಸಾಹಿತ್ಯ.
(e) ಶಿಕ್ಷಣ.
(f) ಕೈಗಾರಿಕೆಗಳು, ಕಲೆಗಳು ಮತ್ತು ಕರಕೌಶಲ್ಯಗಳು.

**ವಿಶೇಷ ಸೂಚನೆ**

ಈ ಅರಿವನ್ನು ಮೂರ್ತವಾದ ಮತ್ತು ವಾಸ್ತವ ಉದಾಹರಣೆಗಳ ಸಮೇತ ಕೊಡಬೇಕೇ ಹೊರತು ಸೈದ್ಧಾಂತಿಕ ಅಥವಾ ತಾತ್ವಿಕ ನೆಲೆಗಳಿಂದ ಕೊಡಬಾರದು.

3. ಭಾರತೀಯ ರಾಷ್ಟ್ರೀಯ ಚಳುವಳಿಯ ಇತಿಹಾಸ.
4. ಭಾರತದಲ್ಲಿ ಜವಳಿ ಉದ್ಯಮದ ಇತಿಹಾಸ ಮತ್ತು ಅದರ ಅವನತಿ (ಕರಕೌಶಲ್ಯದ ಕೆಲಸಕ್ಕೆ ಸಂಬಂಧಿಸಿದಂತೆ ಅರ್ಥ ಮಾಡಿಸುವುದು).

## II. ಮನುಷ್ಯನ ಭೌಗೋಳಿಕ ವಾತಾವರಣದ ಅಧ್ಯಯನ.

1. ಯುರೇಷಿಯಾದಗೆ ವಿಶೇಷ ಒತ್ತು ನೀಡಿ ಜಗತ್ತಿನ ಮುಖ್ಯ ಭೌಗೋಳಿಕ ಪ್ರದೇಶಗಳ ಸ್ಥೂಲ ಅರಿವನ್ನು ನೀಡುವುದು (ಜನರ ಜೀವನೋಪಾಯ ಮತ್ತು ಬದುಕಿನ ಶೈಲಿಗಳನ್ನು ಭೌಗೋಳಿಕ ಲಕ್ಷಣಗಳು ಹೇಗೆ ರೂಪಿಸುತ್ತವೆ ಎನ್ನುವುದನ್ನು ಮನವರಿಕೆ ಮಾಡಿಸಲು ಇದು ಮುಖ್ಯವಾಗುತ್ತದೆ.
2. ಇತ್ತೀಚಿನ ಶೋಧನೆಗಳು: ಎವರೆಸ್ಟ್ ಅನ್ವೇಷಣೆಗಳು, ರಷ್ಯನ್ನರಿಂದ ಉತ್ತರ ಧ್ರುವದ ಅನ್ವೇಷಣೆ.

## III. ಪೌರಬದುಕಿಗೆ ಅವಶ್ಯಕವಾದ ತರಬೇತಿ:

1. ಬೋಧಕರ ಮಾರ್ಗದರ್ಶನದಲ್ಲಿ ಮಕ್ಕಳು ಹಳ್ಳಿಯ ಧಾರ್ಮಿಕ, ಸಾಮಾಜಿಕ-ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕಿನ ವಿವರವಾದ ಸಮೀಕ್ಷೆಯನ್ನು ಮಾಡುವುದು.

2. ಮಾಡಿ-ಕಲಿ

ಈ ಸಮೀಕ್ಷೆಯ ಅಭ್ಯಾಸೀಯ ಅಂಶವಾಗಿ 12-14 ರ ವಯಸ್ಸಿನ ಮಕ್ಕಳ ಹಿರಿಯ ಸಮಾಜ ಸೇವೆಯ ಗುಂಪೊಂದನ್ನು ರಚಿಸಿ ಅವರು ಈ ಕೆಳಗಿನ ಹೊಣೆಗಳನ್ನು ಸಾಧ್ಯವಾದಷ್ಟು ಮೂಲ ಕೆಲಸವಾಗಿ ಕೈಗೆತ್ತಿಕೊಳ್ಳುವುದು:

(a) ಸಮುದಾಯದ ಆರ್ಥಿಕ ಮತ್ತು ಸಾಂಸ್ಕೃತಿಕ ಅವಶ್ಯಕತೆಗಳ ಆಧಾರದ ಮೇಲೆ ಪ್ರದೇಶದ ಕ್ರಮಬದ್ಧ ಅಧ್ಯಯನವನ್ನು ಕೈಗೊಳ್ಳುವುದು.

(b) ವಾಸಿಸುವ ಜಾಗ, ಹಳ್ಳಿಯ ರಸ್ತೆ ಮತ್ತು ಬಾವಿಗಳ ಆರೋಗ್ಯ ಮತ್ತು ನೈರ್ಮಲ್ಯವನ್ನು ಆಗಾಗ್ಗೆ ಪರೀಕ್ಷಿಸುವುದು. ಹಾಗೆಯೇ ಹಳ್ಳಿಯ ರಸ್ತೆ ಮತ್ತು ಕುಡಿಯುವ ನೀರಿನ ರಕ್ಷಣೆಯನ್ನು ಮಾಡುವುದು.

(c) ನೊಣ, ತಿಗಣೆ, ಮಲೇರಿಯಾ ತರುವ ಸೊಳ್ಳೆ ಮತ್ತು ಇತರ ಪರಾವಲಂಬಿ ಜೀವಿಗಳಿಂದ ರಕ್ಷಣೆ ಮಾಡುವುದು.

(d) ಔಷಧೀಯ ಸಸ್ಯಗಳನ್ನು ಸಂಗ್ರಹಿಸುವುದು ಮತ್ತು ಸ್ಥಳೀಯ ವಿತರಣೆಗೆ ಅವುಗಳನ್ನು ಬೆಳೆಸುವುದು.

(e) ಆರೋಗ್ಯ ಮತ್ತು ನೈರ್ಮಲ್ಯವನ್ನು ಕುರಿತಾದ ಉಪನ್ಯಾಸಗಳನ್ನು ಏರ್ಪಡಿಸುವುದು.

(f) ಸಾಂಕ್ರಾಮಿಕ ರೋಗಗಳನ್ನು ತಡೆಯಲು ತೆಗೆದುಕೊಳ್ಳಬೇಕಾದ ಅವಶ್ಯಕವಾದ ಕ್ರಮಗಳ ಬಗ್ಗೆ ಪ್ರಚಾರ ಮಾಡುವುದು.

(g) ವಯಸ್ಕರ ಶಿಕ್ಷಣವನ್ನು ಹಳ್ಳಿಯಲ್ಲಿ ಆಯೋಜಿಸುವುದು. ವಾರ್ತಾಪತ್ರಿಕೆ, ಮತ್ತು ಇತರ ಪತ್ರಿಕೆಗಳ ಓದು, ಜನಪ್ರಿಯ ಉಪನ್ಯಾಸಗಳು, ಕೀರ್ತನೆಗಳು, ಹರಿಕಥೆಗಳು ಇತ್ಯಾದಿಗಳನ್ನು ಆಯೋಜಿಸುವುದು. ಸಾಕ್ಷರತೆಯನ್ನು ಹರಡುವುದು.

(h) ಕಾಡು, ತೋಪು ಮತ್ತು ಇತರ ನೈಸರ್ಗಿಕ ರಮ್ಯತಾಣಗಳನ್ನು ಜೋಪಾನ ಮಾಡುವುದು. ಹಾಗೆಯೇ ಪುರಾತನ ಮಸೀದಿಗಳು, ದೇವಸ್ಥಾನಗಳು ಮತ್ತು ಇತರ ಐತಿಹಾಸಿಕ ಸ್ಮಾರಕಗಳನ್ನು ಕಾಪಾಡುವುದು.

(i) ಹಳ್ಳಿಯಲ್ಲಿ ಜರುಗುವ ಯಾವುದೇ ಅನ್ಯಾಯದ ವಿರುದ್ಧ ಪ್ರಚಾರ ಮಾಡುವುದು.

(j) ಹಳ್ಳಿಯ ವಯಸ್ಕ ಜನರಿಗೆ ಕರಕೌಶಲ್ಯ ತರಬೇತಿ ಕೇಂದ್ರಗಳನ್ನು ಆಯೋಜಿಸುವುದು.

(k) ರಾಷ್ಟ್ರೀಯ ಮತ್ತು ಧಾರ್ಮಿಕ ಹಬ್ಬಗಳನ್ನು ಆಯೋಜಿಸುವುದು. ಹಾಗೆಯೇ ಹಳ್ಳಿಯ ಮಕ್ಕಳಿಗೆ ಮತ್ತು ವಯಸ್ಕ ಜನರಿಗೆ ಆಟೋಟ ಮತ್ತು ಮನರಂಜನೆಗಳನ್ನು ಏರ್ಪಡಿಸುವುದು.

## ತರಗತಿ

## VII

### 1. ಆಧುನಿಕ ಜಗತ್ತಿನ ಅಧ್ಯಯನ.

(a) ಆಧುನಿಕ ಬದುಕಿನಲ್ಲಿ ವಿಜ್ಞಾನ - ವೈಜ್ಞಾನಿಕ ಆವಿಷ್ಕಾರಗಳು ಮತ್ತು ಅನ್ವೇಷಣೆಗಳು ಹೇಗೆ ನೈಸರ್ಗಿಕ ಶಕ್ತಿಗಳನ್ನು ಮಣಿಸಿದವು ಮತ್ತು ಮನುಷ್ಯ£ ಬದುಕಿಗೆ ಅವುಗಳು ಹೇಗೆ ಸಹಾಯಕವಾದವು:

i. ರೇಲ್ವೆ, ಕಾರು, ಜಹಜು, ವಿಮಾನ ಇತ್ಯಾದಿ ಸಂಚಾರ ಸಾಧನಗಳ ತ್ವರಿತ ಬೆಳವಣಿಗೆ.
ii. ವಿಚಾರಗಳ ಸಂವಹನದಲ್ಲಿ ನಡೆದ ತ್ವರಿತ ಬೆಳವಣಿಗೆ - ಮುದ್ರಣ, ದೂರವಾಣಿ, ತಂತಿ, ರೇಡಿಯೊ, ದೂರದರ್ಶನ.
iii. ಆಧುನಿಕ ಕೈಗಾರಿಕೆಯ ಬೆಳವಣಿಗೆ - ಕೈಗಾರಿಕಾ ಕ್ರಾಂತಿ.
iv. ವಿಜ್ಞಾನ ಮತ್ತು ಸಾರ್ವಜನಿಕ ಆರೋಗ್ಯ.
v. ವಿಜ್ಞಾನ ಮತ್ತು ವ್ಯವಸಾಯ.
vi. ದಿನನಿತ್ಯದ ಬದುಕಿನಲ್ಲಿ ವಿಜ್ಞಾನ - ಆಹಾರ, ಉಡುಪು, ವಿದ್ಯುಚ್ಛಕ್ತಿ, ಕಟ್ಟಡಗಳು.
vii. ವಿಜ್ಞಾನ ಮತ್ತು ಆಧುನಿಕ ಯುದ್ಧತಂತ್ರ: ನಿಸರ್ಗದ ವಿರುದ್ಧ ಶಕ್ತಿಯ ದುರ್ಬಳಕೆ (ಈ ಅಂಶವನ್ನು ಸಾಮಾನ್ಯ ವಿಜ್ಞಾನದ ಪಠ್ಯಸೂಚಿಯೊಂದಿಗೆ ಸಹಸಂಬಂಧಿಸಲಾಗುತ್ತದೆ).

(b) ಆಧುನಿಕ ಜಗತ್ತಿನಲ್ಲಿ ಕೈಗಾರಿಕೀಕರಣ ಮತ್ತು ಸಾಮ್ರಾಜ್ಯಶಾಹಿಯ ಕಥೆ.

i. ಪಶ್ಚಿಮದಲ್ಲಿ ಕೈಗಾರಿಕೀಕರಣ ಮತ್ತು ಬಂಡವಾಳಶಾಹಿಯ ಜೊತೆಗೆ ಕೈಗಾರಿಕಾ ನಾಗರಿಕತೆಯ ಬೆಳವಣಿಗೆ.
ii. ಕೈಗಾರಿಕಾ ನಾಗರಿಕತೆಯ ಪರಿಣಾಮವಾಗಿ ಅಸ್ತಿತ್ವಕ್ಕೆ ಬಂದ ಸಾಮ್ರಾಜ್ಯಶಾಹಿ. ಜಪಾನ್ ಮತ್ತು ಪಶ್ಚಿಮದ ಕೈಗಾರಿಕಾ ದೇಶಗಳು ಏಶಿಯಾ ಮತ್ತು ಆಫ್ರಿಕಾದ ಜನಾಂಗಗಳನ್ನು ಶೋಷಣೆಗೊಳಪಡಿಸಿದ ಕಥೆ.
iii. ಮಹಾಯುದ್ಧ (1914-1918).
iv. ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿಗೆ ವಿರುದ್ಧ ಪ್ರತಿಕ್ರಿಯೆಯಾಗಿ ಮತ್ತು ಜಾಗತಿಕ ಶಕ್ತಿಯಾಗಿ ಚಾಲ್ತಿಗೆ ಬಂದ ಸಮಾಜವಾದ. ಕೈಗಾರಿಕಾ ಮತ್ತು ಸಮಾಜವಾದಿ

ನಾಗರಿಕತೆಯಲ್ಲಿ ಪ್ರಯೋಗವಾಗಿ ಒದಗಿದ ಸಂಯುಕ್ತ ರಷ್ಯಾದ ಕಥೆ.

(c) ಆಧುನಿಕ ಜಗತ್ತಿನಲ್ಲಿ ಪ್ರಜಾಪ್ರಭುತ್ವ.

i. ಪ್ರಜಾಪ್ರಭುತ್ವದ ಅರ್ಥ.
ii. ಪ್ರಾಚೀನ ಭಾರತದಲ್ಲಿ ಮತ್ತು ಮಧ್ಯಯುಗೀನ ಭಾರತದಲ್ಲಿ ಪ್ರಜಾಪ್ರಭುತ್ವದ ಸಂಸ್ಥೆಗಳು ಮತ್ತು ಸಮುದಾಯಗಳು.
iii. ಅಮೆರಿಕನ್ ಗಣರಾಜ್ಯದ ಕಥೆ.
iv. ಫ್ರೆಂಚ್ ಕ್ರಾಂತಿಯ ಕಥೆ.
v. ಪ್ರಸಕ್ತ ಭಾರತೀಯ ಸಂವಿಧಾನದ ಬೆಳವಣಿಗೆಯ ಸ್ಥೂಲ ಪರಿಚಯ ಮತ್ತು ಅದರ ಮಿತಿಗಳು.
vi. ಯುರೋಪಿನಲ್ಲಿ ಪ್ರಜಾಪ್ರಭುತ್ವದ ದಮನದ ಕಥೆ.

**ವಿಶೇಷ ಸೂಚನೆ**

ಈ ಮೇಲೆ ಸೂಚಿಸಿರುವ ವಿಷಯಗಳನ್ನು ವಿದ್ಯಾರ್ಥಿಗಳು ಆಧುನಿಕ ಜಗತ್ತಿನ ಬಗ್ಗೆ ಸರಿಯಾದ ದೃಷ್ಟಿಕೋನವನ್ನು ಹೊಂದಬೇಕು ಎನ್ನುವ ಉದ್ದೇಶವನ್ನು ಗಮನದಲ್ಲಿರಿಸಿಕೊಂಡು ಸರಳವಾಗಿ ಮತ್ತು ಸ್ಥೂಲವಾಗಿ ಪ್ರಸ್ತುತಪಡಿಸಬೇಕು.

**2. ಪ್ರಸಕ್ತ ಘಟನಾವಳಿಗಳು**

(a) ಇಂದಿನ ಅಂತರಾಷ್ಟ್ರೀಯ ಸನ್ನಿವೇಶ (ಸ್ಥೂಲವಾಗಿ).
(b) ಜಾಗತಿಕ ನ್ಯಾಯ ಮತ್ತು ಶಾಂತಿಗೆ ಶ್ರಮಿಸುತ್ತಿರುವ ಶಕ್ತಿಗಳು.

i. ಲೀಗ್ ಆಫ್ ನೇಶನ್ಸ್ League of Nations), ಅದರ ಚಟುವಟಿಕೆಗಳು ಮತ್ತು ವೈಫಲ್ಯಗಳು.
ii. ಶಾಂತಿಗಾಗಿ ಶ್ರಮಿಸುತ್ತಿರುವ ಸಂಸ್ಥೆಗಳು.
iii. ಜಾಗತಿಕ ಶಕ್ತಿಯಾಗಿ ಸತ್ಯಾಗ್ರಹ ಚಳುವಳಿ.

**3. ಆಧುನಿಕ ಭಾರತದ ಜ್ವಲಂತ ಸಮಸ್ಯೆಗಳು**

- ಸಾಮಾಜಿಕ.
  - ಗ್ರಾಮೀಣ ಮರುನಿರ್ಮಾಣ
  - ಅಸ್ಪೃಶ್ಯತೆಯ ಸಮಸ್ಯೆ ಮತ್ತು ಹರಿಜನ ಚಳುವಳಿ.
  - ಮುಸ್ಲಿಮರಲ್ಲಿ ಸಮಾಜ ಸುಧಾರಣೆ.
  - ಆಧುನಿಕ ಭಾರತದಲ್ಲಿ ಮಹಿಳೆಯರ ಸ್ಥಾನಮಾ£.

- ರಾಜಕೀಯ.
  - ರಾಷ್ಟ್ರೀಯ ಚಳುವಳಿಯ ಇತಿಹಾಸ (ಮುಂದುವರಿಕೆ).
  - ಹೊರದೇಶದಲ್ಲಿರುವ ಭಾರತೀಯರು.
- ಆರ್ಥಿಕ.
  - ಬ್ರಿಟಿಷ್ ಆಡಳಿತದ ಅಡಿ ಕುಸಿದ ಕರಕೌಶಲ್ಯಗಳು ಮತ್ತು ಉದ್ದಿಮೆಗಳು.
  - ಭಾರತದಲ್ಲಿ ಬಡತನದ ಸಮಸ್ಯೆ.
  - ಗ್ರಾಮೀಣ ಕೈಗಾರಿಕಾ ಚಳುವಳಿ ಮತ್ತು ಸ್ವದೇಶಿ ಚಳುವಳಿ ಆಶ್ರಯದಲ್ಲಿ ಕರಕೌಶಲ್ಯಗಳ ಪುನರುಜ್ಜೀವನ.
  - ಭಾರತದಲ್ಲಿ ಕೈಗಾರೀಕರಣದ ಪ್ರಾರಂಭ.
- ಭಾಷೆ.
  - ಭಾರತದ ಬಹು ಭಾಷೆಗಳು.
  - ರಾಷ್ಟ್ರೀಯ ಭಾಷೆಯಾಗಿ ಹಿಂದೂಸ್ಥಾನಿಯ ಪ್ರಾಮುಖ್ಯತೆ.

(e) ಸಾಂಸ್ಕೃತಿಕ.

ರಾಷ್ಟ್ರೀಯ ಶಿಕ್ಷಣ ಮತ್ತು ಭಾರತೀಯ ಸಂಸ್ಕೃತಿಯ ಪುನರುಜ್ಜೀವನಕ್ಕೆ ನಡೆದ ಚಳುವಳಿಗಳು.

4. ಭಾರತ ಆರ್ಥಿಕ ಸಂಬAಧವನ್ನು ಹೊಂದಿರುವ ದೇಶಗಳಿಗೆ ವಿಶೇಷ ಒತ್ತು ನೀಡಿ ಜಗತ್ತಿನ ಆರ್ಥಿಕ ವ್ಯವಸ್ಥೆಯ ಸರಳ ಮತ್ತು ಸ್ಥೂಲ ಚಿತ್ರಣವನ್ನು ನೀಡುವುದು (ಈ ಕಲಿಕೆಯನ್ನು ಹಳ್ಳಿಯ ಸಂತೆ ಅಥವಾ ಜಿಲ್ಲೆಯ ಜಾತ್ರೆಯ ಬಗೆಗಿನ ಅರಿವಿನೊಂದಿಗೆ ಪ್ರಾರಂಭಿಸಬೇಕು).

5. ಭಾರತದಲ್ಲಿ ಮತ್ತು ಇತರ ಪ್ರದೇಶಗಳಲ್ಲಿ ನೇಯುವ ವಿಧಾನದ ಇತಿಹಾಸ (ನೂಲುವ ಮತ್ತು ನೇಯುವ ಕರಕೌಶಲ್ಯಕ್ಕೆ ಸಹಸಂಬಂಧಿಸಿದಂತೆ).

6. ಮಾಡಿ-ಕಲಿ ಚಟುವಟಿಕೆಗಳು.

   ಆರನೇ ತರಗತಿಯ ಪಠ್ಯಕ್ರಮದಲ್ಲಿ ಸೂಚಿಸಿರುವುದರ ಮುಂದುವರಿಕೆ.

## ಸಾಮಾನ್ಯ ವಿಜ್ಞಾನ

## ತರಗತಿ

## I

1. ಸುತ್ತಮುತ್ತಲಿರುವ ಪ್ರಮುಖ ಬೆಳೆಗಳು, ಮರಗಳು, ಪ್ರಾಣಿಗಳು ಮತ್ತು ಹಕ್ಕಿಗಳನ್ನು ಗುರುತಿಸಿ ಹೆಸರಿಸುವುದು.
2. ಸೂರ್ಯನನ್ನು ಆಧಾರವಾಗಿಟ್ಟುಕೊಂಡು ದಿಕ್ಕನ್ನು ಗುರುತಿಸುವುದು; ಋತುಮಾನಗಳನ್ನು ಅರಿಯುವುದು; ಅದಕ್ಕೆ ತಕ್ಕಂತೆ ಆಗುವ ಬದಲಾವಣೆಗಳನ್ನು ಗುರುತಿಸುವುದು; ಮರ, ಗಿಡ, ಹಕ್ಕಿ, ಕೀಟ, ಸರೀಸೃಪ, ಮತ್ತು ಮನುಷ್ಯನ ಮೇಲಾಗುವ ಋತುಮಾನದ ಪರಿಣಾಮವನ್ನು ಅರಿಯುವುದು.

    (a) ವರ್ಷದ ವಿವಿಧ ಕಾಲಗಳಲ್ಲಿ ಬದಲಾಗುವ ಮರಗಳ ಬಣ್ಣಗಳು; ಎಲೆಗಳ ಉದುರುವಿಕೆ; ಗಿಡದ ಮುಖ್ಯ ಭಾಗಗಳು; ಎಲೆ, ಬೇರು ಮತ್ತು ಕಾಂಡಗಳ ನಡುವಿನ ವ್ಯತ್ಯಾಸವನ್ನು ಗುರುತಿಸುವುದು; ಭವಿಷ್ಯದ ಪೋಷಣಾ ಸತ್ವವನ್ನು ಅಡಗಿಸಿಟ್ಟುಕೊಂಡಿರುವ ಗಡ್ಡೆಗಳು; ಆಲೂಗಡ್ಡೆ ಮತ್ತು ಈರುಳ್ಳಿ.
    (b) ವಸಂತ ಕಾಲದಲ್ಲಿ ಮತ್ತು ಮಳೆಗಾಲದಲ್ಲಿ ಇರುವುದಕ್ಕಿಂತಲೂ ಚಳಿಗಾಲದಲ್ಲಿ ಕಡಮೆ ಸಂಖ್ಯೆಯಲ್ಲಿ ಇರುವ ಕೀಟಗಳು. ಮಳೆಗಾಲದಲ್ಲಿ ಕಡಮೆ ಇರುವ ಹಾವುಗಳು. ಚಳಿಗಾಲದಲ್ಲಿ ಇವುಗಳು ಎಲ್ಲಿ ಹೋಗುತ್ತವೆ?
    (c) ಮನುಷ್ಯ ಧರಿಸುವ ಬಟ್ಟೆಬರೆಗಳಲ್ಲಾಗುವ ಬದಲಾವಣೆಗಳು; ಚಳಿಯಿಂದ ಬಟ್ಟೆಬರೆಗಳು ಹೇಗೆ ರಕ್ಷಿಸುತ್ತದೆ.

3. ನಾವು ಸದಾಕಾಲ ಗಾಳಿಯಿಂದ ಸುತ್ತುವರಿದಿದ್ದೇವೆ; ಗಾಳಿ ಒಂದು ವಾಸ್ತವ ಪದಾರ್ಥ; ಮನುಷ್ಯನಿಗೆ ಉಸಿರಾಡಲು ಮತ್ತು ಬದುಕಲು ಗಾಳಿಯು ಅತ್ಯವಶ್ಯಕ; ಗಾಳಿ ಮಾರುತ (wind)ದಲ್ಲಿ ಮತ್ತು ನಮ್ಮ ಸುತ್ತ ಚಲನೆಯಲ್ಲಿದ್ದು ತರಗತಿಗಳ ಕೊಠಡಿಯಲ್ಲಿ ಚಲನೆಯಲ್ಲಿ ಇರುತ್ತದೆ.
4. ನೀರಿನ ಮೂಲಗಳು (ನದಿ, ಚಿಲುಮೆ, ಕೆರೆ, ಬಾವಿ); ನೀರಿನ ಪರಿಚಲನೆ; ಆವಿಯಾಗುವಿಕೆ, ಸೂರ್ಯ, ಮೋಡಗಳು, ಮಂಜು ಮತ್ತು ಮಳೆ; ಆವಿಯಾಗುವ ಪ್ರಕ್ರಿಯೆಯಲ್ಲಿ ನೀರು ಇಲ್ಲವಾಗುವುದರ ಅವಲೋಕನ.
5. ಬೆಂಕಿ ಉರಿಯಲು ಅನಿಲ ಅತ್ಯಗತ್ಯ; ಬೆಂಕಿಯ ವಿಷಯದಲ್ಲಿ ಎಚ್ಚರಿಕೆ ಅಗತ್ಯ; ಬಟ್ಟೆಗೆ ಬೆಂಕಿ ತಗುಲಿದರೆ ಓಡಬಾರದು.
6. ಸ್ವಚ್ಚತೆಯ ಅಭ್ಯಾಸಗಳನ್ನು ಬೆಳೆಸಿಕೊಳ್ಳಬೇಕು; ದೇಹ, ಮುಖ, ಕೈ, ಉಗುರು ಮತ್ತು ಹಲ್ಲುಗಳನ್ನು ಸ್ವಚ್ಚಗೊಳಿಸಿಕೊಳ್ಳಬೇಕು; ಹಲ್ಲುಜ್ಜುವ

ಕಡ್ಡಿಯ ಬಳಕೆ; ಬಟ್ಟೆಗಳನ್ನು ಶುಚಿ ಮಾಡುವುದು; ಹಳ್ಳಿಯಲ್ಲಿ ಸಿಗುವ ಅನೇಕ ಬಗೆಯ ವಸ್ತುಗಳನ್ನು ಬಳಸಿ ಶುಚಿಗೊಳಿಸುವುದು.

7. ಅನಾದಿ ಕಾಲದಿಂದಲೂ ಮನುಷ್ಯ ಹೇಗೆ ಸೂರ್ಯ, ಚಂದ್ರ, ಮತ್ತು ನಕ್ಷತ್ರಗಳನ್ನು ಗಮನಿಸುತ್ತಾ ಆ ಅರಿವನ್ನು ಕಾಲವನ್ನು ಅಳೆಯಲು ಮತ್ತು ದಿಕ್ಕನ್ನು ಕಂಡು ಹಿಡಿಯಲು ಬಳಸಿಕೊಳ್ಳುತ್ತಿದ್ದಾನೆ ಎನ್ನುವ ಬಗ್ಗೆ ಕಥೆಗಳು.

- ಹಾಗೆಯೇ ರೈತರು, ಪ್ರಯಾಣಿಕರು, ನಾವಿಕರು ಮತ್ತು ಸೇನಾ ಮುಖ್ಯಸ್ಥರು ಖಗೋಳಶಾಸ್ತ್ರದ ಅರಿವನ್ನು ಹೇಗೆ ಉಪಯೋಗಿಸಿಕೊಂಡರು ಎನ್ನುವುದರ ಬಗೆಗಿನ ಕಥೆಗಳು.
- ಸೂರ್ಯ ಮತ್ತು ಚಂದ್ರ ಹುಟ್ಟುವ ಮತ್ತು ಮುಳುಗುವ ವೇಳೆ. ಸೂರ್ಯ ಉದಯಿಸಿದಾಗ ಮಾಯವಾದ ನಕ್ಷತ್ರಗಳೇ ಸಂಜೆ ಸೂರ್ಯ ಮುಳುಗಿದ ಸ್ವಲ್ಪ ಹೊತ್ತಿನಲ್ಲಿ ಹುಟ್ಟುತ್ತವೆ ಎನ್ನುವುದನ್ನು ಮಗು ಗಮನಿಸುವಂತೆ ಮಾಡಬೇಕು.
- ಚಂದ್ರನ ತಿಂಗಳ ಪ್ರಯಾಣ; ಅರೆ ತಿಂಗಳು ಬೆಳಕು ಮತ್ತು ಅರೆ ತಿಂಗಳು ಕತ್ತಲು; ಯಾಕೆ?
- ಕಿಟಕಿಯಿಂದ ತೂರಿಬರುವ ಸೂರ್ಯನ ಕಿರಣಗಳು ಎದಿರು ಗೋಡೆಯ ಮೇಲೆ ಬೀಳುವುದನ್ನು ಗಮನಿಸಿ ಮುಂದಿನ ಸೂರ್ಯೋದಯ ಮತ್ತು ಸೂರ್ಯಾಸ್ತಮಾನಗಳ ನಿರ್ದಿಷ್ಟ ಸಮಯವನ್ನು ಗುರುತುಮಾಡಿಕೊಳ್ಳುವುದು. ಉತ್ತರಾಯಣ ಸಂಕ್ರಮಣ ಮತ್ತು ದಕ್ಷಿಣಾಯನ ಸಂಕ್ರಮಣ (22 ಡಿಸೆಂಬರ್ ಮತ್ತು 22 ಜೂನ್).
- ಧ್ರುವ ನಕ್ಷತ್ರ ಮತ್ತು ಸಪ್ತರ್ಷಿ ಮಂಡಲಗಳನ್ನು ಗಮನಿಸಿ ಉತ್ತರ ದಿಕ್ಕನ್ನು ಕಂಡುಹಿಡಿಯುವುದು.
- ವರ್ಷದಲ್ಲಿ ಸೂರ್ಯಗ್ರಹಣ ಮತ್ತು ಚಂದ್ರಗ್ರಹಣಗಳು ಸಂಭವಿಸುವ ಸಾಧ್ಯತೆಗಳಿದ್ದರೆ ಅವನ್ನು ಗಮನಿಸುವುದು.

(ವಿದ್ಯಾರ್ಥಿಗಳು ನಿಕಟವಾಗಿ ಗಮನಿಸುವುದನ್ನು ಪ್ರೋತ್ಸಾಹಿಸಬೇಕು. ಹೊರಸಂಚಾರಗಳನ್ನು ಆಗಾಗ್ಗೆ ಏರ್ಪಡಿಸಬೇಕು. ಯಾವುದೇ ವೀಕ್ಷಣೆಗೆ ಮುಂಚೆ ವಿದ್ಯಾರ್ಥಿಗಳಿಗೆ ಸೂಕ್ತ ಮಾಹಿತಿಯನ್ನು ಒದಗಿಸಿ ತಯಾರು ಮಾಡಿರಬೇಕು.)

# ತರಗತಿ

## II

1. ಈ ಕೆಳಗಿನವುಗಳನ್ನು ಗುರುತಿಸುವುದು:

    (a) ಸಾಮಾನ್ಯ ಆಕಾರ ಮತ್ತು ಗಾತ್ರ.
    (b) ಕಾಂಡ ಮತ್ತು ತೊಗಟೆಯ ಸಾಮಾನ್ಯ ಆಕಾರ.
    (c) ಎಲೆಯ ಸಾಮಾನ್ಯ ಆಕಾರ.
    (d) ಹೂವಿನ ಸಾಮಾನ್ಯ ಆಕಾರ, ಗಾತ್ರ, ಮತ್ತು ಬಣ್ಣ.
    (e) ಸುತ್ತಮುತ್ತಲಲ್ಲಿ ಸಾಮಾನ್ಯವಾಗಿ ಇರುವ ಕನಿಷ್ಠ ಐದು ಮರಗಳ ಹಣ್ಣು ಮತ್ತು ಬೀಜಗಳ ಆಕಾರ ಮತ್ತು ಗಾತ್ರ.

2. ಮೇಲೆ ಹೇಳಿದ (a) ನಿಂದ (e) ಅಂಶಗಳನ್ನು ಸುತ್ತಮುತ್ತಲಲ್ಲಿ ಸಾಮಾನ್ಯವಾಗಿ ಇರುವ ಕನಿಷ್ಠ ಯಾವುದಾದರೂ ಹತ್ತು ತರಕಾರಿ ಮತ್ತು ಬೆಳೆಗಳಿಗೆ ಅನ್ವಯಿಸಿ ಗುರುತಿಸುವುದು; ಬಿತ್ತುವ, ಮೊಳಕೆಯೊಡೆಯುವ ಮತ್ತು ಕುಯಿಲಿನ ಕಾಲಗಳ ಬಗ್ಗೆ ತಿಳುವಳಿಕೆ ಪಡೆದುಕೊಳ್ಳುವುದು.
3. ಸುತ್ತಮುತ್ತಲಲ್ಲಿ ಸಾಮಾನ್ಯವಾಗಿ ಕಾಣಸಿಗುವ 4 ಸಾಕುಪ್ರಾಣಿ ಮತ್ತು 3 ಕಾಡುಪ್ರಾಣಿಗಳ ಆಕಾರ, ಗಾತ್ರ, ಚಲನೆ, ಆಹಾರ ಮತ್ತು ಕೂಗುಗಳನ್ನು ಗುರುತಿಸುವುದು. ಕೊಳದ ಪ್ರಾಣಿಗಳು; ಕಪ್ಪೆ ಮತ್ತು ಮೀನು; ಅವುಗಳ ಉಸಿರಾಟ; ಮರಿಗಪ್ಪೆ ಕಪ್ಪೆಯಾಗುವ ಹಂತಗಳು.
4. ಹಕ್ಕಿಗಳು; ಸಾಮಾನ್ಯ ಆಕಾರ, ಗಾತ್ರ, ಬಣ್ಣ; ಹಾರುವ ರೀತಿ, ಗೂಡು ಕಟ್ಟುವಿಕೆ ಮತ್ತು ಪೋಷಣೆ; ಸಂತಾನೋತ್ಪತ್ತಿಯ ಕಾಲ; ಕಾಣಸಿಗುವ ಐದು ಪಕ್ಷಿ-ಮೊಟ್ಟೆಗಳ ಆಕಾರ, ಗಾತ್ರ ಮತ್ತು ಬಣ್ಣ; ಶಾಲಾ ಆವರಣದಲ್ಲಿ ಒಂದು ಪಕ್ಷಿಗಳು ನೀರು ಕುಡಿಯಲು ನೀರುಬುಗ್ಗೆಯನ್ನು ಮತ್ತು ಮೇಜನ್ನು ನಿರ್ಮಿಸುವುದು.
5. ಗಾಳಿಯಲ್ಲಿ ಧೂಳಿನ ಇರುವಿಕೆಯನ್ನು ಗಮನಿಸುವುದು; ಬೇಸಿಗೆಕಾಲದಲ್ಲಿ ಧೂಳಿನಿಂದ ಉಂಟಾಗುವ ಮಸುಕು; ಧೂಳಿನ ಬಿರುಗಾಳಿ; ಅರೆಗತ್ತಲೆಯ ಕೋಣೆಯಲ್ಲಿ ಸೂರ್ಯನ ಬೆಳಕಿನ ಕಿರಣವನ್ನು ಹಾಯಿಸಿ ಗಮನಿಸುವುದು; ಧೂಳಿನಿಂದ ಉಂಟಾಗುವ ಖಾಯಿಲೆಗಳು; ಧೂಳಿನಿಂದ ಆಗುವ ಅಪಾಯಗಳನ್ನು ತಡೆಯುವುದು ಹೇಗೆ.
6. ನೀರು: ಗಿಡ, ಪ್ರಾಣಿ ಮತ್ತು ಮನುಷ್ಯನ ಬದುಕಿಗೆ ನೀರಿನ ಅಗತ್ಯ; ಶುದ್ಧ ಮತ್ತು ಅಶುದ್ಧ ನೀರು; ನೀರಿನಿಂದ ಹರಡುವ ಸಾಮಾನ್ಯ ಸೋಂಕುಗಳು; ಹಳ್ಳಿ-ಬಾವಿ.

(ಮೇಲೆ ಹೇಳಿರುವ ಆರೂ ಅಂಶಗಳಿಗೆ ಸಂಬಂಧಪಟ್ಟಂತೆ ವಿದ್ಯಾರ್ಥಿ ಸ್ವತಃ ವೀಕ್ಷಿಸುವುದನ್ನು ಕಡ್ಡಾಯ ಮಾಡುವುದರ ಜೊತೆಗೆ ಅವರು ಏನನ್ನು ಗಮನಿಸಬೇಕು ಎಂಬುದರ ಬಗ್ಗೆ ಮಾರ್ಗದರ್ಶನ ಕೊಡಬೇಕು.)

7. ಮೂಗಿನ ಮೂಲಕ ಉಸಿರಾಟ; ತಾಜಾ ಗಾಳಿಯ ಮಹತ್ವ; ಸಕಾಲದಲ್ಲಿ ನಿದ್ರೆಗಳ ಬಗ್ಗೆ ಮಾರ್ಗದರ್ಶನ ಕೊಡುವುದು.
8. ದಿನ, ತಿಂಗಳು, ಮತ್ತು ವರ್ಷಗಳು ಅನಿಯಂತ್ರಿತ ಅಂಶಗಳಲ್ಲ. ಅವು ಖಗೋಳಶಾಸ್ತ್ರೀಯ ವಿದ್ಯಮಾನಗಳನ್ನು ಆಧರಿಸಿವೆ.

   - ಭೂಮಿ ತನ್ನ ಅಕ್ಷದ ಮೇಲೆ ಸುತ್ತುವ ಚಲನೆಯಿಂದ ದಿನ ಉಂಟಾಗುತ್ತದೆ; ದಿನವನ್ನು 24 ಗಂಟೆ ಅಥವಾ 60 ಗತಿಗಳಾಗಿ ವಿಭಾಗಿಸಲಾಗಿದೆ. ಗತಿ ಎನ್ನುವುದು ಹೆಚ್ಚು ಸಹಜವಾದ ಕಾಲಾಂಶ.
   - ಚಂದ್ರ ಭೂಮಿಯ ಸುತ್ತ ಬರುವ ಒಂದು ಸುತ್ತನ್ನು ತಿಂಗಳು ಎಂದು ಕರೆಯಲಾಗುತ್ತದೆ. ಅದು ಹುಣ್ಣಿಮೆಯಿಂದ ಹುಣ್ಣಿಮೆಗೆ ಅಥವಾ ಅಮವಾಸ್ಯೆಯಿಂದ ಅಮವಾಸ್ಯೆಗೆ ಇರುತ್ತದೆ. ತಿಂಗಳು ಹೆಚ್ಚುಕಮ್ಮಿ 30 ದಿನಗಳ ಕಾಲವಾಗಿರುತ್ತದೆ.
   - ಋತುಮಾನಗಳು: ಚಳಿ, ವಸಂತ, ಬೇಸಿಗೆ, ಮಳೆ ಮತ್ತು ಶರತ್ಕಾಲ.
   - ಸೂರ್ಯಗ್ರಹಣ ಮತ್ತು ಚಂದ್ರಗ್ರಹಣಗಳು ಹೇಗೆ ಉಂಟಾಗುತ್ತವೆ?

## ತರಗತಿ

## III

1. ಗಿಡಗಳಿಗೆ ಆಹಾರ, ನೀರು ಮತ್ತು ಸೂರ್ಯನ ಬೆಳಕಿನ ಅಗತ್ಯವಿದೆ.

   - ಸಮನಾದ ಪಟ್ಟೆಗಳಲ್ಲಿ ಬೇರೆ ಬೇರೆ ಗೊಬ್ಬರ, ನೀರಿನ ಮತ್ತು ಬೆಳಕಿನ ಪ್ರಮಾಣಗಳನ್ನು ಬಳಸಿದಾಗ ಸಿಗುವ ಫಲದಲ್ಲಿ ವ್ಯತ್ಯಾಸಗಳು.
   - ನೀರಿನ ಕರಗಿಸುವ ಗುಣ; ಗಿಡಗಳ ದ್ರವಣ ರೂಪದ ಆಹಾರ; ಬೇರು, ಕಾಂಡ, ಎಲೆ, ಹೂವು ಮತ್ತು ಬೀಜಗಳು ನಿರ್ವಹಿಸುವ ಕಾರ್ಯಗಳು.

2. ಬೀಜ ಮತ್ತು ಮೊಳಕೆಯೊಡೆಯುವಿಕೆ; ಕನಿಷ್ಠ 3 ಬೀಜಗಳನ್ನು ಈ ಕೆಳಗಿನ ಗುಂಪುಗಳಿಂದ ಆಯ್ದುಕೊಳ್ಳುವುದು:

   (a) ಜೋಳ, ಗೋಧಿ, ಬಾರ್ಲಿ
   (b) ಬಟಾಣಿ, ಹತ್ತಿ, ಕಾಳುಗಳು

(c) ಬೇವು, ಹರಳು

(ಏಕದಳ ಮತ್ತು ದ್ವಿದಳ ಬೀಜಗಳ ಹಾಗೂ ನೆಲದ ಒಳಗೆ ಮತ್ತು ನೆಲದ ಮೇಲೆ ಬೆಳೆಯುವ ಮೊಳಕೆ ಎಲೆಗಳ ನಡುವಿನ ವ್ಯತ್ಯಾಸವನ್ನು ತೋರಿಸುವ ಉದ್ದೇಶಕ್ಕೆ ಈ ಮೇಲಿನ ಆಯ್ಕೆಗಳು).

- ಬೀಜಪ್ರಸಾರದ ವಿಧಗಳು: ಗಾಳಿಯಿಂದ, ಪ್ರಾಣಿಗಳಿಂದ, ಹಣ್ಣಿನ ಸಿಡಿತದಿಂದ, ನೀರಿನಿಂದ.

3. ಕನಿಷ್ಠ ಮೂರು ಸಾಕು ಪ್ರಾಣಿಗಳ ಬಗ್ಗೆ ವಿವರವಾದ ಅರಿವು: ಹಸು, ಬೆಕ್ಕು, ನಾಯಿ ಮತ್ತು ಆ ಪ್ರಾಣಿಗಳು ತಮ್ಮ ಎಳೆಯ ಮರಿಗಳನ್ನು ಹೇಗೆ ಪಾಲಿಸುತ್ತವೆ.

   - ನಿಸರ್ಗದಲ್ಲಿರುವ ಪರಸ್ಪರ ಅವಲಂಬನ; ಸಸ್ಯಗಳನ್ನು ಅವಲಂಬಿಸಿರುವ ಪ್ರಾಣಿಗಳು; ಸಸ್ಯ ಮತ್ತು ಪ್ರಾಣಿಗಳನ್ನು ಅವಲಂಬಿಸಿರುವ ಮನುಷ್ಯ.

4. ಸುತ್ತಮುತ್ತಲಲ್ಲಿ ಇರುವ ಜೇಡ ಮತ್ತು ಕೀಟಗಳು; ಅವುಗಳನ್ನು ಗುರುತಿಸುವುದು; ಅವುಗಳ ಆಹಾರ, ಆಶ್ರಯ, ಮತ್ತು ಅಭ್ಯಾಸಗಳು; ನೊಣ; ಮೊಟ್ಟೆ, ಲಾರ್ವಾ ಅಥವಾ ಮರಿಹುಳದಿಂದ; ಪೊರೆಹುಳದಿಂದ ಹಾರುವ ಹಂತಕ್ಕೆ; ನೊಣ ಸಂತಾನೋತ್ಪತ್ತಿ ಮಾಡುವ ಜಾಗಗಳು; ಕೊಳೆಯ ವರದಿಗಾರನಾಗಿ ಮತ್ತು ರೋಗದ ವಾಹಕವಾಗಿ ನೊಣ; ಮನೆಯಲ್ಲಿ ಮುತ್ತಿಕೊಳ್ಳುವ ನೊಣಗಳನ್ನು ತೊಡೆದುಹಾಕುವುದು ಹೇಗೆ.
5. ಉಸಿರನ್ನು ಎಳೆದುಕೊಳ್ಳುವ ಮತ್ತು ಹೊರಗೆ ಬಿಡುವ ಪ್ರಕ್ರಿಯೆಗಳಲ್ಲಿನ ವ್ಯತ್ಯಾಸಗಳನ್ನು ತೋರಿಸುವ ಪ್ರಯೋಗಗಳು; ದಹನದ ಗುಣಗಳು; ಗಾಳಿಯಾಡುವಿಕೆಯ ಮಹತ್ವ.
6. ಶುದ್ಧ ಮತ್ತು ಅಶುದ್ಧ ನೀರು; ನೀರನ್ನು ಶುದ್ಧೀಕರಿಸುವ ಬಗೆ, ಬಸಿಯುವಿಕೆ, ಸೋಸುವಿಕೆ, ಮತ್ತು ಕುದಿಸುವಿಕೆ.
7. ಮನೆಯೊಳಗಿನ ಶುಚಿತ್ವ; ಮಲ, ಸಗಣಿ ಮತ್ತು ಹೊಲಸೆಲ್ಲವನ್ನೂ ಹೊರಗೆ ಸಾಗಿಸುವುದು; ಗೊಬ್ಬರಗಳಾಗಿ ಅವುಗಳ ಉಪಯೋಗ.
8. ಆರೋಗ್ಯಪೂರ್ಣ ಆಹಾರ ಮತ್ತು ಆರೋಗ್ಯಕರ ಸೇವಿಸುವ ಅಭ್ಯಾಸಗಳು; ಸರಿಯಾದ ನಿದ್ದೆ ಮತ್ತು ವ್ಯಾಯಾಮ.
9. (ಮೂರು ಮತ್ತು ನಾಲ್ಕನೇ ತರಗತಿಗಳಿಗೂ ವಿಸ್ತರಿಸುವುದು).

   - ಒಂದನೇ ತರಗತಿಯಲ್ಲಿ ಸಂಖ್ಯೆ 7, ಮತ್ತು ಎರಡನೇ ತರಗತಿಯಲ್ಲಿ ಸಂಖ್ಯೆ 8 ಅಂಶಗಳನ್ನು ಹೆಚ್ಚಿನ ವಿವರಗಳ ಸಮೇತ ವಿಸ್ತರಿಸುವುದು.
   - ಅತ್ಯಂತ ಮಹತ್ವದ ನಕ್ಷತ್ರದ ಗುಂಪುಗಳನ್ನು ಮತ್ತು ಅವುಗಳ ವಿಚಿತ್ರ ಆಕಾರಗಳನ್ನು ಗುರುತಿಸುವುದು.

- ವಿದ್ಯಾರ್ಥಿಗಳು ಅವುಗಳನ್ನು ವೀಕ್ಷಿಸಿ ಅವುಗಳ ಆಕಾರಗಳನ್ನು ಬರೆಯಲು ಉತ್ತೇಜಿಸುವುದು. ಅವರು ತಮಗೆ ಹೊಳೆದಂತೆ ನಕ್ಷತ್ರದ ಗುಂಪುಗಳನ್ನು ಮಾಡಲು ಪ್ರೋತ್ಸಾಹಿಸುವುದು.

## ತರಗತಿ

## IV

1. ಸಸ್ಯ ಜೀವಶಾಸ್ತ್ರ: ಎಲೆಗಳು ಉತ್ಸರ್ಜನೆ (ಹೆಚ್ಚಿನ ನೀರನ್ನು ವಾತಾವರಣಕ್ಕೆ ವಿಸರ್ಜಿಸುವ ಪ್ರಕ್ರಿಯೆ), ಉಸಿರಾಟ, ಮತ್ತು ಇಂಗಾಲವನ್ನು ಒಳಕ್ಕೆ ತೆಗೆದುಕೊಳ್ಳುವ (assimilation) ಅಂಗಗಳಾಗಿ ಕೆಲಸ ಮಾಡುವುದು.

    - ಬೇರುಗಳು ಮತ್ತು ಅವುಗಳು ನಿರ್ವಹಿಸುವ ಕಾರ್ಯಗಳು; ಬೇರುಗೂದಲುಗಳು, ನೀರು ಬೇರಿಗೆ ಸಾಗುವ ವಿಧಾನ.

2. ಹಳ್ಳಿಯ ಕೊಳ; ನೀರು ಹಕ್ಕಿಗಳು, ಅವುಗಳ ಆಹಾರ, ಆಶ್ರಯ, ಹಾಡುಗಳು; ಎಲ್ಲಿ ಮತ್ತು ಹೇಗೆ ಗೂಡು ಕಟ್ಟುತ್ತವೆ; ಅವುಗಳ ವಲಸೆ.
3. ಕೀಟ ಬದುಕು; ಸೊಳ್ಳೆ; ಮರಿಸೊಳ್ಳೆಯಿಂದ ಸೊಳ್ಳೆಗೆ; ಸೊಳ್ಳೆ ತರುವ ಅನಾರೋಗ್ಯ; ಸೊಳ್ಳೆಗಳ ಸಂತಾನೋತ್ಪತ್ತಿ ಎಲ್ಲಿ; ಮಲೇರಿಯಾ ಮತ್ತು ಅದನ್ನು ತಡೆಯುವ ಬಗೆ; ಹಳ್ಳಿಯ ಸಮುದಾಯಕ್ಕೆ ಮಲೇರಿಯಾದಿಂದ ಆಗುವ ನಷ್ಟ; ದುಂಬಿ ಮತ್ತು ಇರುವೆ; ಅವುಗಳಲ್ಲಿ ಕೆಲಸದ ವಿಭಜನೆ ಮತ್ತು ಅವುಗಳ ಸಾಮಾಜಿಕ ಸಂಘಟನೆ.
4. ಜೇಡ, ಚೇಳು ಮತ್ತು ಹಾವು; ಜೇಡಗಳ ವಿಶಿಷ್ಟ ಗುಣಗಳು; ಅವುಗಳನ್ನು ಕೀಟಗಳಿಂದ ಪ್ರತ್ಯೇಕಿಸಿ ನೋಡುವುದು ಹೇಗೆ; ಮನುಷ್ಯನಿಗೆ ಅವುಗಳಿಂದಾಗುವ ಉಪಯೋಗಗಳು; ಹಾನಿಕಾರಕ ಕೀಟಗಳ ನಾಶ.

    - ವಿಷಭರಿತ ಮತ್ತು ವಿಷರಹಿತ ಹಾವುಗಳು; ವ್ಯವಸಾಯಸ್ಥರಿಗೆ ವಿಷರಹಿತ ಹಾವುಗಳಿಂದಾಗುವ ಸಹಾಯ; ಚೇಳು ಮತ್ತು ಹಾವು ಕಚ್ಚಿದಾಗ ಮಾಡಬೇಕಾದ ಪ್ರಥಮ ಚಿಕಿತ್ಸೆ.

5. ಭೌತವಸ್ತುವಿನ ಮೂರು ರೂಪಗಳು: ಘನ, ದ್ರವ, ಮತ್ತು ಅನಿಲಗಳಾಗಿ ನೀರು; ಭಟ್ಟಿ ಇಳಿಸುವಿಕೆ ಮತ್ತು ಘನೀಕರಣ.
6. ಗಾಳಿ ಒಂದು ವಸ್ತು; ಅದು ಸ್ಥಳವನ್ನು ಆವರಿಸಿರುವ ಅನಿಲ; ಗಾಳಿಗೆ ತೂಕವಿದೆ ಮತ್ತು ಒತ್ತಡವನ್ನು ಉಂಟುಮಾಡಬಲ್ಲದು; ಅನಿಲ, ದ್ರವ ಮತ್ತು ಘನ ವಸ್ತುಗಳು ತಾಪಮಾನದಲ್ಲಿ ಬದಲಾವಣೆಯಾದರೆ ಸಂಕುಚಿಸುತ್ತವೆ ಅಥವಾ ವಿಕಸಿಸುತ್ತವೆ; ಆವಿ ತಣ್ಣಗಾಗುತ್ತದೆ - ಈ ಎಲ್ಲಾ ಅಂಶಗಳನ್ನು ಸಾಧಿಸಿ ತೋರಿಸಲು ಪ್ರಯೋಗಗಳನ್ನು ಮಾಡುವುದು.

7. ಮನುಷ್ಯ ಶರೀರಶಾಸ್ತ್ರ: ಉಸಿರಾಟ ಮತ್ತು ಪರಿಚಲನೆ; ಸಾಮಾನ್ಯ ಸೋಂಕು ಮತ್ತು ಸಾಂಕ್ರಾಮಿಕ ರೋಗಗಳು: ಕಾಲರಾ, ಪ್ಲೇಗ್, ಸಿಡುಬು ಮತ್ತು ಮಲೇರಿಯಾ; ಅವುಗಳ ಮೂಲ ಮತ್ತು ಹರಡುವುದನ್ನು ತಡೆಗಟ್ಟುವ ಬಗೆ.
8. ಮೂರನೇ ತರಗತಿಯ ಪಠ್ಯಕ್ರಮದಲ್ಲಿ ಸಂಖ್ಯೆ 9 ಅನ್ನು ಮುಂದುವರೆಸುವುದು.

## ತರಗತಿ

## V

1. ಸಸ್ಯ ಮತ್ತು ಪ್ರಾಣಿಯ ಬಗೆಗಿನ ಅರಿವಿನ ಸಾರಾಂಶವನ್ನು ಮತ್ತೆ ಗಮನಿಸಿ ಈ ಕೆಳಗಿನ ಅಂಶಗಳನ್ನು ಸೂಚಿಯಾಗಿಟ್ಟುಕೊಂಡು ಮುಂದುವರೆಸುವುದು:

   (a) ಹೂವು, ಅದರ ಭಾಗಗಳು ಮತ್ತು ನಿರ್ವಹಿಸುವ ಕಾರ್ಯಗಳು.
   (b) ಬೀಜ ಮತ್ತು ಹಣ್ಣು ರೂಪುಗೊಳ್ಳುವಿಕೆ.
   (c) ಹಣ್ಣು ಮತ್ತು ಬೀಜಗಳ ಪ್ರಸಾರ.
   (d) ಸಸ್ಯಗಳ ಪ್ರಸರಣ ವಿಧಾನಗಳು (ಕತ್ತರಿಸುವುದು, ಕಸಿ ಮಾಡುವುದು, ಪದರಾಗಿಸುವುದು, ಇತ್ಯಾದಿ).
   (e) ಬೀಜಪ್ರಸಾರದ ಪ್ರಕ್ರಿಯೆಯಲ್ಲಿ ಸಹಾಯವಾಗಿ ಒದಗುವ ಕೀಟ ಮತ್ತು ಪಕ್ಷಿಗಳು.
   (f) ವಿಷಭರಿತ ಮತ್ತು ವಿಷರಹಿತ ಹಾವುಗಳು; ಹಾವು ಮತ್ತು ನಾಯಿ ಕಚ್ಚಿದಾಗ ವಿಷವೇರುತ್ತಿರುವ ಸೂಚನೆಗಳು ಮತ್ತು ಸೂಕ್ತ ಪ್ರಥಮ ಚಿಕಿತ್ಸೆ.

2. ವಿವಿಧ ಬಗೆಯ ಆಹಾರ ಮತ್ತು ಅವುಗಳ ಪೌಷ್ಟಿಕ ಮೌಲ್ಯ; ಆಹಾರ ಜೀರ್ಣವಾಗುವಿಕೆ; ಜೀರ್ಣಾಂಗ ವ್ಯವಸ್ಥೆ; ಏನನ್ನು ತಿನ್ನಬೇಕು; ಯಾವಾಗ ತಿನ್ನಬೇಕು; ಎಲ್ಲರೂ ಕುಡಿಯಲು ಬಳಸುವ ಅದೇ ಲೋಟಾ ಮತ್ತು ಅದರ ಅಪಾಯಗಳು.
3. ಗಾಳಿ: ಅದರ ಸಂಯೋಜನೆ; ಕಲ್ಮಶಗಳು; ಅದರ ಶುದ್ಧೀಕರಣ; ಶುದ್ಧೀಕರಣದ ಪ್ರಕ್ರಿಯೆಯಲ್ಲಿ ಮರಗಳು ವಹಿಸುವ ಪಾತ್ರ; ಜನರಿಂದ ತುಂಬಿದ ಕೊಠಡಿಯಲ್ಲಿ ಗಾಳಿ; ಗಾಳಿಯಾಡುವಿಕೆ - ವಿಧಾನಗಳು; ಗಾಳಿಯ ಹರಿವು (draught - ಹೊಗೆಯ ಕೊಳವಿ ಮೊದಲಾದವುಗಳಲ್ಲಿಯ ವಾಯು ಪ್ರವಾಹ); ಗಾಳಿಯ ಒತ್ತಡ.
4. ನೀರು: ಅದರ ಸಂಯೋಜನೆ, ಕಲ್ಮಶಗಳು, ಅದರ ಶುದ್ಧೀಕರಣ; ಕಾಲರಾ, ಭೇದಿ, ಟೈಫಾಯಿಡ್ ಮತ್ತು ಅಶುದ್ಧ ನೀರಿನಿಂದ ಮನುಷ್ಯನ ಚರ್ಮದಡಿ

ಬಂದು ಸೇರಿಕೊಳ್ಳುವ ಗಿನಿಹುಳು (ನಾರುಹುಣ್ಣಿನ ಹುಳು); ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳು.

- ದ್ರಾವಣ; ಕರಗುವಿಕೆ, ಗರಿಷ್ಠ ಆರ್ದ್ರತೆಯನ್ನು ಹೊಂದಿದ ದ್ರಾವಣ, ಹರಳು.

5. ದಿಕ್ಸೂಚಿ; ಕಾಂತೀಯತೆ, ಆಯಸ್ಕಾಂತದ ಗುಣಲಕ್ಷಣಗಳು.
6. ಮಿಂಚು ಮತ್ತು ಗುಡುಗು, ಘರ್ಷಣೀಯ ವಿದ್ಯುಚ್ಛಕ್ತಿ, ಸರಳವಾದ ಪ್ರವಾಹ ವಿದ್ಯುತ್ ಕೋಶ.
7. ಸುಪ್ರಸಿದ್ಧ ವಿಜ್ಞಾನಿಗಳ ಕಥೆಗಳು, ಸತ್ಯಕ್ಕಾಗಿ ಅವರು ನಡೆಸಿದ ಹುಡುಕಾಟ.
8. ಸೌರವ್ಯೂಹ: ಒಂಭತ್ತು ಗ್ರಹಗಳು; ಧೂಮಕೇತುಗಳು, ಗ್ರಹಗಳು ಮತ್ತು ಅವುಗಳ ಉಪಗ್ರಹಗಳು, ಶನಿಗ್ರಹದ ಸುತ್ತ ಇರುವ ಬಳೆಗಳು, ರಾಶಿಚಕ್ರದ ಬೆಳಕು.

- ಚಂದ್ರನ ಮೇಲ್ಮೈ ಲಕ್ಷಣಗಳು; ಚಂದ್ರ ಭೂಮಿಗೆ ಅತಿ ಸಮೀಪದಲ್ಲಿ ಮತ್ತು ಅತಿ ದೂರದಲ್ಲಿ ಇರುವ ದಿನಗಳು.

## ತರಗತಿ

## VI & VII

- ಹಿಂದಿನ ತರಗತಿಗಳಲ್ಲಿ ಕಲಿತದ್ದೆಲ್ಲದರ ಸಂಪೂರ್ಣ ಮರುಸಮೀಕ್ಷೆ.
- ಆಮ್ಲ, ಕ್ಷಾರ, ಮತ್ತು ಲವಣಗಳ ಬಗೆಗಿನ ಅರಿವು. ಉದಾಹರಣೆಗಳನ್ನು ದಿನನಿತ್ಯದ ಬದುಕಿನಿಂದಲೇ ಪಡೆದುಕೊಳ್ಳುವುದು.
- ಮನುಷ್ಯ ದೇಹ, ಅದರ ಭಾಗಗಳು, ಮತ್ತು ನಿರ್ವಹಿಸುವ ಕಾರ್ಯಗಳ ಬಗ್ಗೆ ತುಲನಾತ್ಮಕವಾಗಿ ಸಂಪೂರ್ಣ ಜ್ಞಾನ. ಮನುಷ್ಯ ದೇಹವೆನ್ನುವುದು ಒಂದು ಭದ್ರವಾದ ಕೋಟೆ ಎನ್ನುವುದನ್ನು ಮನವರಿಕೆ ಮಾಡಿಕೊಡುವುದು.

  (a) ಹೊರಗಿನ ಗೋಡೆ: ಚರ್ಮ.
  (b) ಗೋಡೆಯ ಮೇಲಿನ ಕಾವಲುಗಾರರು: ಸಂವೇದನಾ ಅಂಗಗಳು - ದೃಷ್ಟಿ, ಶಬ್ದ, ವಾಸನೆ, ರುಚಿ, ಸ್ಪರ್ಶ.
  (c) ಕೋಟೆ:

    i. ಗಾಳಿ - ಉಸಿರಾಟ ವ್ಯವಸ್ಥೆ.

ii. ಸೂಚಕಗಳು (posters) - ಪರಿಚಲನೆ ವ್ಯವಸ್ಥೆ.
iii. ಆಹಾರ ಮತ್ತು ವಿತರಣೆ - ದೇಹ ಪೋಷಣೆ ವ್ಯವಸ್ಥೆ.
iv. ವಿಸರ್ಜನೆ ವ್ಯವಸ್ಥೆ - ಚರ್ಮ, ಮೂತ್ರಪಿಂಡ, ಉಸಿರು, ಕರುಳು.
v. ರಕ್ಷಣೆ - ಬ್ಯಾಕ್ಟೀರಿಯಾ.
vi. ಅಧಿಕಾರಿಗಳು ಮತ್ತು ಮಾಹಿತಿ ಸಂಗ್ರಾಹಕರು - ನರಮಂಡಲ.

- ಈ ಎರಡು ವರ್ಷಗಳಲ್ಲಿ ವಿಶೇಷವಾಗಿ ಆರೋಗ್ಯ ಶಿಕ್ಷಣಕ್ಕೆ ಒತ್ತು ನೀಡಬೇಕು; ಖಾಯಿಲೆ ಬಿದ್ದು ಆರೋಗ್ಯವನ್ನು ಮರಳಿ ಪಡೆಯುವುದಕ್ಕಿಂತಲೂ ಆರೋಗ್ಯವನ್ನು ಉಳಿಸಿ ಬೆಳೆಸಿಕೊಂಡು ಹೋಗುವುದಕ್ಕೆ ಆದ್ಯತೆ ಕೊಡಬೇಕು; ಆರೋಗ್ಯವನ್ನು ಉಳಿಸಿಕೊಳ್ಳುವುದು ವ್ಯಕ್ತಿಗತ ಹಾಗೂ ಸಾಮಾಜಿಕ ಕರ್ತವ್ಯ; ಸ್ವಚ್ಛ ಬದುಕು ಆರೋಗ್ಯಕರ ಬದುಕು; ಅನಾರೋಗ್ಯದ ಕಾರಣಗಳು; ಅಜ್ಞಾನ, ಬೇಜವಾಬ್ದಾರಿ, ಬಡತನ, ಸಂಯಮಹೀನ ಆಹಾರ, ಕುಡಿತ, ಕೆಲಸ ಮತ್ತು ಇಂದ್ರಿಯ ಭೋಗ.

  ಕ್ಷಯ, ಕುಷ್ಠರೋಗ: ಕಾರಣಗಳು, ಸೂಚನೆಗಳು ಮತ್ತು ತಡೆಯುವ ಕ್ರಮಗಳು; ಖಾಯಿಲೆಯಿಂದ ಉಂಟಾಗುವ ವ್ಯಕ್ತಿಗತ ಬಾಧೆ ಮತ್ತು ಸಾಮಾಜಿಕ ನಷ್ಟ; ಖಾಯಿಲೆಗಳನ್ನು ತಡೆಯಲು ಅವಶ್ಯಕವಾದ ವ್ಯಕ್ತಿಗತ ಎಚ್ಚರಿಕೆ ಮತ್ತು ಸಾಮಾಜಿಕ ನಿಯಂತ್ರಣ (ಈ ಎರಡು ವರ್ಷಗಳಲ್ಲಿ ವಿದ್ಯಾರ್ಥಿಗಳು ಹಳ್ಳಿಯಲ್ಲಿ ಸಕ್ರಿಯವಾಗಿ ಒಂದು ಆರೋಗ್ಯ ಅಭಿಯಾನವನ್ನು ಕೈಗೊಳ್ಳಬೇಕು).
- ಶಾಲೆ ಬಿಡುವ ಮುನ್ನ ಎಲ್ಲ ವಿದ್ಯಾರ್ಥಿಗಳು ಈ ಕೆಳಗಿನ ಅಭ್ಯಾಸಗಳನ್ನು ಹೊಂದಿರಬೇಕು:
  - ಪ್ರತಿನಿತ್ಯದ ಸ್ನಾನ
  - ಪ್ರತಿನಿತ್ಯದ ವ್ಯಾಯಾಮ
  - ತಾಜಾ ಗಾಳಿ ಸೇವನೆ
  - ಪ್ರತಿಯೊಂದರಲ್ಲಿ ಹಿತಮಿತವಾಗಿರುವುದು
  - ನಗುವುದು
- ಭೂಮಿ ಮತ್ತು ಭೂಮಿಯ ಮೇಲೆ ಜೀವನ ವಿಕಸನದ ಕಥೆಯನ್ನು ಸರಳವಾಗಿ ಮತ್ತು ಸ್ಥೂಲವಾಗಿ ನಿರೂಪಿಸುವುದು.
- ನೈಸರ್ಗಿಕ ಶಕ್ತಿಗಳ ಮೇಲೆ ಮನುಷ್ಯ ಸಾಧಿಸಿದ ಹಿಡಿತದ ಕಥೆಯನ್ನು ಸರಳವಾಗಿ ಮತ್ತು ಸಂಕ್ಷೇಪವಾಗಿ ಹೇಳುವುದು. ಹಾಗೆಯೇ ಖಾಯಿಲೆಗಳ ಮೇಲೆ ಸಾಧಿಸಿದ ನಿಯಂತ್ರಣ ಹಾಗೂ ಸಂಪರ್ಕ, ಸಂವಹನ ಮತ್ತು ಕೈಗಾರಿಕೆಗಳ ಕಥೆಗಳು.
- ಮನೆಯಲ್ಲಿರುವ ಸರಳ ಯಾಂತ್ರಿಕ ಸಾಧನಗಳು; ಸನ್ನೆ, ರಾಟೆ, ಮತ್ತು ತಿರುಪುಳ್ಳ ಸಾಧನಗಳು; ಲೋಲಕ, ಗಡಿಯಾರ, ಕೆಲಸ ಮತ್ತು ಕೆಲಸದ ಸಾಮರ್ಥ್ಯ; ಉಗಿಯಂತ್ರ; ಅಂತರ್ದಹನ ಯಂತ್ರಗಳು; ಕಾಂತೀಯತೆ

ಮತ್ತು ಕಾಂತೀಯ ಕ್ಷೇತ್ರದ ಪರಿಕಲ್ಪನೆಗಳು. ವಿದ್ಯುಚ್ಛಕ್ತಿ ಬ್ಯಾಟರಿ, ವಿದ್ಯುಚ್ಛಕ್ತಿ ಪ್ರವಾಹ, ಮತ್ತು ವಿದ್ಯುಚ್ಛಕ್ತಿ ಗಂಟೆ.

- ಗಾಯಗೊಂಡವರಿಗೆ ಪ್ರಥಮ ಚಿಕಿತ್ಸೆ: ತೂತುಗಾಯ, ಚುಚ್ಚುಗಾಯ, ತರಚುಗಾಯ, ಸುಟ್ಟಗಾಯ, ಮೂಗೇಟು, ನಾಯಿ ಮತ್ತು ಹಾವು ಕಚ್ಚು; ಮುರಿತ, ಕೀಲುತಪ್ಪುವುದು; ದಬ್ಬೆ ಕಟ್ಟುವುದು, ಬ್ಯಾಂಡೇಜು ಹಾಕುವುದು; ಕಣ್ಣು, ಕಿವಿ ಮತ್ತು ಮೂಗಿನಲ್ಲಿ ಪರಜೀವಿಗಳ ಪ್ರವೇಶ; ಮುಳುಗುವುದು; ಕೃತಕ ಉಸಿರಾಟ; ಗಾಯಾಗೊಂಡವರನ್ನು ಸಾಗಿಸುವುದು.
- ಕನಿಷ್ಠ ಐದು ಮಂದಿ ಸುಪ್ರಸಿದ್ಧ ವಿಜ್ಞಾನಿಗಳ ಬದುಕಿನ ಕಥೆಗಳು ಮತ್ತು "ಸತ್ಯದ ಅನ್ವೇಷಣೆಯಲ್ಲಿ ಅವರು ನಡೆಸಿದ ಪ್ರಯೋಗಗಳು".
- ಚಂದ್ರ ಭೂಮಿಯ ಸುತ್ತ ಸುತ್ತುವ ಪ್ರಕ್ರಿಯೆಯಲ್ಲಿ ಸಾಧಿಸಲಾಗುವ ಗುರುತ್ವಾಕರ್ಷಣೆಯ ನಿಯಮ. ಶುಕ್ರಗ್ರಹದ ಪ್ರಯಾಣ. ಉಲ್ಕೆಗಳು. ನೀಹಾರಿಕೆಗಳು.

    - ಖಗೋಳೀಯ ದೂರ - ಬೆಳಕಿನ ವರ್ಷಗಳು - ನಕ್ಷತ್ರಗಳ ದೂರಗಳು
    - ಪ್ರಕಾಶಮಾನತೆಯ ವರ್ಗಕ್ಕೆ ಸೇರಿದ ನಕ್ಷತ್ರಗಳು ಮತ್ತು ಅವುಗಳ ದೂರ
    - ಕ್ಷೀರಪಥ ಎಂದರೇನು?
    - ನೀಹಾರಿಕೆಗಳ ಆಕಾರಗಳು.
    - ಪಂಚಾಂಗ. ಸೌರಮಾನ ಪಂಚಾಂಗ ಮತ್ತು ಚಂದ್ರಮಾನ ಪಂಚಾಂಗ; ಅಧಿಕಮಾಸ; ಪೋಪ್ ಗ್ರೆಗರಿಯ ಸುಧಾರಣೆ. ಆಧುನಿಕ ಸುಧಾರಣಾ ಸಲಹೆಗಳು.
    - ಸೂರ್ಯನ ಸ್ಥಾನವನ್ನು ಆಧರಿಸಿ ದಿನದ ಕಾಲವನ್ನು, ನಕ್ಷತ್ರಗಳನ್ನು ಆಧರಿಸಿ ರಾತ್ರಿಯ ಕಾಲವನ್ನು ನಿಖರವಾಗಿ ಹೇಗೆ ಹೇಳುವುದು? ಹಾಗೆಯೇ ಚಂದ್ರನು ಹೆಚ್ಚುಕಡಿಮೆ (waxing and waning) ಯಾಗುವುದನ್ನು ನೋಡಿ ದಿನಾಂಕವನ್ನು, ತಾರಾಗಣದ ನಡುವಿನ ಚಂದ್ರನನ್ನು ಆಧರಿಸಿ ತಿಂಗಳನ್ನು ಮತ್ತು ರಾತ್ರಿಯ ಆಕಾಶವನ್ನು ಆಳುವ ಕೆಲವು ನಿರ್ದಿಷ್ಟ ನಕ್ಷತ್ರಗಳನ್ನು ನೋಡಿ ಋತುಮಾನವನ್ನು ಗುರುತಿಸುವ ಸಾಮರ್ಥ್ಯ.
    - ನಕ್ಷತ್ರಗಳನ್ನು ಆಧರಿಸಿ ದಿಕ್ಕನ್ನು ಕಂಡು ಹಿಡಿಯುವುದು ಹೇಗೆ.
    - ಆಧುನಿಕ ಸಾಧನೆಗಳು. ರೋಹಿತ ವಿಶ್ಲೇಷಣೆ ಎಂದರೇನು? ಉಜ್ಜಯಿನಿ, ಜೈಪುರ, ಸಿಕಂದರಾಬಾದ್, ಕೊಡೈಕೆನಾಲ್, ಗ್ರೆನಿಚ್ ಮತ್ತು ಮೌಂಟ್ ವಿಲ್ಸನ್‌ನಲ್ಲಿರುವ ವೀಕ್ಷಣಾಲಯಗಳು. ನಕ್ಷತ್ರಗಳ ಒಳಭಾಗದಲ್ಲಿ ಏನಿದೆ?

## ಚಿತ್ರಕಲೆ

## ತರಗತಿ

## I

ಪರಸ್ಪರ ವ್ಯತ್ಯಾಸಗಳಲ್ಲಿ ಬಣ್ಣಗಳನ್ನು ಗುರುತಿಸುವುದು - ಕೆಂಪು ಮತ್ತು ಹಸಿರು, ಹಳದಿ ಮತ್ತು ಕಪ್ಪು. ಹೂವು, ಮರ, ಹಣ್ಣು ಮತ್ತು ಹಕ್ಕಿಗಳ ಬಣ್ಣಗಳನ್ನು ಗುರುತಿಸುವುದು.

- ಬಣ್ಣಗಳ ಸರಿಯಾದ ಹೆಸರನ್ನು ಹೇಳುವುದು. ನೂರಚ್ಚಿನ (hectograph) ರೇಖಾಚಿತ್ರಗಳನ್ನು ಬಣ್ಣದಿಂದ ತುಂಬುವುದು.
- ಆಕಾರ ಮತ್ತು ಸಂಬಂಧಗಳ ಪರಿಕಲ್ಪನೆ.
- ನೀಲಿ ಆಕಾಶ ಮತ್ತು ಹಸಿರು ಹೊಲಗಳು: ಬಣ್ಣದ ಕಡ್ಡಿಗಳಿಂದ (crayons) ಬಣ್ಣವನ್ನು ತುಂಬಿ ನಂತರ ಬಣ್ಣದ ಕಾಗದದಲ್ಲಿ ಕತ್ತರಿಸುವುದು.
- ಬೇರೆ ಬೇರೆ ರೀತಿಯ ಎಲೆಗಳನ್ನು ಅಚ್ಚಿನಲ್ಲಿ ಮೂಡಿಸಿ ಅವುಗಳ ಆಕಾರದಲ್ಲಿನ ಪರಸ್ಪರ ವ್ಯತ್ಯಾಸಗಳನ್ನು ಗುರುತಿಸುವುದು - ಅರಳಿ ಎಲೆ ಮತ್ತು ಬಾಳೆ ಎಲೆ.
- ಸಾಮಾನ್ಯ ದೊಡ್ಡ ಗಾತ್ರದ ತರಕಾರಿ ಮತ್ತು ಹಣ್ಣುಗಳ ಆಕಾರಗಳು - ಕುಂಬಳ, ಬದನೆ, ಕ್ಯಾರೆಟ್, ಕಲ್ಲಂಗಡಿ, ಮಾವು.
- ಸುತ್ತ ಮುತ್ತ ನೋಡಿದ ವಸ್ತುಗಳ ಚಿತ್ರಗಳನ್ನು ನೆನಪಿನಿಂದಲೇ ಬರೆದು ಬಣ್ಣದ ಕಡ್ಡಿಗಳಿಂದ ಬಣ್ಣ ತುಂಬುವುದು.

### ಸೂಚನೆ

ಚಿತ್ರ ಬಿಡಿಸುವಾಗ ಸರಿಯಾದ ಭಂಗಿಯಲ್ಲಿ ಕೂತು ಇಡೀ ತೋಳನ್ನು ಚಲಿಸುವುದು ಅವಶ್ಯಕ ಎಂದು ಕಲಿಸಲು ಕಾಳಜಿ ವಹಿಸಬೇಕು.

## ತರಗತಿ

## II

ಚಿತ್ರ ಬಿಡಿಸುವುದನ್ನು ಪ್ರತಿದಿನದ ಕಲಿಕೆಯ ಭಾಗವಾಗಿಸಬೇಕು. ರೇಖಾಚಿತ್ರಗಳನ್ನು ಬಿಡಿಸುವಾಗ ಸಾಮಾನ್ಯವಾಗಿ ಕಪ್ಪು ಅಥವಾ ಕಂದು ಬಣ್ಣದ ಕಡ್ಡಿಯನ್ನು ಉಪಯೋಗಿಸಬೇಕು, ಸಾಧ್ಯವಾದರೆ ಬಣ್ಣದ ಕಡ್ಡಿಗಳನ್ನು ಬಳಸಬಹುದು. ಅಂಚುಗಳನ್ನು ತ್ರಿಕೋನ, ವರ್ತುಲ, ಅರೆವರ್ತುಲದಂತಹ ಸರಳ ವಿನ್ಯಾಸಗಳಿಂದ ಅಲಂಕರಿಸಬಹುದು. ಬಣ್ಣದ ಕಾಗದವನ್ನು

ಉಪಯೋಗಿಸಿ ಸರಳವಾದ ಹೂವುಗಳ ವಿನ್ಯಾಸಗಳನ್ನು ಕತ್ತರಿಸಬಹುದು ಅಥವಾ ಚಿತ್ರಬಿಡಿಸಬಹುದು.

- ನದಿ, ಮರ, ಹಕ್ಕಿ ಇತ್ಯಾದಿಗಳ ಭೂದೃಶ್ಯಗಳನ್ನು ಬಣ್ಣಗಳಲ್ಲಿ ಮಾತ್ರ ಮಾಡುವುದು.
- ಎಲೆಗಳಿರುವ ಮರಗಳನ್ನು ಕಾಗದದ ಮೇಲೆ ಬಿಡಿಸಿ ಕತ್ತರಿಸುವುದು.
- ಪ್ರಾಣಿಗಳನ್ನು ಅವುಗಳ ಬಣ್ಣವೂ ಸೇರಿದಂತೆ ಮತ್ತು ಎಲೆಸಹಿತ ತರಕಾರಿಗಳನ್ನು ಕಾಗದದ ಮೇಲೆ ಮೂಡಿಸುವುದು.
- ಬಿಡಿಸುವಾಗ ಸರಿಯಾದ ಭಂಗಿ ಮತ್ತು ಹಾಯಾದ ತೋಳಿನ ಚಲನೆಯನ್ನು ಅಭ್ಯಾಸ ಮಾಡುವುದು.

## ತರಗತಿ

## III

ಪಾಠಗಳಲ್ಲಿ ಮತ್ತು ಮನೆಯಲ್ಲಿ ನೋಡಿದ ವಸ್ತುಗಳನ್ನು ನೆನಪಿನ ಮೂಲಕವೇ ಬಿಡಿಸಲು ಪ್ರಯತ್ನಿಸುವುದು.

- ಮನೆಯ ಬದುಕಿನ ಚಿತ್ರಗಳು
- ಚಲನೆಯ ರೇಖೆಗಳನ್ನು ಬಳಸಿ ಮರ, ಮನೆ ಮತ್ತು ಪ್ರಾಣಿಗಳ ಚಿತ್ರಗಳನ್ನು ಬಿಡಿಸುವುದು.
- ಅಂಚುಗಳನ್ನು ಚೌಕ, ವರ್ತುಲ, ಆಯತದಂತಹ ಸರಳ ವಿನ್ಯಾಸಗಳಿಂದ ಅಲಂಕರಿಸಿ ಕಿತ್ತಳೆ, ಹಸಿರು ಮತ್ತು ನೇರಿಳೆಯಂತ ವಿವಿಧ ಬಣ್ಣಗಳನ್ನು ತುಂಬಬಹುದು.
- ಬಣ್ಣದ ಮಿಶ್ರಣ - ಕೆಂಪು ಮತ್ತು ನೀಲಿ, ನೀಲಿ ಮತ್ತು ಹಳದಿ, ಮತ್ತು ಕಂದು ಬಣ್ಣದ ಎರಡು ಛಾಯೆಗಳು.

## ತರಗತಿ

## IV

ಬಣ್ಣದಲ್ಲಿ ಕೆಲವು ಭೂದೃಶ್ಯ, ಹೂವು, ಎಲೆ ಮತ್ತು ಚಿಟ್ಟೆಗಳು.

- ನಿಸರ್ಗದ ಹತ್ತಿರ ಮತ್ತು ದೂರದ ದೃಷ್ಟಿಕೋನಗಳನ್ನು ಗ್ರಹಿಸಲು ಕಲಿಯುವುದು ಮತ್ತು ವಸ್ತುಗಳ ಚಿತ್ರಬಿಡಿಸುವುದು. ಹತ್ತಿರದ ಮರ ಮತ್ತು ದೂರದ ಮರದ ದೃಷ್ಟಿಕೋನವನ್ನು ನಿರೂಪಿಸುವುದು.

- ಜ್ಯಾಮಿತಿಯ ಆಕಾರಗಳ ಸಹಾಯದಿಂದ ಹೂವು, ಎಲೆಗಳನ್ನು ಒಂದು ಬಣ್ಣದಲ್ಲಿ ಮತ್ತು ಹಲವಾರು ಬಣ್ಣಗಳಲ್ಲಿ ಬಿಡಿಸುವುದು; ಪೂರಕ ಸಾಮರಸ್ಯ ಮತ್ತು ಸಾದೃಶ್ಯ ಸಾಮರಸ್ಯ.
- ಸ್ಥಳೀಯ ಸಂಪ್ರದಾಯಗಳ ಅಲಂಕಾರಿಕ ವಿನ್ಯಾಸಗಳನ್ನು ಮಾಡುವುದು (ಉದಾಹರಣೆಗೆ ರಂಗೋಲಿ, ಅಲ್ಪೋನ ಇತ್ಯಾದಿ).
- ಹಿನ್ನೆಲೆಗೆ ಪೂರಕವಾಗಿ ರೇಖಾಚಿತ್ರಗಳಿಗೆ ಚೌಕಟ್ಟುಗಳನ್ನು ರೂಪಿಸುವುದು.
- ಚಲಿಸುತ್ತಿರುವ ಮಕ್ಕಳು ಮತ್ತು ಪ್ರಾಣಿಗಳನ್ನು ರೇಖಾಚಿತ್ರಗಳಲ್ಲಿ ಮೂಡಿಸುವುದು. ಚಲನೆಯನ್ನು ತೋರಿಸಲು ಬೆಂಕಿಕಡ್ಡಿಗಳನ್ನು ಬಳಸಬಹುದು.
- ಸಾಮಾಜಿಕ ಅಧ್ಯಯನ ಅಥವಾ ಸಾಮಾನ್ಯ ವಿಜ್ಞಾನದ ಕೆಲವು ಪಾಠಗಳನ್ನು ತಂಡದ ಕಾರ್ಯವಾಗಿ ಪೋಸ್ಟರುಗಳ ಮೂಲಕ ನಿರೂಪಿಸುವುದು.

## ತರಗತಿ

## V

ಈ ಹಂತದಲ್ಲಿ ದೃಶ್ಯವನ್ನು ಸೂಕ್ಷ್ಮವಾಗಿ ವಿಶ್ಲೇಷಿಸುವುದು ಮತ್ತು ಪ್ರಾಮಾಣಿಕವಾಗಿ ದಾಖಲಿಸುವುದರ ಮೇಲೆ ಒತ್ತು ನೀಡಬೇಕು. ಹಿಂದಿನ ತರಗತಿಗಳಲ್ಲಿ ಕಲಿತಿದ್ದನ್ನು ಹೆಚ್ಚು ಕೂಲಂಕಷವಾಗಿ ಪುನರಾವರ್ತಿಸಬಹುದು.

- ಪ್ರಮಾಣ, ಯೋಜಿಸುವುದು, ವಸ್ತುಗಳ ಪರಸ್ಪರ ಸಂಬಂಧ, ಬಣ್ಣ, ಮೌಲ್ಯ ಮತ್ತು ದ್ರವ್ಯರಾಶಿಗಳ ಘನತ್ವ (massing i.e solidity of the mass (ರೇಖೆಗಳು ಅಥವಾ ಅಂಚುಗಳಿಗೆ ಒತ್ತು ನೀಡದೆ, ಛಾಯೆ ಅಥವಾ ಬಣ್ಣದ ದ್ರವ್ಯರಾಶಿಗಳಿಂದ ವಿಷಯದ ಘನತ್ವವನ್ನು ನಿರೂಪಿಸುವುದು) ಇವೆಲ್ಲವನ್ನು ಎಚ್ಚರದಿಂದ ಕಲಿತುಕೊಳ್ಳಬೇಕು.
- ಪ್ರಮಾಣಿತ ಛಾಯೆಗಳು, ಪ್ರಖರ ಮತ್ತು ತಂಪು ಬಣ್ಣಗಳು; ಬಣ್ಣಗಳ ವಿವರಗಳನ್ನೊಳಗೊಂಡ ಚಾರ್ಟುಗಳು; ನಿಸರ್ಗದ ಚಿತ್ರಗಳನ್ನು ಮಾಡುವಾಗ ಯಾವ ಬಣ್ಣ, ಎಷ್ಟು ಪ್ರಮಾಣದಲ್ಲಿ ಎಂಬ ವಿವರಗಳು.
- ಎಲೆಯ ವಿವಿಧ ಸ್ಥಿತಿಗಳು, ಎಲೆಗೊಂಚಲುಗಳು, ಬೀಜಕೋಶಗಳು - ಪೆನ್ಸಿಲ್ಲಿನಲ್ಲಿ, ಇಂಕಿನಲ್ಲಿ ಮತ್ತು ಬಣ್ಣದಲ್ಲಿ (ಗೋಡೆಯ ಮೇಲೆ ನೆರಳುಗಳನ್ನು ಮೂಡಿಸುವುದರ ಮೂಲಕ).
- ಪುಸ್ತಕದ ಹೊದಿಕೆಗಳಿಗೆ ಭೂದೃಶ್ಯಗಳು. ಘನವಸ್ತುಗಳ ಚಿತ್ರದ ಅಂಚುಗಳನ್ನು ಕಪ್ಪು ಬಣ್ಣದಲ್ಲಿ ಮೂಡಿಸುವುದು.
- ಸಾಮಾಜಿಕ ಅದ್ಯಯ£, ವಿಜ್ಞಾನ, ಮತ್ತು ಸಾಹಿತ್ಯದ ಪಾಠಗಳಿಗೆ ಸಚಿತ್ರ ನಿರೂಪಣೆಯನ್ನು ಒದಗಿಸುವುದು.

- ಕ್ರಿಯೆಯಲ್ಲಿ ಮಕ್ಕಳ ಮತ್ತು ಪ್ರಾಣಿಗಳನ್ನು ಗಮನಿಸಿ ಭಂಗಿ ಚಿತ್ರಗಳನ್ನು ಬಿಡಿಸುವುದು.
- ‘ಶಾಲಾ ವಾರ್ಷಿಕ ದಿನ’ಕ್ಕೆ ಪೋಸ್ಟರನ್ನು ಮಾಡುವುದು.

## ತರಗತಿ

## VI

ವಸ್ತುಗಳ ಚಿತ್ರಗಳನ್ನು ಬಿಡಿಸುವುದು ಮತ್ತು ವಿನ್ಯಾಸ ಮಾಡುವುದರ ಮುಂದುವರಿಕೆ.

- ಒಂದನೇ ತರಗತಿಯ ಮಕ್ಕಳಿಗೆ ಪ್ರಾಣಿಚಿತ್ರಗಳ ಪುಸ್ತಕವೊಂದನ್ನು ಮಾಡಿ ಯಾವುದಾದರೂ ಹಬ್ಬದ ಸಂದರ್ಭದಲ್ಲಿ ಅವರಿಗೆ ಕಾಣಿಕೆಯಾಗಿ ಕೊಡುವುದು.
- ಹಳ್ಳಿಯಲ್ಲಿ ಸಮಾಜ ಸೇವೆಯ ಅಭಿಯಾನಕ್ಕೆ ತಂಡದ ಕೆಲಸವಾಗಿ ಪೋಸ್ಟರುಗಳನ್ನು ಮಾಡುವುದು.
- ಪ್ರಮಾಣಕ್ಕೆ ತಕ್ಕಂತೆ ಚಿತ್ರ ಬಿಡಿಸುವುದು; ಎರಡು ಆಯಾಮದ ಚಪ್ಪಟೆ ಪ್ರಮಾಣಗಳನ್ನು ಬಿಡಿಸುವುದು (plane (2 dimensional) scale); ಕಟ್ಟುವಾಗ ಪ್ರಮಾಣಗಳ ಬಳಕೆ; ಚಪ್ಪಟೆಯ ರೇಖಾಚಿತ್ರಗಳನ್ನು ಹಿಗ್ಗಿಸುವುದು, ಕುಗ್ಗಿಸುವುದು ಮತ್ತು ನಕಲು ಮಾಡುವುದು.

## ತರಗತಿ

## ಗII

ವಸ್ತುಗಳ ಚಿತ್ರಗಳ ಬಿಡಿಸುವ ಮತ್ತು ವಿನ್ಯಾಸವನ್ನು ಮಾಡುವುದರ ಮುಂದುವರಿಕೆ.

- ನಾಲ್ಕು ಭೂದೃಶ್ಯಗಳ ಪುಸ್ತಕವನ್ನು ಮಾಡಿ, ಶೀರ್ಷಿಕೆಯ ಪುಟವನ್ನು ಬಣ್ಣದ ವಿನ್ಯಾಸದಿಂದ ಸುಂದರವಾಗಿಸಿ ಎರಡನೆಯ ತರಗತಿಯ ಮಕ್ಕಳಿಗೆ ಕಾಣಿಕೆಯಾಗಿ ಕೊಡುವುದು.
- ಹಳ್ಳಿಯಲ್ಲಿ ಸಮಾಜ ಸೇವೆಯ ಅಭಿಯಾನಕ್ಕೆ ಪೋಸ್ಟರುಗಳನ್ನು ಮಾಡುವುದು.

- ನಕಾಶೆಗಳು, ಸರಳವಾದ ಘನವಸ್ತುಗಳ ಭಾಗಗಳು ಮತ್ತು ಚಪ್ಪಟೆ ನಕಾಸೆಗಳು (elevation).
- ಕರಕೌಶಲ್ಯ ತರಗತಿಯಲ್ಲಿ ವಸ್ತುಗಳ ಭಾಗಗಳನ್ನು ಮಾಡುವುದು ಮತ್ತು ರೇಖಾಚಿತ್ರಗಳನ್ನು ತಯಾರಿಸುವುದು.
- ಒಂದು, II ಮತ್ತು III ತರಗತಿಗಳ ಮಕ್ಕಳು ಸಾಧ್ಯವಾದಷ್ಟೂ ಬಣ್ಣಗಳನ್ನು ಉಪಯೋಗಿಸಬೇಕು; ಕಪ್ಪು ಮತ್ತು ಬಿಳಿಯ ಬಣ್ಣಗಳನ್ನು ನಂತರ ಪರಿಚಯಿಸಬಹುದು. ಒಳ್ಳೆಯ ವಿನ್ಯಾಸದ ನಕಲನ್ನು ತೆಗೆಯುವುದು (ಟ್ರೇಸಿಂಗ್) ಮತ್ತು ಚಿತ್ರಗಳನ್ನು ಬಿಡಿಸುವುದು ಏಳು ತರಗತಿಗಳ ವರ್ಷದುದ್ದಕ್ಕೂ (ತರಗತಿ I ರಿಂದ ೧II) ಮುಂದುವರಿಯಬೇಕು.

## ನೂಲುವ ಮತ್ತು ನೇಯುವ ಮೂಲ ಕರಕೌಶಲ್ಯಗಳ ಜೊತೆ ಸಂಭವನೀಯ ಸಹಸಂಬಂಧಗಳು

ನಾವು ಸೂಚಿಸಿರುವ ಪಠ್ಯಕ್ರಮದ ಅಂಶಗಳನ್ನು ಮಗುವಿನ ಬದುಕು ಮತ್ತು ವಾತಾವರಣಕ್ಕೆ ಆಪ್ತವಾಗಿ ತಳುಕು ಹಾಕಿಕೊಂಡಿರುವಂತೆ ಮಾಡಲು ನಾವು ಪ್ರಯತ್ನಿಸಿದ್ದೇವೆ. ಹಾಗಾಗಿ ಅವು ನಿಕಟವಾದ ಸಹಸಂಬಂಧವನ್ನು ಹೊಂದಿರುತ್ತವೆ. ನಾವು ಮಗುವಿಗೆ ಶಿಕ್ಷಣದ ಸಂಪೂರ್ಣ ಪ್ರಕ್ರಿಯೆಯನ್ನು ನೈಜವಾಗಿಸಲು ಕಾಳಜಿ ಹೊಂದಿರುವುದರಿಂದ ಕರಕೌಶಲ್ಯವನ್ನು ಶಿಕ್ಷಣದ ಕೇಂದ್ರವನ್ನಾಗಿ ಮಾಡಿದ್ದೇವೆ ಮತ್ತು ವಾಸ್ತವದ ಕಲಿಕೆಯ ಸನ್ನಿವೇಶಗಳನ್ನು ಒದಗಿಸಲು ಪ್ರಯತ್ನಿಸಿದ್ದೇವೆ. ಹಾಗಾಗಿ, ಈ ಇಡೀ ಪಠ್ಯಕ್ರಮವನ್ನು ನಾವು ಮೂರು ಪ್ರಧಾನ ಅಂಶಗಳನ್ನು ಆಧರಿಸಿ ರೂಪಿಸಿದ್ದೇವೆ: ಮಗುವಿನ ಸಾಮಾಜಿಕ ಮತ್ತು ಭೌತಿಕ ವಾತಾವರಣ ಹಾಗೂ ಅವೆರಡನ್ನೂ ಒಟ್ಟಿಗೆ ತಳುಕು ಹಾಕಬಲ್ಲ ಮೂಲ ಕರಕೌಶಲ್ಯ. ಕಲಿಕೆಯ ಹೆಚ್ಚಿನ ಮಟ್ಟಿನ ವಿಷಯವಸ್ತುವು ಹೇಗೆ ಮಗುವಿನ ಮೂಲ ಕರಕೌಶಲ್ಯದ ಚಟುವಟಿಕೆಗಳ ಅವಿಭಾಜ್ಯ ಅಂಗವಾಗಬಹುದು ಎಂದು ತೋರಿಸಲು ಪಠ್ಯಕ್ರಮದ ವಿವಿಧ ಅಂಶಗಳನ್ನು ಪ್ರತಿಯೊಂದು ತರಗತಿಯ ಮೂಲ ಕರಕೌಶಲ್ಯದೊಂದಿಗೆ ಸಹಸಂಬಂಧಿಸಬಹುದಾದ ಸಾಧ್ಯತೆಗಳನ್ನು ಈ ಕೆಳಗೆ ನಾವು ಸೂಚಿಸಲು ಪ್ರಯತ್ನಿಸಿದ್ದೇವೆ.

ಆವರಣ ಚಿಹ್ನೆಗಳ ನಡುವೆ ಇರುವ ಸಂಖ್ಯೆಗಳು ವಿವಿಧ ತರಗತಿಗಳ ಮೂಲ ಪಠ್ಯಕ್ರಮದ ಅಂಶಗಳನ್ನು ಸೂಚಿಸುತ್ತವೆ.

ಉಳಿದ ಎರಡು ಕೇಂದ್ರಗಳೊಂದಿಗೆ ಅಂದರೆ ಸಾಮಾಜಿಕ ಮತ್ತು ಭೌತಿಕ ವಾತಾವರಣದ ನಡುವಿನ ಸಹಸಂಬಂಧವನ್ನು ಸಾಮಾಜಿಕ ಅಧ್ಯಯನ ಮತ್ತು ಸಾಮಾನ್ಯ ವಿಜ್ಞಾನದ ಪಾಠಗಳು ಕಲಿಸುವುದರಿಂದ ಅದನ್ನು ಪ್ರತ್ಯೇಕವಾಗಿ ಸೂಚಿಸುವ ಅವಶ್ಯಕತೆ ಇರುವುದಿಲ್ಲ.

## ತರಗತಿ

## I

### ಗಣಿತ

ಸುರುಳಿ ರಾಟೆಯ ಸುತ್ತ ನೂಲು ಹುರಿಯನ್ನು ಸುತ್ತುವ ಸಂಖ್ಯೆಗಳನ್ನು ಎಣಿಸುವುದು; ನೂಲಲೆಂದು ಕೊಡುವ ಪಟ್ಟಿಗಳ ಲೆಕ್ಕ ಮಾಡುವುದು; ತಕಲಿ, ರಾಟೆ ಇತ್ಯಾದಿ ನೂಲುವ ಉಪಕರಣಗಳ ಸಂಖ್ಯೆಯನ್ನು ಲೆಕ್ಕ ಹಾಕುವುದು.

- ದಶಾಂಶ ಪದ್ಧತಿಯನ್ನು ಕೈಬೆರಳುಗಳನ್ನು ಎಣಿಸುವ ಮೂಲಕ, ತಕಲಿ, ರಾಟೆ ಮತ್ತು ನೂಲಿನ ಲಡಿ ಇತ್ಯಾದಿ ವಸ್ತುಗಳನ್ನು ಹತ್ತರಂತೆ ಎಣಿಸುವುದರ ಮೂಲಕ ಕಲಿಯಬಹುದು; ಹಾಗೆಯೇ, ಕವಾಯತು ಮಾಡುವ ಮಕ್ಕಳನ್ನು ಹತ್ತರ ಸಾಲಿನಲ್ಲಿ ನಿಲ್ಲಿಸಿ ನೂಲಿನ ಪಟ್ಟಿಗಳನ್ನು ಹತ್ತರ ಲೆಕ್ಕದಲ್ಲಿ ಗಂಟು ಕಟ್ಟಿ ನೀಡುವುದು, ಇತ್ಯಾದಿ.
- ಸಂಕಲನದ ಕೋಷ್ಟಕಗಳನ್ನು ನೂಲುವ ಸ್ಪರ್ಧೆಯಲ್ಲಿ ಸ್ಕೋರಿನ ಲೆಕ್ಕ ಇಡುವುದರ ಮೂಲಕ ರಚಿಸಲು ಅನುವು ಮಾಡಬಹುದು. ಬೇರೆ ಬೇರೆ ವಸ್ತುಗಳನ್ನು ಎಣಿಸುವುದು ಮತ್ತು ಎಲ್ಲವನ್ನೂ ಗುಡ್ಡೆ ಹಾಕಿ ಎಣಿಸಲು ಹೇಳುವುದು ಇತ್ಯಾದಿ.
- ಹಾಗೆಯೇ ವ್ಯವಕಲನದ ಕೋಷ್ಟಕಗಳನ್ನು ನೂಲುಲು ಕೊಟ್ಟ ಪಟ್ಟಿಗಳು ಮತ್ತು ನೂತ ಮೇಲೆ ಉಳಿದಿರುವ ಪಟ್ಟಿಗಳನ್ನು ಎಣಿಸುವ ಮೂಲಕ ರೂಪಿಸಬಹುದು.
- ನೂಲಲು ಕೊಟ್ಟ ದಾರದ ಉದ್ದವನ್ನು ಅಳೆಯುವುದು ಮತ್ತು ಪಟ್ಟಿಗಳ ತೂಕವನ್ನು ಅಳೆಯುವುದು ಮಕ್ಕಳಿಗೆ ಗಣಿತದ ಪರಿಕಲ್ಪನೆಗಳ ಅರಿವನ್ನು ನೀಡುತ್ತದೆ. ಉದಾಹರಣೆಗೆ, ಅಳತೆಯ ಘಟಕಗಳು, ನೇರ ಗೆರೆ ಮತ್ತು ಬಾಗಿದ ಗೆರೆ, ಇತ್ಯಾದಿ.

### ವಿಶೇಷ ಸೂಚನೆ

ನೂಲುವ ಮತ್ತು ಸುತ್ತುವ ಚಟುವಟಿಕೆಯಲ್ಲಿ 160 ರ ತನಕದ ಸಂಖ್ಯೆಗಳನ್ನು ಎಣಿಸುವುದು ಮತ್ತು ಬರೆಯುವುದು ಅವಶ್ಯಕ. ಏಕೆಂದರೆ

160 ಸುತ್ತು ಒಂದು ಲಡಿಯಾದರೆ 16 ಸುತ್ತುಗಳು ಒಂದು ಕಲಿ ಆಗುತ್ತವೆ. ಒಂದು ಸುತ್ತು ಎಂದರೆ ನಾಲ್ಕು ಅಡಿ, ಒಂದು ತಾನ್ (a thaan).

## ಸಾಮಾಜಿಕ ಅಧ್ಯಯನ

ಪ್ರಾಚೀನ ಕಾಲದ ಗಂಡು ಹೆಣ್ಣುಗಳು ಮೈ ಮುಚ್ಚಿಕೊಳ್ಳಲು ಏನು ಬಳಸುತ್ತಿದ್ದರು? - ಎಲೆ, ತೊಗಟೆ, ಪ್ರಾಣಿಗಳ ಚರ್ಮ ಕ್ರಮೇಣವಾಗಿ ಮರ, ಹತ್ತಿ ಮತ್ತು ರೇಶ್ಮೆಗೆ ಹಾದಿ ಮಾಡಿಕೊಟ್ಟಿತ್ತು. (I b .).

- ಬೇರೆ ಬೇರೆ ಭೂಪ್ರದೇಶಗಳ ಜನರು ಬಳಸುತ್ತಿದ್ದ ಉಡುಪುಗಳು - ಅರಬ್, ಎಸ್ಕಿಮೊ, ಆಫ್ರಿಕನ್ ಪಿಗ್ಮಿ. ಚಳಿ ಮತ್ತು ಉಷ್ಣ ಪ್ರದೇಶಗಳ ಜನರ ಉಡುಪುಗಳು. ಬಟ್ಟೆಗಳ ಸ್ವಚ್ಛತೆ.

## ಸಾಮಾನ್ಯ ವಿಜ್ಞಾನ

ಹತ್ತಿಗಿಡದ ವಿವಿಧ ಭಾಗಗಳು ಮತ್ತು ಅವು ನಿರ್ವಹಿಸುವ ಕಾರ್ಯಗಳು, ಋತುಮಾನಕ್ಕೆ ತಕ್ಕಂತೆ ಬದಲಾಗುವ ಮನುಷ್ಯನ ಉಡುಪು. ಮನುಷ್ಯನ ಬಟ್ಟೆ ಚಳಿಯಿಂದ ಮತ್ತು ಬಿಸಿಲಿನ ತಾಪದಿಂದ ಹೇಗೆ ರಕ್ಷಿಸುತ್ತದೆ? ಗಾಳಿಯಲ್ಲಿರುವ ಆರ್ದ್ರತೆ ಹತ್ತಿಯನ್ನು ಹಿಂಜಿ ಎಳೆ ಬಿಡಿಸುವ ಮತ್ತು ನೂಲುವುದರ ಮೇಲೆ ಯಾವ ಪರಿಣಾಮವನ್ನು ಬೀರುತ್ತದೆ? ಹತ್ತಿಯನ್ನು ಬಿಡಿಸಲು ಬೆಳಗಿನ ಕಾಲ ಸೂಕ್ತ. ಹತ್ತಿ ಬೀಜ ಮೊಳಕೆಯೊಡೆಯುವಿಕೆ.

## ಚಿತ್ರಕಲೆ

ಹತ್ತಿಯ ಗಿಡ, ಹೂವು, ಮತ್ತು ಬೀಜಕೋಶದ ಚಿತ್ರ ಬಿಡಿಸುವುದು.

## ಮಾತೃಭಾಷೆ

ಕರಕೌಶಲ್ಯಕ್ಕೆ ಸಂಬಂಧಪಟ್ಟಂತೆ ಬಳಸುವ ಉಪಕರಣಗಳ ಹೆಸರುಗಳು; ಹತ್ತಿಯನ್ನು ಬಿಡಿಸುವ, ಹಿಂಜಿ ಎಳೆಯನ್ನು ಬಿಡಿಸುವ, ಮತ್ತು ತಕಲಿಯಲ್ಲಿ ನೂಲುವ ವಿವಿಧ ಪ್ರಕ್ರಿಯೆಗಳ ವಿವರಣೆಗಳು; ನೂಲುವುದಕ್ಕೆ ಸಂಬಂಧಪಟ್ಟಂತೆ ಕುಯಿಲಿನ ಹಾಡುಗಳು ಮತ್ತು ಜಾನಪದ ಗೀತೆಗಳು.

# ತರಗತಿ

# II

## ಗಣಿತ

640 ಸುತ್ತುಗಳು ಸೇರಿದರೆ ಒಂದು ಗೂಂದಿಯಾಗುವುದರಿಂದ ನೂಲುವ ಮತ್ತು ಸುರುಳಿ ಸುತ್ತುವ ಚಟುವಟಿಕೆಗಳಲ್ಲಿ ಮಕ್ಕಳಿಗೆ ಹೆಚ್ಚಿನ ಸಂಖ್ಯೆಗಳ ಅರಿವು ಮುಖ್ಯ.

- ಸಂಕಲನ ಮತ್ತು ವ್ಯವಕಲನದ ಕೋಷ್ಟಕಗಳನ್ನು ನೂಲುವ ಮತ್ತು ಸುರುಳಿ ಸುತ್ತುವ ಮಾಡಿ-ಕಲಿ ಕೆಲಸದ ಮೂಲಕ ಮತ್ತು ನೂಲು ಮತ್ತು ಪಟ್ಟಿಗಳ ತಯಾರಿಕೆಯಲ್ಲಿ ಎಣಿಕೆಯ ಚಟುವಟಿಕೆಗಳ ಮೂಲಕ ಮಾಡುವುದು. ನೂಲುವ ಮತ್ತು ಸುತ್ತುವ 'ಮಾಡಿ-ಕಲಿ' ಚಟುವಟಿಕೆಗಳಲ್ಲಿ ಕೂಡುವ ಮತ್ತು ಕಳೆಯುವ ಸರಳವಾದ ಸಮಸ್ಯೆಗಳನ್ನು ಕೊಡುವುದು.
- ಮೂಲ ಕರಕೌಶಲ್ಯಕ್ಕೆ ಸಂಬಂಧಪಟ್ಟಂತೆ ಅಳೆಯುವ ಮತ್ತು ತೂಕ ಮಾಡುವ ಅಭ್ಯಾಸಗಳು ಮುಂದುವರಿಯಬೇಕು. ಅವು ಸ್ಥಳೀಯವಾಗಿ ಮತ್ತು ಸಾಮಾನ್ಯವಾಗಿ ಬಳಸುವ ಉದ್ದ, ತೂಕ ಮತ್ತು ಹಣದ ಪ್ರಮಾಣಗಳನ್ನು ಮಕ್ಕಳಿಗೆ ಪರಿಚಯಿಸುತ್ತವೆ.
- ಮಕ್ಕಳು ಹತ್ತು, ಐದು ಮತ್ತು ಎರಡರಂತೆ ಎಣಿಸುವಾಗ ಗುಣಿತದ ಮಗ್ಗಿಯನ್ನು ರಚಿಸಿಕೊಳ್ಳುವುದು.

## ಸಾಮಾಜಿಕ ಅಧ್ಯಯನ

ಆಧುನಿಕ ಕಾಲದಲ್ಲಿ ಗಂಡಸರು ಮತ್ತು ಹೆಂಗಸರ ಉಡುಪು (1),

- ಪ್ರಾಚೀನ ಕಾಲದ ಜನರ ಉಡುಪು (2),
- ದೂರದ ನಾಡುಗಳ ಜನರ ಉಡುಪು (3).
- ಹಳ್ಳಿಯಲ್ಲಿ ಬೇರೆ ಬೇರೆ ವರ್ಗದವರು ತೊಡುವ ಉಡುಪು (ಅತೀ ಕಡಮೆ, ಅತೀ ಹೆಚ್ಚು; ಸ್ವದೇಶಿ, ವಿದೇಶಿ) ಮತ್ತು ಉಡುಪುಗಳ ಶೈಲಿಗಳು.

## ಸಾಮಾನ್ಯ ವಿಜ್ಞಾನ

ಹತ್ತಿ ಗಿಡದ ಆಕಾರ ಮತ್ತು ಗಾತ್ರ (II); ಹತ್ತಿ ಗಿಡದ ಕಾಂಡ ಮತ್ತು ತೊಗಟೆ; ಹತ್ತಿ ಗಿಡದ ಎಲೆಯ ಆಕಾರ; ಹತ್ತಿ ಹೂವಿನ ಆಕಾರ, ಗಾತ್ರ ಮತ್ತು ಬಣ್ಣ; ಹತ್ತಿ ಬೀಜ; ಉತ್ತುವ ಮತ್ತು ಕುಯಿಲಿನ ಸಮಯ ಹಾಗೂ ಮೊಳಕೆಯೊಡೆಯುವ ಕಾಲ (Ⅱ); ಧೂಳು ಕಿವಿಯ ಒಳಗೆ ಹೋಗದಂತೆ ಕಿವಿಬೆಂಡು.

## ಚಿತ್ರ ಬಿಡಿಸುವುದು

ಹತ್ತಿ ಗಿಡ ಮತ್ತು ಹತ್ತಿ ಹೂವಿನ ಚಿತ್ರ ಬಿಡಿಸುವುದು.

## ಮಾತೃಭಾಷೆ

ಕರಕೌಶಲ್ಯದ ಕೆಲಸಕ್ಕೆ ಸಂಬಂಧಪಟ್ಟ ಪ್ರಕ್ರಿಯೆಗಳ ಮೌಖಿಕ ವಿವರಣೆ. ಸಾಮಾಜಿಕ ಅದ್ಯಯನ ಮತ್ತು ಸಾಮಾನ್ಯ ವಿಜ್ಞಾನದ ತರಗತಿಗಳಲ್ಲಿ ನೀಡಲಾಗುವ ಓದುವ ಪುಸ್ತಕದಲ್ಲಿ ಈ ಮೇಲಿನ ವಿಷಯಕ್ಕೆ ಸಂಬಂಧಪಟ್ಟ ಪಾಠಗಳಿರಬೇಕು.

- ಕರಕೌಶಲ್ಯದ ಉಪಕರಣಗಳ (ನಾಮಪದಗಳು) ಮತ್ತು ಪ್ರಕ್ರಿಯೆಗಳ (ಕ್ರಿಯಾಪದಗಳು) ಹೆಸರುಗಳನ್ನು ಬರೆಯುವುದು; ಅವುಗಳ ಬಗ್ಗೆ ಚಿಕ್ಕ ಚಿಕ್ಕ ವಾಕ್ಯಗಳನ್ನು ರಚಿಸುವುದು.

## ತರಗತಿ

## III

## ಗಣಿತ

ಈ ಕೆಳಗಿನವಕ್ಕೆ ಸಂಬಂಧಪಟ್ಟಂತೆ ಸಂಖ್ಯೆ ಮತ್ತು ಸಂಕೇತಗಳು:

(a) ಹಳ್ಳಿ, ಜಿಲ್ಲೆ, ಪ್ರಾಂತ್ಯ ಮತ್ತು ದೇಶದಲ್ಲಿ ಬೆಳೆದ ಹತ್ತಿಯ ಅಂಕಿಅಂಶಗಳು. ಹತ್ತಿಯ ರಫ್ತು ಹಾಗೂ ಹತ್ತಿಬಟ್ಟೆಯ ಆಮದು ಮತ್ತು ರಫ್ತಿನ ಪ್ರಮಾಣ.
(b) ಮೂಲ ಕರಕೌಶಲ್ಯದಲ್ಲಿ ನಿರತವಾಗಿರುವ ಹಳ್ಳಿ, ಜಿಲ್ಲೆ, ಪ್ರಾಂತ್ಯ ಮತ್ತು ಭಾರತ ದೇಶದ ಜನರ ಸಂಖ್ಯೆ.
(c) ಹತ್ತಿ ಮತ್ತು ಗೋಧಿ ಬೆಳೆಯುತ್ತಿರುವ ಪ್ರದೇಶಗಳು.

(ದೊಡ್ಡ ಸಂಖ್ಯೆಗಳ ಕೂಡುವಿಕೆ ಮತ್ತು ಕಳೆಯುವಿಕೆಯ ಸಮಸ್ಯೆಗಳು ಮತ್ತು ಚಟುವಟಿಕೆಗಳಿಗೆ ಈ ಅಂಕಿಅಂಶಗಳು ಸಾಮಗ್ರಿಯನ್ನು ಒದಗಿಸಬಲ್ಲವು).

- ಸಮಾನ ಸಂಖ್ಯೆಗಳ ಕೂಡುವಿಕೆ ಮತ್ತು ಕಳೆಯುವಿಕೆಯನ್ನು ಬೇಗನೆ ಮಾಡಲು ಸರಳವಾದ ವಿಧಾನವೆಂದರೆ ಗುಣಾಕಾರ ಮತ್ತು ಭಾಗಾಕಾರ ಎನ್ನುವುದನ್ನು ವಿತರಣೆಯ ಮೂಲಕ; ಹತ್ತಿಯ ಪಟ್ಟಿ, ಸುರುಳಿ ರಾಟೆ, ತಕಲಿ, ಮತ್ತು ಮೂಟೆಗಳನ್ನು ಹಿಂದಕ್ಕೆ ಪಡೆಯುವ ಮೂಲಕ; ಮತ್ತು ವಿತರಣೆಗೆ ಬೇಕಾದ ವಸ್ತುಗಳ ಸಂಖ್ಯೆ ಹಾಗೂ

ಗುಡ್ಡೆಯಿಂದ ಪ್ರತಿಯೊಂದು ವಿದ್ಯಾರ್ಥಿ ಪಡೆದಿರುವ ವಸ್ತುಗಳ ಸಂಖ್ಯೆಯ ಮೂಲಕ.

- ವಿದ್ಯಾರ್ಥಿ ಕರಕೌಶಲ್ಯದ ಚಟುವಟಿಕೆಗಳಲ್ಲಿ ಎದಿರಾಗುವ ತೂಕ ಹಾಕುವ ಮತ್ತು ಅಳತೆ ಮಾಡುವ ಕೆಲಸಗಳಲ್ಲಿ ತೂಕ ಮತ್ತು ಅಳತೆಯ ಕೋಷ್ಟಕಗಳನ್ನು ಕಲಿಯುವುದು.
- ಉರುಳೆ, ಶಂಕು, ಗೋಳ ಇತ್ಯಾದಿ ಘನ ಆಕಾರಗಳ ಪರಿಕಲ್ಪನೆಗಳ ಹೆಚ್ಚಿನ ಪರಿಚಯವನ್ನು ಚರಕದ ಮೂಲಕ ಸಷ್ಟಮಾಡಲು ಸಾಧ್ಯ.
- ಹತ್ತಿಯ ಅಥವಾ ಹತ್ತಿಬೀಜಗಳ ಗುಡ್ಡೆ ಹಾಕಿ ಕಾಲು, ಅರ್ಧ, ಮುಕ್ಕಾಲುಗಳ ಪರಿಕಲ್ಪನೆಯನ್ನು ಮಾಡಿ-ಕಲಿ ಮೂಲಕ ಕಲಿಸಿಕೊಡಲು ಸಾಧ್ಯ.
- ಏರುವಿಕೆ ಮತ್ತು ಇಳಿಯುವಿಕೆಗೆ ಸಂಬಂಧಪಟ್ಟ ಸಮಸ್ಯೆಗಳನ್ನು ಪ್ರತಿಯೊಂದು ಮಗು, ಪ್ರತಿ ತರಗತಿಗೆ ಮತ್ತು ಪ್ರತಿ ತರಗತಿಯು ನೂತ ನೂಲುಹುರಿಯ ಅಳತೆಗೆ ವೇತನವನ್ನು ಲೆಕ್ಕಮಾಡುವುದರ ಮೂಲಕ ಅಭ್ಯಾಸ ಮಾಡಿಸಬಹುದು.

## ಸಾಮಾಜಿಕ ಅಧ್ಯಯನ

1. ಬೌದ್ಧೀಯ ಭಾರತದಲ್ಲಿ ಬಳಸಲಾಗುತ್ತಿದ್ದ ಉಡುಪು (ಭಿಕ್ಕುಗಳು ತೊಡುತ್ತಿದ್ದ ಉಡುಪು).

    - ಪ್ರಾಚೀನ ಪರ್ಶಿಯ ಮತ್ತು ಗ್ರೀಸ್ ದೇಶಗಳ ಉಡುಪುಗಳು. ಪ್ರಾಚೀನ ಕಾಲದ ಉಡುಪಿನಲ್ಲಿ ಇದ್ದ ಸರಳತೆ ಮತ್ತು ಸೌಂದರ್ಯ (ಸಂಖ್ಯೆ 1).

2. ಉಡುಪಿನ ಮಹತ್ವ ಮತ್ತು ವರ್ಣನೆ (ಸಂಖ್ಯೆ 2 ರ ಅಡಿ, ಕೆಲಸದ ಉಡುಪು, ಬಿಡುವಿನ ಉಡುಪು ಮತ್ತು ಮಲಗುವಾಗ ಹಾಕಿಕೊಳ್ಳುವ ಉಡುಪು).
3. ಹಳ್ಳಿಯಲ್ಲಿ ನಡೆಯುವ ಬಟ್ಟೆಯ ಉತ್ಪಾದನೆ - ತಲಾ ಅಂದಾಜು ಎಷ್ಟು ಅವಶ್ಯಕ - ಹಳ್ಳಿಯಲ್ಲಿ ಉತ್ಪಾದಿಸಲ್ಪಡುವ ಬಟ್ಟೆಯ ಪ್ರಮಾಣ ಮತ್ತು ಹೊರಗಿನಿಂದ ಆಮದು ಮಾಡಿಕೊಳ್ಳುವ ಪ್ರಮಾಣ (ಸಂಖ್ಯೆ 3).

## ಸಾಮಾನ್ಯ ವಿಜ್ಞಾನ

ಹತ್ತಿಯ ಬೀಜ ಮೊಳಕೆ ಒಡೆಯುವುದನ್ನು ನಿರೂಪಿಸಲು ಹತ್ತಿ ಗಿಡದ ಪ್ರಯೋಗಗಳು (ಸಂಖ್ಯೆ I).

- ಹತ್ತಿಯ ಬೀಜ ಪ್ರಸಾರ (ಸಂಖ್ಯೆ II).
- ಹತ್ತಿಯ ಮೇಲೆ ಮನುಷ್ಯ ಬದುಕಿನ ಅವಲಂಬನ (ಸಂಖ್ಯೆ III).

- ಬಟ್ಟೆಗಳನ್ನು ಸ್ವಚ್ಛವಾಗಿ ಇಟ್ಟುಕೊಳ್ಳುವುದು ಹೇಗೆ - ಹಳ್ಳಿಯಲ್ಲಿ ಲಭ್ಯವಿರುವ ಅನೇಕ ಸಾಮಗ್ರಿಗಳನ್ನು ಉಪಯೋಗಿಸಿ ಸ್ವಚ್ಛ ಮಾಡಿಕೊಳ್ಳುವುದು.

## ಚಿತ್ರ ಬಿಡಿಸುವುದು

ಒಂದಾನೊಂದು ಕಾಲದ ಮನುಷ್ಯರ ಉಡುಗೆ ತೊಡುಗೆಗಳ ಚಿತ್ರ ಬಿಡಿಸುವುದು.

## ಮಾತೃಭಾಷೆ

ಕರಕೌಶಲ್ಯದ ಪ್ರಕ್ರಿಯೆಗಳ ಮೌಖಿಕ ವಿವರಣೆ ಮತ್ತು ಚರ್ಚೆ; ಕರಕೌಶಲ್ಯದ ಕೆಲಸಕ್ಕೆ ಕೊಟ್ಟಿರುವ ಲಿಖಿತ ಸೂಚನೆಗಳನ್ನು ಮನಸ್ಸಿನಲ್ಲಿಯೇ ಓದಿಕೊಳ್ಳುವುದು.

- ಪಠ್ಯದಲ್ಲಿರುವ ಓದಿಕೊಳ್ಳಲು ಸೂಕ್ತವಾಗಿರುವ ಭಾಗಗಳು.
- ಕರಕೌಶಲ್ಯದಲ್ಲಿ ಮಾಡಿರುವ ಕೆಲಸವನ್ನು ನಿತ್ಯ ದಾಖಲಿಸುವುದು.

# ತರಗತಿ

# IV

## ಗಣಿತ

ದೊಡ್ಡ ದೊಡ್ಡ ಸಂಖ್ಯೆಗಳನ್ನು ಜನರ ಉದ್ಯೋಗ ಗಣತಿಯಿಂದ ಮತ್ತು ಉತ್ಪಾದನೆ, ಆಮದು-ರಫ್ತು ಇತ್ಯಾದಿಗಳಿಗೆ ಸಂಬಂಧಪಟ್ಟ ಅಂಕಿಅಂಶಗಳಿಂದ ಪಡೆದುಕೊಳ್ಳುವುದು.

- ಕರಕೌಶಲ್ಯದಲ್ಲಿ ಗಳಿಸಿದ ವೇತನಗಳನ್ನು ಲೆಕ್ಕ ಹಾಕುವುದರಿಂದ ಮಕ್ಕಳಿಗೆ ಸಂಕೀರ್ಣ ಗುಣಾಕಾರದ ಪರಿಚಯವಾಗುತ್ತದೆ.
- ಕರಕೌಶಲ್ಯದ ಕೆಲಸದಲ್ಲಿ ಬಳಸಿದ ಸಾಮಗ್ರಿಗಳು, ಬಿಕರಿಯಾದ ವಸ್ತುಗಳು ಇತ್ಯಾದಿಗಳ ಲೆಕ್ಕ ಇಡುವುದರಿಂದ ಮಕ್ಕಳು ಸರಳವಾದ ಲೆಕ್ಕ ಇಡುವುದರ ಅಭ್ಯಾಸವನ್ನು ಬೆಳೆಸಿಕೊಳ್ಳುತ್ತಾರೆ.

## ಸಾಮಾಜಿಕ ಅಧ್ಯಯನ

ಹಳೆಯ ಕಾಲದಲ್ಲಿ ಭಾರತದಲ್ಲಿದ್ದ ಬಟ್ಟೆಯ ವ್ಯಾಪಾರ (ಸಂಖ್ಯೆ 1).

- ಹಳ್ಳಿ ಮತ್ತು ಜಿಲ್ಲೆಯಲ್ಲಿರುವ ಬಟ್ಟೆಯ ಉತ್ಪಾದನೆ ಮತ್ತು ಬಳಕೆಯ ಬಗ್ಗೆ ಹೆಚ್ಚಿನ ವಿವರಣೆಯನ್ನು ಒಳಗೊಂಡ ಮಾಹಿತಿ (ಸಂಖ್ಯೆ II: 1).
- ಜಿಲ್ಲೆಯ ಬಟ್ಟೆ ಉತ್ಪಾದನಾ ಕೇಂದ್ರಗಳು (II : 2).
- ಭಾರತದ ಚರಿತ್ರೆಯಲ್ಲಿ ಬಟ್ಟೆ ವ್ಯಾಪಾರದ ಪಾತ್ರ; ಭಾರತದಿಂದ ಪಶ್ಚಿಮಕ್ಕೆ ವ್ಯಾಪಾರ ಮಾರ್ಗಗಳ ಮಹತ್ವ; ಸಮುದ್ರಮಾರ್ಗವನ್ನು ಕಂಡುಹಿಡಿಯಬೇಕಾದಕ್ಕೆ ಪ್ರೇರಣೆ (II: 5).
- ಹಳ್ಳಿಯಲ್ಲಿ ಮತ್ತು ಜಿಲ್ಲೆಯಲ್ಲಿ ಬಟ್ಟೆ ಉತ್ಪಾದಿಸುವವರ ಸಂಖ್ಯೆ; ಅಗತ್ಯವಿರುವ ಒಟ್ಟು ಬಟ್ಟೆಯನ್ನು ಉತ್ಪಾದಿಸಲು ಬೇಕಾದ ಉತ್ಪಾದಿಸುವವರ ಸಂಖ್ಯೆ; ಉತ್ಪಾದನೆಯ ವಿಧಾನಗಳಲ್ಲಿನ ವ್ಯತ್ಯಾಸಗಳೊಂದಿಗೆ ಈ ಸಂಖ್ಯೆಯಲ್ಲಿ ವ್ಯತ್ಯಾಸಗಳಾಗುವುದು; ಬಟ್ಟೆ ಮಿಲ್ಲುಗಳು, ಗ್ರಾಮೀಣ ಜನರ ಪಟ್ಟಣ ವಲಸೆ - ಅದರ ಪ್ರಮಾಣ, ಅಪಾಯಗಳು, ಯೋಜನೆಯ ಅಗತ್ಯತೆ (III : ಚಿ).

## ಸಾಮಾನ್ಯ ವಿಜ್ಞಾನ

ಸಂಖ್ಯೆ 1 ನ್ನು ನಿರೂಪಿಸಲು ಹತ್ತಿಗಿಡದ ಪ್ರಯೋಗ.

- ಹತ್ತಿಯ ನಾರುಗಳ ನಡುವಿನ ಜಾಗವನ್ನು ಗಾಳಿ ಆಕ್ರಮಿಸಿಕೊಳ್ಳುತ್ತದೆ ಎನ್ನುವುದನ್ನು ತೋರಿಸಲು ಪ್ರಯೋಗ; ಹಿಂಜಿ ಎಳೆ ಬಿಡಿಸಿದ ಹತ್ತಿ; ನಡುವಿನ ಜಾಗವನ್ನು ಹೆಚ್ಚು ಗಾಳಿ ಆಕ್ರಮಿಸಿಕೊಂಡಿರುತ್ತದೆ; ಗಾಳಿ, ಶಾಖದ ವಾಹಕವಲ್ಲ; ಕೌದಿ ಮತ್ತು ರಜಾಯಿ (Iಗಿ).

## ಚಿತ್ರಕಲೆ

ಸಾಮಾಜಿಕ ಅಧ್ಯಯನದಲ್ಲಿ ಬರುವ ಕರಕೌಶಲ್ಯಗಳ ಮಾಹಿತಿಯನ್ನು ಸಚಿತ್ರವಾಗಿ ನಿರೂಪಿಸಲು ಪೋಸ್ಟರು ಮತ್ತು ಚಾರ್ಟುಗಳನ್ನು ಮಾಡುವುದು.

## ಮಾತೃಭಾಷೆ

ಮೇಲೆ ಹೇಳಿದ ಸಾಮಾಜಿಕ ಅಧ್ಯಯನದ ಅಡಿಯಲ್ಲಿನ ಮಾಹಿತಿಯನ್ನು ಮೌಖಿಕ ನಿರೂಪಣೆ ಮತ್ತು ಚರ್ಚೆಗೆ ಒಳಪಡಿಸುವುದು. ಪಠ್ಯಪುಸ್ತಕದಲ್ಲಿ ಸಂಬಂಧಪಟ್ಟ ಅಂಶಗಳನ್ನು ಓದುವ ವಿಷಯವಾಗಿ ಸೇರಿಸುವುದು ಮತ್ತು ಹೆಚ್ಚಿನ ಓದಿಗಾಗಿ ಪುಸ್ತಕಗಳನ್ನು ಸೂಚಿಸುವುದು (II:a).

- ಸಾಮಾಜಿಕ ಅಧ್ಯಯನದಲ್ಲಿ ಕಲಿತ ಸಂಬಂಧಿತ ವಾಸ್ತವಾಂಶಗಳ ಬಗ್ಗೆ ಬರೆಯುವುದು; ಕಲಿತ ಕರಕೌಶಲ್ಯದಲ್ಲಿನ ಪ್ರಕ್ರಿಯೆಗಳನ್ನು ಮತ್ತು ಸಾಮಾನ್ಯ ವಿಜ್ಞಾನದಲ್ಲಿನ ಪ್ರಯೋಗಗಳನ್ನು ವಿವರಿಸುವುದು; ಅಗತ್ಯ ಮಾಹಿತಿಗಾಗಿ ಸಂಬಂಧಪಟ್ಟ ಕೇಂದ್ರಗಳಿಗೆ ಸರಳವಾದ

ಪತ್ರಗಳನ್ನು ಬರೆಯುವುದು. ಉದಾಹರಣೆಗೆ, AISA, AIVIA; ಜಿಲ್ಲಾ ಪರಿಷತ್ ಅಥವಾ ಹಳ್ಳಿ ಪಂಚಾಯತ್ (III:c).

- ಕರಕೌಶಲ್ಯದಲ್ಲಿ ಪ್ರತಿ ವಿದ್ಯಾರ್ಥಿ ಮತ್ತು ಪ್ರತಿ ತರಗತಿ ಸಾಧಿಸಿದ ಪ್ರಗತಿಯ ದಿನನಿತ್ಯದ ಮತ್ತು ಮಾಸಿಕ ದಾಖಲೆಯನ್ನು ಇಡುವುದು (III:d).

## ತರಗತಿ

## V

### ಗಣಿತ

ವೇತನ, ನೂತ ನೂಲಿನ ಪ್ರಮಾಣ, ವಾರ್ಷಿಕ ಉತ್ಪಾದನೆ ಮತ್ತು ಖರ್ಚುಗಳನ್ನು ಲೆಕ್ಕ ಹಾಕುವುದಕ್ಕೆ ಸಂಬಂಧಿಸಿದಂತೆ ಪ್ರಾಯೋಗಿಕ ಸಮಸ್ಯೆಗಳನ್ನು ನೀಡುವುದು.

- ನೂಲಿನ ಬೆಲೆ, ಬಟ್ಟೆ ಮತ್ತು ವೇತನಗಳಿಗೆ ಸಂಬಂಧಪಟ್ಟಂತೆ ಲೆಕ್ಕ ಹಾಕುವ ವಿಧಾನವನ್ನು ಅಭ್ಯಾಸ ಮಾಡುವುದು.
- ಶಾಲೆಯ ಸಹಕಾರ ಅಂಗಡಿ ಮತ್ತು ಮೂಲ ಕರಕೌಶಲ್ಯದ ಕೆಲಸಗಳಿಗೆ ಸಂಬಂಧಪಟ್ಟಂತೆ ವಿವರಣಾಪೂರ್ಣವಾದ ಲೆಕ್ಕಪತ್ರಗಳನ್ನು ಇಡುವುದನ್ನು ಮುಂದುವರಿಸುವುದು.

### ಸಾಮಾಜಿಕ ಅಧ್ಯಯನ

ಇಸ್ಲಾಮ್ ಧರ್ಮದ ಪ್ರವಾದಿಯ ಸರಳ ಉಡುಪು; ಆ ಕಾಲದ ಅರೇಬಿಯಾದಲ್ಲಿ ಬಟ್ಟೆಯನ್ನು ಹೇಗೆ ಉತ್ಪಾದಿಸುತ್ತಿದ್ದರು (I,a).

- ಇಂಡೋ-ಮುಸ್ಲಿಮ್ ಉಡುಪು; (I, d, ii). ಬಟ್ಟೆ ಉತ್ಪಾದನೆಯಲ್ಲಿ ಸುಧಾರಣೆ; ನೇಯ್ಗೆ, ಬಣ್ಣ ಹಾಕುವುದು ಮತ್ತು ಅಚ್ಚೊತ್ತುವುದು; ಕಾರ್ಪೆಟ್ ತಯಾರಿಕೆ; (I, d, vi). ಹವಾಮಾನ ಮತ್ತು ಭೌಗೋಳಿಕ ಮೇಲ್ಮೈ ಲಕ್ಷಣಗಳ ಸಮೇತ ಬಟ್ಟೆ ವ್ಯಾಪಾರದ ಪ್ರಮುಖ ಕೇಂದ್ರಗಳ ಅರಿವು (I); ಸರ್ಕಾರ ನೀಡುತ್ತಿದ್ದ ರಕ್ಷಣೆ ಮತ್ತು ಆಶ್ರಯ; ಬಟ್ಟೆ ವ್ಯಾಪಾರದ ಭೂಮಾರ್ಗ ಮತ್ತು ಸಮುದ್ರಮಾರ್ಗಗಳು; ಪಶ್ಚಿಮದೊಂದಿಗೆ ವೃದ್ಧಿಸುತ್ತಿದ್ದ ವ್ಯಾಪಾರ; ಖಾಸಗಿ ಸ್ವಾಮ್ಯದ ಮತ್ತು ಸರ್ಕಾರಿ ಸ್ವಾಮ್ಯದ ಕೈಗಾರಿಕೆಗಳು.
- ಜಗತ್ತಿನಲ್ಲಿ ಬಟ್ಟೆ, ಹತ್ತಿ ಮತ್ತು ಉಣ್ಣೆ ಉತ್ಪಾದನೆಗಳನ್ನು ಮಾಡುತ್ತಿದ್ದ ಬೇರೆ ಬೇರೆ ಭೂಪ್ರದೇಶಗಳ ಅಧ್ಯಯನ; (II, 4).

- ಸಂಖ್ಯೆ III ಇಡೀ ಭಾಗ.
- ಸಹಕಾರಿ ಆಧಾರದ ಮೇಲೆ ಖಾದಿ ಬಟ್ಟೆಯ ಮಾರಾಟವನ್ನು ಆಯೋಜಿಸುವ ಸಾಧ್ಯತೆಗಳು; ಜಿಲ್ಲೆಯಲ್ಲಿ ಅದರ ಉತ್ಪಾದನೆ ಮತ್ತು ಮಾರಾಟದ ಯೋಜನೆ; ಭಾರತದ ಇಂದಿನ ಆರ್ಥಿಕ ಸನ್ನಿವೇಶದಲ್ಲಿ ಖಾದಿಯ ಮಹತ್ವ.

**ಸಾಮಾನ್ಯ ವಿಜ್ಞಾನ**

ಸಂಖ್ಯೆ I ರಲ್ಲಿ ಸೂಚಿಸಿದಂತೆ ಹತ್ತಿಗಿಡದ ಬಗ್ಗೆ ಹೆಚ್ಚು ವಿವರಣಾತ್ಮಕ ಅರಿವು.

**ಚಿತ್ರಕಲೆ**

ಈ ಮೇಲೆ ಸೂಚಿಸಿದ ಅಂಶಗಳಿಗೆ ಸಂಬಂಧಪಟ್ಟಂತೆ ಸಾಮಾಜಿಕ ಅಧ್ಯಯನ ಮತ್ತು ಸಾಮಾನ್ಯ ವಿಜ್ಞಾನದ ಸಂಬಂಧಿತ ಮಾಹಿತಿಗೆ ಸಚಿತ್ರ ನಿರೂಪಣೆಯನ್ನು ಒದಗಿಸುವುದು.

- ಹತ್ತಿ ಎಲೆ ಮತ್ತು ಬೀಜಕೋಶವನ್ನು ಹತ್ತಿರದಿಂದ ಗಮನಿಸಿ ಪೆನ್ಸಿಲ್, ಇಂಕ್ ಮತ್ತು ಬಣ್ಣದಲ್ಲಿ ಮೂಡಿಸುವುದು.

**ಮಾತೃಭಾಷೆ ಮತ್ತು ಹಿಂದೂಸ್ತಾನಿ**

ಪಠ್ಯಪುಸ್ತಕದಲ್ಲಿ ಸಂಬಂಧಪಟ್ಟ ಅಂಶಗಳನ್ನು ಓದುವ ವಿಷಯವಾಗಿ ಸೇರಿಸುವುದು ಮತ್ತು ಹೆಚ್ಚಿನ ಓದಿಗಾಗಿ ಪುಸ್ತಕಗಳನ್ನು ಸೂಚಿಸುವುದು.

- ಖಾದಿ ಉತ್ಪಾದನೆ ಮತ್ತು ಮಾರಾಟಗಳ ಬಗ್ಗೆ ಅಗತ್ಯವಾದ ಮಾಹಿತಿ ಹಾಗೂ ಸಹಕಾರಿ ಸಂಘಗಳನ್ನು ಆಯೋಜಿಸುವ ಸಾಧ್ಯತೆಗಳ ಬಗ್ಗೆ ವಿವಿಧ ಸಂಘಸಂಸ್ಥೆಗಳಿಗೆ ಪತ್ರಗಳನ್ನು ಬರೆಯುವುದು.
- ಕರಕೌಶಲ್ಯದ ಕೆಲಸಕ್ಕೆ ಸಂಬಂಧಪಟ್ಟಂತೆ ಅಗತ್ಯವಾದ ದಾಖಲೆಗಳನ್ನು ಇಡುವುದು.
- ಕರಕೌಶಲ್ಯಕ್ಕೆ ಸಂಬಂಧಪಟ್ಟ ಸಲಕರಣೆಗಳ ಮತ್ತು ಪ್ರಕ್ರಿಯೆಗಳ ಹಿಂದೂಸ್ತಾನಿ ಹೆಸರುಗಳನ್ನು ಕಲಿಯುವುದು.

# ತರಗತಿ

# ೧೧

## ಗಣಿತ

ಶಾಲಾ ಅಂಗಡಿಯಲ್ಲಿ ಕೆಲಸ ಮಾಡುವ ಮೂಲಕ ಲಾಭ-ನಷ್ಟದ ಸಮಸ್ಯೆಗಳನ್ನು ಪರಿಚಯಿಸುವುದು.

- ಕರಕೌಶಲ್ಯದ ಕೆಲಸದಲ್ಲಿ ತ್ಯಾಜ್ಯದ ಶೇಕಡಾವಾರು.
- ಚರಕ ಮಾಡಲು ಬೇಕಾಗಿರುವ ಮರದ ಘನ ಅಳತೆಯ ಲೆಕ್ಕ. ಶಂಕು, ಘನಾಭ, ಉರುಳೆಯ ಘನ ಅಳತೆಗಳು. ವಿಸ್ತೀರ್ಣವನ್ನು ಕಂಡುಹಿಡಿಯುವುದು.

## ಸಾಮಾಜಿಕ ಅಧ್ಯಯನ

ಪಶ್ಚಿಮಕ್ಕೆ ಹತ್ತಿಯ ತೀವ್ರ ಅಗತ್ಯ; ಭಾರತವನ್ನು ಬ್ರಿಟಿಷ್ ಆಕ್ರಮಿಸಿಕೊಂಡ ಸಂಪೂರ್ಣ ಕಥೆÉ.

- ದರಿಗಳನ್ನು ಮಾಡಲು ಬೇಕಾದ ಬಟ್ಟೆಯ ಬೆಲೆ; ಉಡುಪುಗಳನ್ನು ಮಾಡಲು ಬೇಕಾದ ಬೆಲೆ.
- ಈಸ್ಟ್ ಇಂಡಿಯಾ ಕಂಪೆನಿಯ ಹುಟ್ಟಿನ ಮೂಲ ಕಾರಣಗಳು; ಮೊದಲ ವ್ಯಾಪಾರ ರಿಯಾಯಿತಿಗಳು; ಯುರೋಪೀಯ ಕಂಪೆನಿಗಳು ಮತ್ತು ಕಾರ್ಮಿಕರ ನಡುವಿನ ಸಂಬಂಧ; ಈಸ್ಟ್ ಇಂಡಿಯಾ ಕಂಪೆನಿ ಮತ್ತು ಭಾರತದ ವರ್ತಕರು; ಭಾರತದ ರೈತ, ಕಾರ್ಮಿಕ ಮತ್ತು ವ್ಯಾಪಾರಸ್ಥರ ಶೋಷಣೆ; ಕೈಗಾರಿಕಾ ಕ್ರಾಂತಿ; ಭಾರತದ ವ್ಯಾಪಾರದೊಂದಿಗೆ ಪೈಪೋಟಿ; ಇಂಗ್ಲೆಂಡಿನಲ್ಲಿ ಭಾರತದ ಜವಳಿಯ ವಿರುದ್ಧ ರಕ್ಷಣೆ (I, c,d ).
- ಭಾರತೀಯ ರಾಷ್ಟ್ರೀಯ ಚಳುವಳಿ; ಸ್ವದೇಶಿ ಚಳುವಳಿ; ಗಾಂಧೀಜಿನ ನೇತೃತ್ವದಡಿ ಸ್ವದೇಶಿ; ಭಾರತೀಯ ಸ್ವಾತಂತ್ರ್ಯದ ಸಂಕೇತಗಳಾಗಿ ಚರಕ ಮತ್ತು ಖಾದಿ; ಖಾದಿಯ ಆರ್ಥಿಕತೆ (I : 3). I, 4 ರ ಇಡೀ ಭಾಗ.
- ಹಳ್ಳಿಯ ವಯಸ್ಕರಿಗೆ ಕರಕೌಶಲ್ಯ ತರಬೇತಿ ಕೇಂದ್ರಗಳನ್ನು ಆಯೋಜಿಸುವುದು.
- ವಿವಿಧ ತಳಿಯ ಹತ್ತಿ ಮತ್ತು ಜಗತ್ತಿನ ಯಾವ ಭಾಗಗಳಲ್ಲಿವೆ; ಭೂಪಟದಲ್ಲಿ ಸೂಚಿಸುವುದು ಮತ್ತು ವಿವಿಧ ರೀತಿಯ ಹತ್ತಿ ತಳಿಗಳ ಸಂಗ್ರಹ; ಹತ್ತಿ ಬೆಳೆಯಲು ಸೂಕ್ತವಾದ ಹವಾಮಾನ ಪರಿಸ್ಥಿತಿ - ಉದಾಹರಣೆಗೆ ಮಣ್ಣು, ತೇವಾಂಶ, ತಾಪಮಾನ; ಭೌಗೋಳಿಕ ನಿಯಂತ್ರಣ ಎಂಬ ಪರಿಕಲ್ಪನೆ; ಭಾರತೀಯ ಹತ್ತಿಗೆ ಸಂಬಂಧಿಸಿದಂತೆ

ಆಮದು-ರಫ್ತುಗಳ ಅಂಕಿಅಂಶಗಳು; ಹತ್ತಿ ಬೆಳೆಯುವ ಮತ್ತು ಬಟ್ಟೆ ಉತ್ಪಾದಿಸುವ ಜಗತ್ತಿನ ವಿವಿಧ ದೇಶಗಳ ನಡುವೆ ಆಮದು-ರಫ್ತು (II).

- ಕಚ್ಚಾವಸ್ತುಗಳಿಗೆ ಮತ್ತು ಮಾರುಕಟ್ಟೆಗಳಿಗೆ ಕಚ್ಚಾಟ; ಈ ಹಿನ್ನೆಲೆಯಲ್ಲಿ ಪ್ರಸಕ್ತ ಘಟನೆಗಳೊಂದಿಗೆ ಸಹಸಂಬಂಧಿಸುವುದು. ಉದಾಹರಣೆಗೆ ಅಬಿಸ್ಸಿನ್ಯಾ (Abyssinia), ಮಂಚೂರಿಯ, ಚೈನಾಗಳ ಆಕ್ರಮಣ.

**ಸಾಮಾನ್ಯ ವಿಜ್ಞಾನ**

ನೀರಿನ ಭೌತಿಕ ಲಕ್ಷಣಗಳು; ಅದರ ರಾಸಾಯನಿಕ ಸಂಯೋಜನೆ ಹಾಗೂ ನಿರಾವರಿಗೆ ಬೇಕಾಗುವ ಯಾಂತ್ರಿಕ ಸಾಧನಗಳನ್ನು ಹತ್ತಿಯ ಭೌಗೋಳಿಕತೆಯ ಹಿನ್ನೆಲೆಯಲ್ಲಿ ಓದುವುದು; ಸಂಖ್ಯೆ (I) ನ್ನು ಹತ್ತಿ ಹತ್ತಿಗೆ ಸಂಬಂಧಿಸಿ ಓದುವುದು; ಕೀಟಗಳು; ಉಪಯುಕ್ತ ಹಾಗೂ ಉಪದ್ರವಿ ಕೀಟಗಳ ಬಗ್ಗೆ ಅಧ್ಯಯನ ಮಾಡುವುದು.

**ಚಿತ್ರಕಲೆ**

ಖಾದಿಯನ್ನು ಜನಪ್ರಿಯಗೊಳಿಸಲು ಅಭಿಯಾನವನ್ನು ಆಯೋಜಿಸಿ ಪೋಸ್ಟರುಗಳನ್ನು ತಯಾರಿಸುವುದು; ಕರಕೌಶಲ್ಯಕ್ಕೆ ಸಂಬಂಧಿಸಿದಂತೆ ಪ್ರಮಾಣಕ್ಕೆ ತಕ್ಕ ರೇಖಾಚಿತ್ರಗಳನ್ನು ಬಿಡಿಸುವುದು.

**ಮಾತೃಭಾಷೆ ಮತ್ತು ಹಿಂದೂಸ್ತಾನಿ**

ಸಾಮಾಜಿಕ ಅಧ್ಯಯನ ಮತ್ತು ಸಾಮಾನ್ಯ ವಿಜ್ಞಾನದ ಅಡಿ ಮೇಲೆ ಸೂಚಿಸಿರುವ ಅಂಶಗಳಿಗೆ ಹೊಂದಿಕೊಂಡಂತೆ ಆಸಕ್ತಿ ಹುಟ್ಟಿಸುವ ಮತ್ತು ಮಾಹಿತಿಪೂರ್ಣ ಓದುವ ಸಾಮಗ್ರಿಗಳನ್ನು ಪಠ್ಯಪುಸ್ತಕದ ಮತ್ತು ಹೆಚ್ಚುವರಿ ಓದಿನ ಪುಸ್ತಕಗಳಲ್ಲಿ ನೀಡಬೇಕು. ಬರವಣಿಗೆಯ ಚಟುವಟಿಕೆಗಳೂ ಸಹ ಕರಕೌಶಲ್ಯ ಮತ್ತು ಇತರ ಕೆಲಸಗಳು ಮೂಡಿಸಿರುವ ಆಸಕ್ತಿಗಳಿಗೆ ನಿಕಟವಾಗಿ ಸಹಸಂಬಂಧಿಸಿರಬೇಕು.

## ತರಗತಿ

## VII

**ಗಣಿತ**

ಹಾಕಿರುವ ಬಡ್ಡಿಯ ದರವನ್ನು ಮತ್ತು ಬಡ್ಡಿಯನ್ನು ಲೆಕ್ಕ ಹಾಕುವುದನ್ನು ಮಕ್ಕಳು ಅರಿಯಬೇಕು. ಶಾಲೆಯ ಉಳಿತಾಯ ಬ್ಯಾಂಕನ್ನು ನಡೆಸುವ ಜವಾಬ್ದಾರಿಯನ್ನು ಮಕ್ಕಳಿಗೆ ನೀಡಿದಾಗ ಈ ಲೆಕ್ಕಾಚಾರಗಳ ಅಗತ್ಯವು ಮತ್ತಷ್ಟು ಮುಖ್ಯವಾಗುತ್ತದೆ. ಮೂಲ ಕರಕೌಶಲ್ಯಕ್ಕೆ

ಸಂಬಂಧಿಸಿದಂತೆ ಕಾಲ, ವೇಗ ಮತ್ತು ಕೆಲಸಗಳ ಪ್ರಾಯೋಗಿಕ ಸಮಸ್ಯೆಗಳನ್ನು ನೀಡುವುದು.

- ಕರಕೌಶಲ್ಯದ ಕೆಲಸದಲ್ಲಿ ಮತ್ತು ಇತರ ಶೈಕ್ಷಣಿಕ ವಿಷಯಗಳಲ್ಲಿ ವಿದ್ಯಾರ್ಥಿಗಳು ಸಾಧಿಸಿರುವ ಪ್ರಗತಿಯನ್ನು ದಶಾಂಶ ಸೂಚಕ ರೇಖೆ ಮೂಲಕ ನಿರೂಪಿಸುವುದು. ಬಟ್ಟೆ ತಯಾರಿಕೆಯಲ್ಲಿ ವರ್ಗಮೂಲದ ಲೆಕ್ಕಾಚಾರ; ನೇಯ್ಗೆಯ ಅಡ್ಡ ಎಳೆ, ಉದ್ದ ಎಳೆ, ಪೂಂಜಮ್, ಲಡಿ ಇವುಗಳ ಪರಸ್ಪರ ಸಂಬಂಧ.

## ಸಾಮಾಜಿಕ ಅಧ್ಯಯನ

ಜವಳಿ ಉದ್ದಿಮೆಯ ಮೇಲೆ ಕೈಗಾರಿಕಾ ಕ್ರಾಂತಿ ಬೀರಿದ ಪರಿಣಾಮ (ಸಂಖ್ಯೆ I, 1, iii).

- ಉಡುಪಿನ ಮೇಲೆ ವೈಜ್ಞಾನಿಕ ಮತ್ತು ತಾಂತ್ರಿಕ ಬೆಳವಣಿಗೆಗಳು ಬೀರಿದ ಪರಿಣಾಮ (ಸಂಖ್ಯೆ I, 1, iv).
- ಹತ್ತಿ ಬೆಳೆಯುವ ಭೂಪ್ರದೇಶಗಳಿಗಾಗಿ ಮತ್ತು ಜವಳಿ ಮಾರುಕಟ್ಟೆಗಳಿಗಾಗಿ ನಡೆದ ಕಚ್ಚಾಟದ ಹಿನ್ನೆಲೆಯಲ್ಲಿ ಕೈಗಾರಿಕೀಕರಣ ಮತ್ತು ಸಾಮ್ರಾಜ್ಯಶಾಹಿ ವಿಸ್ತರಣೆಯ ಕಥೆÉಯನ್ನು ಅರ್ಥ ಮಾಡಿಕೊಳ್ಳುವುದು (ಸಂಖ್ಯೆ 2, i ಮತ್ತು 2, ii).
- ಮಹಾಯುದ್ಧ (2, iii).
- ಹತ್ತಿ ಬೆಳೆಯುವ ಪ್ರದೇಶಗಳ ಬೆಳವಣಿಗೆ. ಜಗತ್ತಿನ ಹತ್ತಿ ಉತ್ಪಾದನೆ ಮತ್ತು ಬಟ್ಟೆಯ ಆಮದು ಮತ್ತು ರಫ್ತು (IV).
- ಹತ್ತಿಯನ್ನು ಬೆಳೆಯುವ ವಿವಿಧ ವಿಧಾನಗಳು; ವ್ಯಕ್ತಿಗತ ಮತ್ತು ಸಾಮೂಹಿಕ ಬೇಸಾಯ; ಭೂ ಹಿಡುವಳಿಯ ವ್ಯವಸ್ಥೆ (2.iv); ಈಜಿಪ್ಟ್ ಮತ್ತು ಅಮೆರಿಕಾದ ದಕ್ಷಿಣ ಭಾಗದಲ್ಲಿ ಹತ್ತಿ ಬೆಳೆ; ಗುಲಾಮಿ ಪದ್ಧತಿಗೆ ಅದರ ಸಂಬಂಧ. ಅಂತರ್ಯುದ್ಧ (3, iii).
- ಭಾರತ ಮತ್ತು ಇತರ ದೇಶಗಳಲ್ಲಿ ನೇಯುವ ವಿಧಾನದ ಇತಿಹಾಸ (ಸಂಖ್ಯೆ v).

## ಸಾಮಾನ್ಯ ವಿಜ್ಞಾನ

ಬಟ್ಟೆಗಳ ಬಿಳುಚುವಿಕೆ, ಬಣ್ಣ ಹಾಕುವಿಕೆ ಮತ್ತು ಅಚ್ಚೊತ್ತುವಿಕೆ.

- ನೂಲುವ ಮತ್ತು ನೇಯುವ ವಿಧಾನದ ಬೆಳವಣಿಗೆಗೆ ಸಂಬಂಧಿಸಿದಂತೆ ಯಾಂತ್ರಿಕ ಸಾಧನದ ಕೆಲವು ಅನ್ವಯವಾಗುವ ಭಾಗಗಳು (ಸಂಖ್ಯೆ VIII).

**ಚಿತ್ರಕಲೆ**

ಕರಕೌಶಲ್ಯದ ತರಗತಿಯಲ್ಲಿ ಚಿತ್ರ ಬಿಡಿಸುವುದು ಮತ್ತು ವಸ್ತು ವಿಭಾಗಗಳ (section drawing) ರೇಖಾಚಿತ್ರವನ್ನು ಬಿಡಿಸುವುದು.

**ಮಾತೃಭಾಷೆ ಮತ್ತು ಹಿಂದೂಸ್ಥಾನಿ**

ತರಗತಿ IV ರಲ್ಲಿ ಸೂಚಿಸಿದ ಪಠ್ಯಕ್ರಮದಂತೆಯೇ .